# ವಸಂತದ ಚಿಗುರು

(ಸಾಮಾಜಿಕ ಕಾದಂಬರಿ)

ಪದ್ಮಾ ಶ್ರೀಧರ್

ಚೈತ್ರ ಪ್ರಕಾಶನ
ನೆಲೆ, ನಂ. 22, 6ನೇ ಅಡ್ಡರಸ್ತೆ, ಕಾಮಾಕ್ಯ ಬಡಾವಣೆ,
ಬೆಂಗಳೂರು – 560 085

*Vasanthada Chiguru* *(Kannada)*: a social novel by
Smt. Padma Sridhar; published by Chaitra Prakashana, Nele, No. 22,
6th Cross, Kamakya Layout, Bangalore - 560 085, India.

First print : 2012


ಸಗಟು ಮಾರಾಟಗಾರರು
ವಸಂತ ಪ್ರಕಾಶನ
# 360, 10ನೇ 'ಬಿ' ಮುಖ್ಯರಸ್ತೆ, 3ನೇ ಬ್ಲಾಕ್,
ಜಯನಗರ, ಬೆಂಗಳೂರು – 560 011.
ದೂರವಾಣಿ : 080–22443996
email : vasantha_prakashana @rediffmail.com

ಪ್ರಥಮ ಮುದ್ರಣ : 2012
ಉಪಯೋಗಿಸಿದ ಕಾಗದ : 70 ಜಿಎಸ್‌ಎಂ ಮ್ಯಾಪ್‌ಲಿಥೊ
ಪುಟಗಳು : 178 ಬೆಲೆ : ರೂ. 110

ಅಕ್ಷರ ಜೋಡಣೆ : ಪ್ರಶಾಂತ್ ಎಂಟರ್‌ಪ್ರೈಸಸ್
ಮುದ್ರಣ : ಶ್ರೀ ವಿದ್ಯಾಮಾನ್ ಪ್ರಿಂಟೆಕ್ಸ್

# ಮುನ್ನುಡಿ

ಪ್ರಿಯ ಓದುಗರೇ,

ನಮಸ್ಕಾರಗಳು,

'ವಸಂತದ ಚಿಗುರು' ಒಂದು ಸಾಮಾಜಿಕ ಕಾದಂಬರಿ.

ಕೌಟುಂಬಿಕ ಪಾತ್ರಗಳನ್ನು ಒಳಗೊಂಡ ಈ ಕಾದಂಬರಿಯು ಓದುಗರಿಗೆ ಇಷ್ಟವಾಗುತ್ತದೆ ಎಂಬ ಆಶಯ ನನ್ನದು. 'ಬಾಡಿಗೆ ತಾಯಿ'ಗೆ ಮಗಳಾಗಿ ಹುಟ್ಟಿದ ಚೈತ್ರಗಳಿಗೆ ತಾನು ಬೆಳೆದ ಮನೆಯವರಲ್ಲಿ ಯಾರೂ ತನ್ನವರಲ್ಲ ಎಂಬ ಭಾವನೆ ಮೂಡುತ್ತದೆ. ಶರತ್ ತನ್ನ ಸ್ವಂತ ಅಣ್ಣನಲ್ಲ, ತನಗೆ ಜನ್ಮ ನೀಡಿದ ತಾಯಿಯನ್ನು ಸ್ವಂತ ತಾಯಿಯೆಂದು ಒಪ್ಪಿಕೊಳ್ಳಲು ಮನಸ್ಸು ಒಪ್ಪುವುದಿಲ್ಲ, ತಾನು ಪ್ರೀತಿಸಿದ ಚಿದಾನಂದನನ್ನು ತನ್ನ ಅಣ್ಣನೆಂದು ಗುರುತಿಸಿಕೊಳ್ಳಲು ಕಷ್ಟವೆನಿಸುತ್ತದೆ. ಅಣ್ಣನ ತಂತ್ರಕ್ಕೆ ಒಳಗಾಗಿ, ಮದುವೆಯಾದವನನ್ನು ಪ್ರೀತಿಸುವುದು ಅಸಾಧ್ಯ ಎನಿಸುತ್ತದೆ. ಈ ಪರಿಸರದಿಂದ ದೂರವಾಗಬೇಕೆನಿಸುತ್ತದೆ.

ಕುಡಿಯೊಡೆದ ವಸಂತದ ಚಿಗುರು, ಹೊಸ ಬಳ್ಳಿಯಾಗಿ ಬೇರೊಂದು ವೃಕ್ಷವನ್ನು ಸುತ್ತಿ ಬೆಳೆಯುವುದೇ ಈ ಕಾದಂಬರಿಯ ಕಥಾವಸ್ತು.

ಹಾಗೆಯೇ ಚೈತ್ರಾ ಜೀವನದ ಆರಂಭ.

ಈ ಕಾದಂಬರಿಯನ್ನು ಪ್ರಕಟಿಸುತ್ತಿರುವ ಪ್ರಕಾಶನ ಸಂಸ್ಥೆಯ ಬಳಗದವರಿಗೆ ನನ್ನ ಧನ್ಯವಾದಗಳು. ಎಲ್ಲರಿಗೂ ಹೊಸ ವರ್ಷದ ಶುಭಾಶಯಗಳು.

ಪದ್ಮಾ ಶ್ರೀಧರ್

ಗಂಡ ಯಶವಂತನಿಗಾಗಿ ಕಾಯುತ್ತಾ ಕುಳಿತಿದ್ದ ರಾಜಲಕ್ಷ್ಮಿ, ಮನೆಯ ಮುಂದೆ ಆಟೋ ನಿಂತ ಸದ್ದನ್ನು ಕೇಳಿದ ಕೂಡಲೇ, ತೊಡೆಯ ಮೇಲೆ ಕುಳಿತಿದ್ದ ಶರತ್‌ನನ್ನು ಪಕ್ಕದಲ್ಲಿ ಕೂರಿಸಿ, ಬಾಗಿಲ ಬಳಿಗೆ ನಡೆದಳು. ಮುಂಬಾಗಿಲು ಕರೆಗಂಟೆ ಬಾರಿಸುವ ಮೊದಲೇ ಬಾಗಿಲನ್ನು ತೆರೆದಳು. ಬಾಗಿಲ ಮುಂದೆ ನಿಂತಿದ್ದ ಗಂಡನ ಮುಖವನ್ನು ಕಂಡೊಡನೆ ಸಂತಸದಿಂದ ಅವಳ ಕಣ್ಣುಗಳು ಅರಳುವ ಮೊದಲೇ ಅವನ ಬೆನ್ನ ಹಿಂದೆ ನಿಂತಿದ್ದ ಯುವತಿಯತ್ತ ಹೊರಳಿದವು.

ಸುಂದರ ಯುವತಿ ! ಅವಳ ಸೊಂಟದಲ್ಲೊಂದು ಮಗು. ಶಂಕೆಯ ನೋಟವನ್ನು ಗಂಡನೆಡೆಗೆ ಹರಿಸಿದಳು. ಅಷ್ಟರಲ್ಲಿ ಯಶವಂತ ಒಳಕ್ಕೆ ಬಂದಿದ್ದ.

''ರಾಜೀ, ಅವರನ್ನು ಒಳಕ್ಕೆ ಕರಿ. ಮಗೂಗೆ ಮೊದಲು, ಹಾಲನ್ನು ಕುಡಿಸಲು ಕೊಡು. ಪಾಪ ಹಸಿವಾಗಿರಬಹುದು'' , ರಾಜಲಕ್ಷ್ಮಿ ಎರಡು ಹೆಜ್ಜೆ ಹಿಂದಕ್ಕೆ ಸರಿದು ಸುಮ್ಮನೆ ನಿಂತಳು. ಯಶವಂತ ತಾನೇ ಆಕೆಯನ್ನು ಒಳಕ್ಕೆ ಕರೆದ. ''ಬನ್ನಿ''ಎಂದ.

ಮಂದಾಕಿನಿ ಅನುಮಾನಿಸುತ್ತಾ ಒಳಕ್ಕೆ ಅಡಿ ಇಟ್ಟಳು. ರಾಜಲಕ್ಷ್ಮಿ ಅವಳ ಕಡೆ ನೋಡಲಿಲ್ಲ ಮಾತನಾಡದೇ ವೇಗವಾಗಿ ರೂಮಿನ ಕಡೆಗೆ ಹೋಗಿ ಬಿಟ್ಟಳು. ಯಶವಂತ ತಾನೇ ಆ ಹೆಂಗಸನ್ನು ಕರೆದು ಸೋಫಾದ ಕಡೆ ಕೈ ಮಾಡಿದ. ಶರತ್ ತಂದೆಯ ಮುಖವನ್ನು ಕಂಡು ಎತ್ಕೋ ಎನ್ನುವಂತೆ ಕೈ ಚಾಚಿದ.

''ನನ್ನ ಮಗ ಶರತ್'' ಎಂದು ಹೇಳಿ, ಅವನನ್ನು ಎತ್ತಿಕೊಂಡ. ಮಂದಾಕಿನಿ ಅನುಮಾನಿಸುತ್ತಾ ಸೋಫಾದ ಮೇಲೆ ಕುಳಿತಳು. ಮಗ ಚಿದಾನಂದನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡಳು. ಯಶವಂತ ರೂಮಿಗೆ ಬಂದ. ಮಂಚದ ಮೇಲೆ ಕುಳಿತಿದ್ದ ಹೆಂಡತಿಯ ಬಳಿ ಸಾರಿದ. ಅವಳ ಮುಖ ಅಸಹನೆಯಿಂದ ದಪ್ಪವಾಗಿತ್ತು. ಅವಳ ಭುಜದ ಮೇಲೆ ಕೈಯನ್ನಿಟ್ಟ, ಅವಳು ಕೊಸರಿಕೊಂಡು ಅವನತ್ತ ಕಿಡಿನೋಟವನ್ನು ಬೀರಿದಳು. ಅವನು ಮೆಲುದನಿಯಲ್ಲಿ ನುಡಿದ.

''ರಾಜಿ, ಪ್ಲೀಸ್. ಈಗ ಯಾವ ಮಾತೂ ಬೇಡ. ನಿಧಾನವಾಗಿ ಎಲ್ಲವನ್ನೂ ಹೇಳ್ತೀನಿ....''

"ಯಾರ್ರೀ ಅವಳು ? ... ಇಲ್ಲಿಗ್ಯಾಕೆ ಬಂದಿದಾಳೆ !" ಕಿಡಿ ಕಾರಿದಳು.

"ಶ್. ಮೆಲ್ಲಗೆ. ಹೇಳಿದ್ನಲ್ಲ, ನಿಧಾನವಾಗಿ ಹೇಳ್ತೀನಿ. ಈಗ ಮೊದಲು ಕಾಫಿ ತಿಂಡಿಯನ್ನು ಕೊಡು. ಪ್ರಯಾಣದಿಂದ ನನಗೂ ಆಯಾಸವಾಗಿದೆ. ಆಕೆಗೂ ಆಯಾಸ ವಾಗಿರಬಹುದು."

"ಅವಳು ಯಾರು ಅಂತ ಹೇಳದ ಹೊರತು ನಾನು ನಿಮ್ಮ ಹತ್ರ ಮಾತನಾಡುಲ್ಲ."

"ಅವಳು ನನ್ನ ಸ್ನೇಹಿತನ ಪತ್ನಿ.. ಮಂದಾಕಿನಿ ಅಂತ.. ಕಷ್ಟದಲ್ಲಿದಾಳೆ."

"ನಿಜ ಹೇಳ್ತಿದೀರಿ ತಾನೆ....?"

"ನನ್ಮೇಲೆ ನಂಬಿಕೆ ಇಲ್ವಾ ರಾಜೀ ..."

"ನಂಬಿಕೆ ಇದೆ. ಆದ್ರೂ..."

"ಸರಿ, ನಂಬಿಕೆ ಇದೆ ತಾನೇ.... ಈಗ ಏಳು. ಮೊದಲು ಆಫಿ ತಿಂಡಿ - ಆಕೇನ ಏನೂ ಕೇಳ್ಬೇಡ. ಅವಳು ಒಂದೆರಡು ದಿನಗಳು ಇಲ್ಲಿ ಇರ್ತಾಳೆ. ಅವಳಿಗೆ ಮಹಡಿಯ ಕೆಳಗಿನ ರೂಮನ್ನು ಬಿಟ್ಕೊಡು....."

"ಅವಳಿಗ್ಯಾಕ್ರೀ ಅಷ್ಟು ಉಪಚಾರ ? ಕಂಡಿಲ್ಲ..ಕೇಳಿಲ್ಲ"

"ಹೆಂಗಸು. ಅಸಹಾಯಕ ಸ್ಥಿತೀಲಿದಾಳೆ. ಮಗು ಬೇರೆ ಇದೆ. ಎರಡು ದಿನ ಅತಿಥಿ ಸತ್ಕಾರ ಮಾಡಿದ್ರೆ ನಮ್ಮ ಗಂಟೇನು ಹೋಗುತ್ತೆ ? ಅಲ್ವೇನೋ ಶರೀ...."ಎನ್ನುತ್ತಾ ಮಗನನ್ನು ಮುದ್ದಿಸುತ್ತಾ ಹೊರಬಂದ. ರಾಜಲಕ್ಷ್ಮಿ ಎದ್ದು ಬರಲೇಬೇಕಾಯ್ತು. ಸೋಫಾದ ಮೇಲೆ ಕುಳಿತಿದ್ದವಳ ಕಡೆ ನೋಡದೇ, ಅಡಿಗೆ ಮನೆಗೆ ಬಂದಳು.

ಕಾಫಿಯನ್ನು ಬಿಸಿ ಮಾಡಿ ಬಟ್ಟಲುಗಳಿಗೆ ಸುರಿದಳು. ಹಾಟ್ ಬಾಕ್ಸ್‌ನಲ್ಲಿದ್ದ ತರಕಾರಿ ಉಪ್ಪಿಟ್ಟನ್ನು ತಟ್ಟೆಗಳಿಗೆ ಹಾಕಿ, ಚಮಚಗಳನ್ನಿಟ್ಟಳು. ಕೈಕಾಲು ತೊಳೆದುಬಂದ ಯಶವಂತ ಅಡಿಗೆ ಮನೆಯ ಬಾಗಿಲ ಬಳಿ ನಿಂತ.

"ಥ್ಯಾಂಕ್ಸ್ ರಾಜೀ.... ನೀನು ಒಳ್ಳೆಯ ಹುಡುಗಿ" ಎಂದ ಅವಳ ಗಲ್ಲವನ್ನು ಸವರಿ.

"ಹೊಗಳಿಕೆ ಸಾಕು...." ಎನ್ನುತ್ತಾ ತಟ್ಟೆಯನ್ನು ಹಿಡಿದು ಹೊರ ಬಂದಳು. ಮಂದಾಕಿನಿ ಅವಳ ಕಡೆ ನೋಡಿ ಸಂಕೋಚದಿಂದ ಮುದುರಿದಳು.

"ಕೈಕಾಲುಗಳನ್ನು ತೊಳೆಯಬೇಕು. ಬಚ್ಚಲುಮನೆ ಎಲ್ಲಿದೆ ?"

"ಅಲ್ಲಿ"ಎಂದು ತೋರುತ್ತಾ ತಟ್ಟೆಯನ್ನು ಟೀಪಾಯಿಯ ಮೇಲೆ ಇಟ್ಟಳು ಮಂದಾಕಿನಿ. ಮಗನನ್ನು ಎತ್ತಿಕೊಂಡು ಬಚ್ಚಲು ಮನೆಯ ಕಡೆಗೆ ನಡೆದಳು. ಯಶವಂತ ನೀರಿನ ಲೋಟವನ್ನೂ ಕಾಫಿಯ ಬಟ್ಟಲನ್ನೂ ತಂದಿತ್ತ. .. ರಾಜಲಕ್ಷ್ಮಿ ಅಡಿಗೆ ಮನೆಯ ಕಡೆಗೆ ನಡೆದಳು.

ಮಂದಾಕಿನಿ, ಮುಖವನ್ನು ತೊಳೆದು, ಸೀರೆಯ ಸೆರಗಿನಲ್ಲೇ ಒರೆಸಿಕೊಂಡಳು. ಮಗನ ಮುಖವನ್ನು ತೊಳೆದು ಒರೆಸಿದಳು. ಅವಳು ಮತ್ತೆ ಹಾಲಿಗೆ ಬರುವಷ್ಟರಲ್ಲಿ ರಾಜಲಕ್ಷ್ಮಿ ಆ ಮಗುವಿಗಾಗಿ ಹಾಲನ್ನು ತಂದಿಟ್ಟಳು. ಮಂದಾಕಿನಿ ಮೊದಲು ಮಗನಿಗೆ ಬಟ್ಟಲಿನಲ್ಲಿ

ಹಾಲನ್ನು ಕುಡಿಸಿದಳು. ನಂತರ ಅವನನ್ನು ಕೆಳಗೆ ಕೂಡಿಸಿ, ತಾನು ಕಾಫಿಯನ್ನು ಕುಡಿದು ಮುಗಿಸಿ, ತಿಂಡಿಯ ತಟ್ಟೆಯನ್ನು ಕೈಗೆತ್ತಿಕೊಂಡಳು.

"ನೀವು ಈ ರೂಮಿನಲ್ಲಿರಬಹುದು." ಮಹಡಿಯ ಮೆಟ್ಟಿಲಿನ ಕೆಳಗೆ ಇದ್ದ ಸಣ್ಣ ರೂಮನ್ನು ತೋರಿದಳು. ರಾಜಲಕ್ಷ್ಮಿಯ ಕಡೆ ಆಕೆ ಕೃತಜ್ಞತೆಯ ನೋಟವನ್ನು ಬೀರಿದಳು.

"ಥ್ಯಾಂಕ್ಸ್" ಎಂದು ಹೇಳಿ , ತನ್ನ ಕಿಟ್‌ಬ್ಯಾಗನ್ನು ಕೈಗೆತ್ತಿಕೊಂಡು, ಮಗನನ್ನು ನಡೆಸಿಕೊಂಡು ರೂಮಿಗೆ ತೆರಳಿದಳು. ರಾಜಲಕ್ಷ್ಮಿ ತನ್ನ ರೂಮಿಗೆ ಬಂದಳು. ಗಂಡ ಮಲಗಿದ್ದ. ಸದ್ದು ಮಾಡದೆ ಬಾಗಿಲನ್ನು ಮುಂದಕ್ಕೆಳೆದುಕೊಂಡು ಅಡಿಗೆ ಮನೆಗೆ ಬಂದಳು. ಅಡಿಗೆಯ ತಯಾರಿಯಲ್ಲಿ ನಿರತಳಾದಳು. ಆದರೆ ಮನಸ್ಸು ಮಾತ್ರ ಎಲ್ಲಿಯೋ....

"ನಾನೇನಾದ್ರೂ ಹೆಲ್ಪ್ ಮಾಡ್ಲಾ ?" ಮಂದಾಕಿನಿ ಅಡಿಗೆ ಮನೆಯ ಬಾಗಿಲಲ್ಲಿ ನಿಂತು ಕೇಳಿದಾಗ ಇವಳು ಬೆಚ್ಚಿ ಹಿಂತಿರುಗಿ ನೋಡಿದಳು.

"ಏನೂ ಬೇಡ, ಬಿಸಿ ಅನ್ನ ಆಗಿದೆ. ನಿಮ್ಮ ಮಗೂಗೆ ಊಟವನ್ನು ಮಾಡಿಸೋದಾದ್ರೆ ಮಾಡ್ಸಿ."

"ಅವನು ಮಲಗಿದಾನೆ. ಏಳ್ಲಿ, ಆಮೇಲೆ ಮಾಡಿಸ್ತೀನಿ."

"ನೀವೂ ರೆಸ್ಟ್ ತಗೊಳ್ಳಿ. ತಟ್ಟೆ ಹಾಕಿ ಕರಿತೀನಿ." ರಾಜಲಕ್ಷ್ಮಿ ನುಡಿದಾಗ, ಆಕೆ ಸಂಕೋಚಗೊಂಡು ಅತ್ತಲಿಂದ ಸರಿದಳು. ತಾನು ಇದ್ದ ರೂಮಿಗೆ ಬಂದು ಮಗುವಿನ ಪಕ್ಕ ಉರುಳಿಕೊಂಡಳು. ರೂಮಿನ ಒಳಗೆ ಕಣ್ಣು ಹಾಯಿಸಿದಳು. ಸುತ್ತಲೂ ಸಾಮಾನುಗಳು. ಒಂದು ಕಡೆ ಒಂದು ಮಂಚ.... ಮೇಲೆ ಹಾಸಿದ್ದ ಹಾಸಿಗೆ, ಮೇಲೆ ಹಾಸಿದ್ದ ಮಗ್ಗುಲು ಹಾಸಿಗೆ ಎಲ್ಲವೂ ಧೂಳುಮಯ. ಬೇಡವಾದ ಕುರ್ಚಿಗಳು ಪುಸ್ತಕಗಳು, ಉಗ್ರಾಣದಂತೆ ತುಂಬಿಕೊಂಡಿರುವ ರೂಮು... ಹಾಸಿಗೆಯ ಮೇಲೆ ತನ್ನದೊಂದು ಸೀರೆಯನ್ನು ಹಾಸಿ ಮಗುವನ್ನು ಮಲಗಿಸಿದ್ದಳು.

ಎಷ್ಟು ದಿನ ಈ ಅಜ್ಞಾತವಾಸವೋ... ಈ ಮನುಷ್ಯ ತನ್ನನ್ನು ಈ ಮನೆಗೆ ಕರೆತರದೇ ಹೋಗಿದ್ದರೇ..... ಇಷ್ಟು ಹೊತ್ತಿಗೆ ಈ ಕಾಣದ ಊರಿನಲ್ಲಿ ಎಲ್ಲಿ ಅಲೆಯ ಬೇಕಾಗಿತ್ತೋ.... ಕೈಯಲ್ಲಿ ಕಾಸಿಲ್ಲ, ಎಲ್ಲಿಗೆ ಹೋಗಬೇಕೆಂದು ತಿಳಿದಿಲ್ಲ. ಎಂಥಾ ಅಸಹಾಯಕ ಪರಿಸ್ಥಿತಿ ? ಯಾಕೆ ಹೀಗಾಯ್ತು ? .... ಬಸ್ಸಿನಲ್ಲಿ ತನ್ನನ್ನು ಕೂರಿಸಿ ಎಲ್ಲಿ ಹೊರಟು ಹೋದನೋ ತನ್ನ ಗಂಡ.... ಬಸ್ಸುಗಳ ಬಳಿ ಓಡಾಡುತ್ತಿದ್ದ ಪೋಲಿಸು ಪೇದೆಗಳನ್ನು ಕಂಡು ಇವಳೂ ಹೆದರಿದ್ದಳು.

ಹಿಂದಿನ ದಿನ ಗಂಡ ತನ್ನೊಡನೆ ಹೇಳಿದ್ದ.... "ಪೋಲಿಸ್ನೋರು ನನ್ನನ್ನು ಹುಡುಕ್ತಿದಾರಂತೆ." ನೀನು ನಿನ್ನ ಅಕ್ಕನ ಮನೆಗೆ ಹೊರಟು ಹೋಗು. ನಾನು ಕೆಲವು ದಿನ ತಲೆ ಮರೆಸ್ಕೊಂಡು ಇರ್ತೀನಿ ಅಂತ ಹೇಳಿದ್ದ. ಇವಳು ತನ್ನ ಹಾಗೂ ತನ್ನ ಮಗುವಿನ ಬಟ್ಟೆಗಳನ್ನು ಒಂದು ಕಿಟ್ ಬ್ಯಾಗ್‌ಗೆ ತುರುಕಿಕೊಂಡಿದ್ದಳು. ಬೆಳಕು ಹರಿಯುತ್ತಿದ್ದಂತೆಯೇ ಅವರುಗಳು ಮನೆಯಿಂದ ಹೊರಬಿದ್ದಿದ್ದರು.

ಬಸ್ ಸ್ಟ್ಯಾಂಡಿನಲ್ಲಿ ಬೆಂಗಳೂರಿಗೆ ಹೊರಟು ನಿಂತಿದ್ದ ಬಸ್ಸಿಗೆ ಹತ್ತಿಸಿದ. ಅವಳಿಗೆ ಒಂದು

ಟಿಕೆಟ್ಟನ್ನು ತೆಗೆದುಕೊಟ್ಟ "ನನ್ನ ಅಣ್ಣನಿಗೆ ಫೋನ್ ಮಾಡಿದೀನಿ. ಅವನು ಬಸ್‌ಸ್ಟ್ಯಾಂಡ್‌ನಲ್ಲಿ ನಿನ್ನನ್ನು ಇಳಿಸಿಕೊಳ್ತಾನೆ. ಅಲ್ಲಿ ಕೆಲವು ದಿನಗಳು ಇದ್ದು ನಂತರ ನಿನ್ನ ಅಕ್ಕನ ಊರಿಗೆ ಹೋಗು.... ನಾನು ಯಾವಾಗ ಬರ್ತೀನೋ ಗೊತ್ತಿಲ್ಲ" ಅಂತ ಹೇಳಿದ್ದ. ಇವಳು ನಡುಗಿದ್ದಳು. ಇವಳು ಭಯಗೊಂಡಂತೆಯೇ ಆಗಿತ್ತು. ಅವನ ಅಣ್ಣ ಬಸ್‌ಸ್ಟ್ಯಾಂಡಿಗೆ ಬಂದಿರಲೇ ಇಲ್ಲ. ದಿಕ್ಕಿಲ್ಲದವಳಂತೆ ಬೆದರಿ ಒಂದು ಕಂಬದ ಬಳಿ ನಿಂತಿದ್ದವಳನ್ನು ಯಶವಂತ ಕಂಡ. ಸೊಂಟದಲ್ಲಿ ಕುಳಿತಿದ್ದ ಮಗ ಅಳುತ್ತಲೇ ಇದ್ದ. ಅವಳು ಸಮಾಧಾನ ಹೇಳುತ್ತಲೇ ಇದ್ದಳು. ಈ ಹೆಂಗಸು ತನ್ನ ಮಗುವಿನೊಂದಿಗೆ, ತಾನು ಬಂದ ಬಸ್ಸಿನಲ್ಲೇ ಕುಳಿತಿದ್ದಳು ಎನ್ನುವುದು ನೆನಪಿಗೆ ಬಂತು. ಅವಳನ್ನು ಸಮೀಪಿಸಿದ ಅವಳು ಮುದುರಿ ಹಿಂದೆ ಸರಿದಳು.

"ಹೆದರಬೇಡಮ್ಮಾ. ಮಗು ಅಳ್ತಿದೆ. ಏನಾದ್ರೂ ಕೊಡ್ಸಿ..." ಎಂದ ನಯವಾಗಿ. ಇವಳು ಮಾತನಾಡದೇ ಸುಮ್ಮನೇ ನಿಂತಿದ್ದಳು. ಮಗು ಅಳುವನ್ನು ಜೋರು ಮಾಡಿತು. ಮಗೂಗೆ ಹಸಿವಾಗಿರಬಹುದು.... ಬಿಸ್ಕತ್ತನ್ನು ತಂದ್ಕೊಡ್ಲಾ ? ಕೇಳಿದ.

ಬೇಡ ಎನ್ನುವಂತೆ ತಲೆಯಾಡಿಸಿದಳು. ಅವನು ಮುಂದೆ ಸರಿದವನು ಹಿಂದೆ ತಿರುಗಿ ನೋಡಿದ. ಅವಳು ಅಲ್ಲಿಯೇ ಹಾಗೇ ನಿಂತಿದ್ದಳು. ಅವಳ ಅಸಹಾಯಕ ಸ್ಥಿತಿ ಅವನನ್ನು ಕರಗಿಸಿತು..... ಮತ್ತೆ ಅವಳ ಬಳಿಗೆ ಬಂದ.

"ನೋಡಿ ಇದು ಬೆಂಗಳೂರು .... ಮೆಜೆಸ್ಟಿಕ್ ಬಸ್‌ಸ್ಟ್ಯಾಂಡ್. ನೀವು ಇಲ್ಲಿ ಹೀಗೆ ಒಂಟಿಯಾಗಿ ನಿಂತಿದ್ರೆ ಯಾರಾದ್ರೂ ಮೋಸ ಮಾಡಬಹುದು. ನಿಮ್ಮನ್ನು ಕರ್ಕೊಂಡು ಹೋಗಲು ಯಾರಾದ್ರೂ ಬರೋರು ಇದಾರಾ!.... ಅಥವಾ ನಾನು ಆಟೋರಿಕ್ಷಾ ಗೊತ್ತು ಮಾಡಿ ಕೊಡ್ಲಾ ? " ಅಂತ ಕೇಳಿದ.

ಈಗ ಇವಳಿಗೆ ಪರಿಸ್ಥಿತಿಯ ಅರಿವಾಗಿತ್ತು. "ನನ್ನ ಅಣ್ಣ ಬರ್ಬೇಕಾಗಿತ್ತು. ಯಾಕೋ ಬಂದಿಲ್ಲ, ಅವರಿಗೋಸ್ಕರ ಕಾಯ್ತಾ ಇದೀನಿ." ಅವಳಿಗೆ ಅಳು ಬರುವಂತಾಗಿತ್ತು.

"ನಿಮ್ಮ ಅಣ್ಣನ ಫೋನು ನಂಬರ್ರು ಇದ್ದರೆ ಫೋನು ಮಾಡಿ ವಿಚಾರಿಸಿ... "

"ಇಲ್ಲ, ನನಗೆ ಅವರ ನಂಬರ್ರು ಗೊತ್ತಿಲ್ಲ.... " ಕನಿಕರದಿಂದ ನೋಡಿದ.

"ಹೋಗ್ಲಿ ಅವರ ಮನೆ ಅಡ್ರೆಸ್ ಗೊತ್ತಾ ?...."

"ಇಲ್ಲಿ ಅಡ್ರೆಸ್ ಗೊತ್ತಿಲ್ಲ, ಜೆ.ಪಿ. ನಗರದಲ್ಲಿ ಎಲ್ಲೋ ಇದಾರೆ." ಅವಳು ಅಳಲು ಪ್ರಾರಂಭಿಸಿದಳು.

"ಅಳ್ಬೇಡಿ.... ಯಾರಾದ್ರೂ ನೋಡಿದ್ರೆ, ನಾನು ಏನೋ ತೊಂದರೆ ಕೊಡ್ತಿದೀನಿ ಅಂತ ಅಂದ್ಕೋತಾರೆ.... ಹೋಗ್ಲೀ ನಿಂತ್ಕೊಂಡ್ರೆ ಉಪಯೋಗವಿಲ್ಲ, ಮೊದ್ಲು ಮಗುವಿನ ಹೊಟ್ಟೆಗೆ ಏನನ್ನಾದ್ರೂ ತಿನ್ನಿಸಿ..." ಎಂದು ಹೇಳಿ ಸಮೀಪದಲ್ಲಿದ್ದ ಅಂಗಡಿಯಿಂದ ಬಿಸ್ಕತ್ತನ್ನೂ ಹಣ್ಣನ್ನೂ ತಂದುಕೊಟ್ಟ.... ಅವಳು ಸಂಕೋಚಗೊಂಡಳು.

"ನನ್ನ ಹತ್ರ ಹಣ ಇಲ್ಲ " ಎಂದಳು. ಮಗುವಿಗೆ ಒಂದೆರಡು ಬಿಸ್ಕತ್ತನ್ನ ಕೊಟ್ಟಳು.

"ಪರವಾಗಿಲ್ಲ ಬಿಡಿ.... ನನಗೂ ಈ ವಯಸ್ಸಿನ ಮಗನೊಬ್ಬ ಇದಾನೆ. ನಿಮ್ಮ ಗಂಡನ ಹೆಸರನ್ನೂ ನಿಮ್ಮ ಹೆಸರನ್ನು ಹೇಳಿ. ಪೋಲಿಸರಿಗೆ ತಿಳಿಸೋಣ... ಅವರು ಅನೌನ್ಸ್ ಮಾಡಿಸಿದ್ರೆ ಯಾರಾದ್ರೂ ಪರಿಚಯದವರು ಬರಬಹುದು...."

"ಬೇಡ, ಬೇಡ" ತಟ್ಟನೆ ನುಡಿದಳು. "ಪೋಲಿಸರಿಗೆ ಮಾತ್ರ ತಿಳಿಸ್ಬೇಡಿ." ಅವಳು ಕೈ ಮುಗಿದು ಕೇಳಿಕೊಂಡಾಗ ಅವನು ಮೆತ್ತಗಾದ.

"ಹಾಗಾದ್ರೆ ಈಗೇನು ಮಾಡ್ತೀರಿ ? ನಿಮ್ಮೂರಿಗೆ ವಾಪಸ್ಸು ಹೋಗ್ತೀರಾ ! ಬಸ್ಸಿನಲ್ಲಿ ಟಿಕೆಟ್ಟಿಗೆ ನಾನು ದುಡ್ಡು ಕೊಡ್ತೀನಿ." ಅವಳು ಕೆಟ್ಟ ಮುಖ ಮಾಡಿದಳು.

"ನನ್ನ ಗಂಡನನ್ನು ಪೋಲಿಸರು ಹುಡುಕುತ್ತಿರಬಹುದು. ಅವರು ತಲೆ ತಪ್ಪಿಸಿ ಕೊಂಡಿರುತ್ತಾರೆ. ಪೋಲಿಸರು ನನ್ನನ್ನು ಸುಮ್ಮನೆ ಬಿಡುವುದಿಲ್ಲ. ನಾನು ಒಂದೆರಡು ದಿನಗಳು ನಿಮ್ಮ ಮನೇಲಿರ್ಲಾ ? ....ನನ್ನನ್ನು ನಿಮ್ಮ ಮನೆಗೆ ಕರ್ಕೊಂಡು ಹೋಗ್ತೀರಾ?"

"ನಾನಾ ?" ಅನುಮಾನದಿಂದ ಗಲ್ಲವನ್ನು ಕೆರೆದುಕೊಳ್ಳುತ್ತಾ ಕೇಳಿದ.

"ಹೂಂ. ನಿಮ್ಮನ್ನು ನೋಡಿದರೆ ಒಳ್ಳೆಯವರ ಥರ ಕಾಣ್ತೀರಾ. ನನಗೆ ಸಹಾಯ ಮಾಡ್ತೀರಾ ! ಈ ಮಗುವನ್ನು ಕರ್ಕೊಂಡು ಎಲ್ಲಿಗೆ ಹೋಗಲಿ ! ನನಗೆ ಅಣ್ಣನ ಹೊರತು ಬೇರೆ ಯಾರೂ ಪರಿಚಯದವರಿಲ್ಲ"

"ಹಾಗಲ್ಲ .... ನೀವು ನಿಮ್ಮ ಅಣ್ಣನ ಮನೆಯ ವಿಳಾಸವನ್ನು ಹೇಗೆ ಹುಡುಕ್ತೀರಿ! ಮುಂದೇನು?"

"ನನಗೂ ದಿಕ್ಕು ತೋಚ್ತಿಲ್ಲ. ನೀವು ಆಪದ್ಬಾಂಧವನ ಥರಾ ಕಾಣ್ತೆದೀರಿ. ಈಗ ನಿಮ್ಮ ಹೊರತು ಬೇರೆ ಯಾರೂ ಪರಿಚಯದವರಿಲ್ಲ" ಮತ್ತೆ ಕೈಮುಗಿದಳು. ಯಶವಂತ ಒಂದು ಗಳಿಗೆ ಯೋಚಿಸಿದ. ಅವನಿಗೂ ದಿಕ್ಕು ತೋಚದಂತಾಗಿತ್ತು.... ಅಸಹಾಯಕಳಾಗಿ ನಿಂತಿದ್ದವಳನ್ನು ಮಾತನಾಡಿಸಿ, ತಾನೇ ಇಕ್ಕಟ್ಟಿಗೆ ಸಿಕ್ಕಿಬಿದ್ದಿದ್ದ . ಏಕಾಏಕಿ, ಪರಿಚಯವಿಲ್ಲದ ಒಬ್ಬ ಹೆಂಗಸನ್ನು ಮನೆಗೆ ಹೇಗೆ ಕರೆದೊಯ್ಯುವುದು ! ಹೆಂಡತಿ ಏನೆಂದುಕೊಂಡಾಳು ಎಂದು ಮನ ಹೊಯ್ದಾಡಿತು. ಅವಳ ಕೈಗೆ ಒಂದಿಷ್ಟು ಹಣ ಕೊಟ್ಟು ಎಲ್ಲಿಗಾದ್ರೂ ಹೋಗು ಎಂದು ಹೇಳಲೇ ಅಂತಂದುಕೊಂಡ. ಆದರೆ ಮನಸ್ಸು ಒಡಂಬಡಲಿಲ್ಲ. ಇವಳು ಈ ಜನಜಂಗುಳಿಯಲ್ಲಿ ಯಾವುದೇ ಅಪಾಯಕ್ಕೆ ಸಿಕ್ಕಿಬಿದ್ದರೂ, ತನಗೆ ಅರಿವಿದ್ದೂ ತಾನು ತಪ್ಪು ಮಾಡಿದಂತಾಗುತ್ತದೆ. ಇವಳನ್ನು ನೋಡಿದರೆ ಅಮಾಯಕ ಹೆಣ್ಣಿನಂತೆ ಕಾಣುತ್ತಾಳೆ... ತನ್ನೊಂದಿಗೆ ಇವಳನ್ನು ತನ್ನ ಮನೆಗೆ ಕರೆದೊಯ್ಯುವುದೇ ಸರಿ ಎಂದು ತೀರ್ಮಾನಿಸಿದ. ಒಂದೆರಡು ದಿನಗಳಲ್ಲಿ ಯಾವುದಾದರೂ ಪರಿಹಾರ ಒದಗಬಹುದು ಅಂತಂದು ಕೊಂಡ. ಅವಳನ್ನು ತನ್ನೊಂದಿಗೆ ಕರೆದುಕೊಂಡು ಬಂದಿದ್ದ.

ಅವನು ನಿರೀಕ್ಷಿಸಿದ್ದಂತೆ, ಹೆಂಡತಿಯಿಂದ ಸಮಾಧಾನಕರವಾದ ಪ್ರತಿಕ್ರಿಯೆ ಕಂಡುಬಂದಿರಲಿಲ್ಲ. ಅದು ಸಹಜವೇ, ಇದ್ದಕ್ಕಿದ್ದಂತೆ ಒಬ್ಬ ಹೆಂಗಸನ್ನು ಕರೆತಂದರೆ ಹೆಂಡತಿಗೆ ಅಸಮಾಧಾನವಾಗದೇ ಇರುತ್ತದೆಯೇ ?... ಯೋಚಿಸುತ್ತಾ ಮಲಗಿದ್ದವನನ್ನು ರಾಜಲಕ್ಷ್ಮಿ

ಎಚ್ಚರಿಸಿದಳು.

"ಊಟಕ್ಕೆ ಬರ್ತೀರಾ. ಅಡಿಗೆ ಆಗಿದೆ" ಹೂಂ ಎನ್ನುತ್ತಾ ಮೈ ಕೊಡವಿ ಎದ್ದ. ನಿದ್ರಿಸುತ್ತಿದ್ದ ಶರತ್‌ಗೆ ಬೆಚ್ಚನೆಯ ಹೊದಿಕೆಯನ್ನು ಸರಿಯಾಗಿ ಹೊದ್ದಿಸಿ, ಹೊರಬಂದ. ಊಟದ ಮನೆಯ ಡೈನಿಂಗ್ ಟೇಬಲ್ ಮೇಲೆ ತಟ್ಟೆಗಳನ್ನಿಟ್ಟಿದ್ದಳು.

"ರಾಜೀ.... ಆಕೇನ ಊಟಕ್ಕೆ ಕರೆಯೋಲ್ವಾ ?" ಕೇಳಿದ.

"ನೀವೇ ಕರೀರಿ. ನೀವೇ ತಾನೇ ಕರ್‍ಕೊಂಡು ಬಂದಿರೋದು." ಅವಳು ಕಹಿಯನ್ನು ಉಗುಳಿದಳು.

"ನಾನು ಕರೆದ್ರೆ ಏನು ಚೆನ್ನ ! ಆಕೇನ ಕರೆದುಬಾ."

"ಮೊದಲು ನೀವು ಊಟ ಮಾಡಿ. ಆಮೇಲೆ ನಾನು ಆಕೆಗೆ ಬಡಿಸಿ, ನಾನೂ ಊಟ ಮಾಡ್ತೀನಿ. ಅವಳನ್ನು ಉಪವಾಸ ಕೆಡವುಲ್ಲ, ನಾನೂ ಉಪವಾಸ ಮಾಡುಲ್ಲ" ಎನ್ನುತ್ತ ತಟ್ಟೆಗೆ ಬಿಸಿ ಅನ್ನವನ್ನು ಬಡಿಸಿದಳು.

"ಹೀಗ್ಯಾಕೆ ಮಾತಾಡ್ತೀಯ ರಾಜೀ..... ನನ್ನದೇನು ತಪ್ಪು! ...ಆಕೆಗೆ ಏನೋ ಕಷ್ಟ ಏನೋ ಅಸಹಾಯಕತೆ.... ಒಂದೆರಡು ದಿನಗಳು ಕಳೆದ್ಮೇಲೆ ಹೋಗ್ತಾಳೆ. ಇರೋವರ್‍ಗೆ ಚೆನ್ನಾಗಿ ಸತ್ಕಾರ ಮಾಡಿದ್ರಾಯ್ತು.... ನಮಗೂ ಒಳ್ಳೆಯದಾಗುತ್ತೆ."

"ಒಳ್ಳೆಯದಾಗುತ್ತೆ ಅಂತ, ಯಾರ್‍ಯಾರೋ ಹೆಂಗಸರನ್ನು ಹೀಗೆ ಕರೆದುಕೊಂಡು ಬಂದ್ರೆ, ನಾನೇನಂದ್ಕೊಳ್ಬೇಕು ? .... ಏನಿದರ ಅರ್ಥ ?" ಸೌಟನ್ನು ಕುಕ್ಕಿ ಕೇಳಿದಳು.

"ಅರ್ಥ ಏನೂ ಇಲ್ಲ ರಾಜೀ. ಈ ಮುಂಚೆ ಎಂದಾದ್ರೂ ಹೀಗೆ ಮಾಡಿದ್ನಾ ? .. ನನ್ನ ಮೇಲೆ ನಂಬಿಕೆ ಇದ್ದರೆ, ಸಾರನ್ನು ಬಡಿಸು ಊಟ ಮಾಡ್ತೀನಿ. ಇಲ್ದಿದ್ರೆ ಎದ್ದು ಹೋಗ್ತೀನಿ."

"ಸರಿ, ಈ ನಾಟಕ ಬೇರೆ" ಎನ್ನುತ್ತಾ ಸಾರನ್ನು ಬಡಿಸಿ, ತುಪ್ಪವನ್ನು ಹಾಕಿದಳು.

"ಥ್ಯಾಂಕ್ಸ್ ರಾಜೀ...." ಎನ್ನುತ್ತಾ ಅನ್ನವನ್ನು ಹದವಾಗಿ ಕಲೆಸಿ ತಿನ್ನಲಾರಂಭಿಸಿದ. ಮೌನವಾಗಿ ಗಂಡನಿಗೆ ಬೇಕಾದುದನ್ನು ಬಡಿಸಿದಳು. ಅವನು ಊಟವನ್ನು ಮುಗಿಸಿ ಎದ್ದ ಕೈ ತೊಳೆದು ಬಂದ.

"ರಾಜೀ, ನಾನು ನಿಮ್ಮಿಬ್ಬರಿಗೂ ಬಡಿಸ್ತೀನಿ. ಆಕೇನ ಕರೆದುಬಾ."

"ನೀವೇನು ಬಡಿಸಬೇಕಾಗಿಲ್ಲ, ನೀವು ಹೋಗಿ....." ಎಂದು ಹೇಳಿ, ಎಂಜಲು ತಟ್ಟೆಯನ್ನು ತೆಗೆದು ಒರೆಸಿ, ಎರಡು ತಟ್ಟೆಗಳನ್ನಿಟ್ಟು ನೀರಿನ ಲೋಟಗಳನ್ನಿಟ್ಟು ಮಂದಾಕಿನಿಯನ್ನು ಕರೆಯಲು ಹೋದಳು. ಯಶವಂತ ಸಮಾಧಾನದಿಂದ ರೂಮಿಗೆ ತೆರಳಿದ. ಆದರೂ ಏನೋ ಆತಂಕ.

ರಾಜಲಕ್ಷ್ಮಿ ರೂಮಿನ ಬಾಗಿಲನ್ನು ಮೆಲ್ಲಗೆ ಬಡಿದಳು. ಮಂದಾಕಿನಿ ಹೊರಕ್ಕೆ ಬಂದಳು. "ಊಟಕ್ಕೆ ಬನ್ನಿ" ಬಿಗುಮಾನದಿಂದ ಕರೆದಳು. ಮಂದಾಕಿನಿ ಅವಳನ್ನು ಹಿಂಬಾಲಿಸಿದಳು.

"ನಿಮ್ಮ ಮಗುವಿಗೆ ಊಟ ಮಾಡಿಸುಲ್ವಾ ?"

"ಅವನು ಬಿಸ್ಕತ್ತನ್ನು ತಿಂದು ಮಲಗಿದಾನೆ. ಎದ್ದರೆ ನೋಡೋಣ" ಎನ್ನುತ್ತಾ ಊಟಕ್ಕೆ ಕುಳಿತಳು.

"ಸಂಕೋಚ ಬೇಡ, ಏನು ಬೇಕೋ ಅದನ್ನು ಕೇಳಿ ಹಾಕಿಸ್ಕೊಳ್ಳಿ" ಎನ್ನುತ್ತಾ ರಾಜಲಕ್ಷ್ಮೀ ಬಡಿಸಿದಳು.

"ಥ್ಯಾಂಕ್ಸ್.... ತೊಂದರೆಯಲ್ಲಿದ್ದವಳಿಗೆ ನೀವಿಬ್ರೂ ನಾಲ್ಕು ಒಳ್ಳೆಯ ಮಾತುಗಳನ್ನಾಡಿ, ಸಹಾಯಿ ಮಾಡ್ತಿದೀರಿ... ದೇವರು ನಿಮಗೆ ಒಳ್ಳೆಯದನ್ನು ಮಾಡಲಿ. ನಾನು ನಿಮ್ಮ ಈ ಉಪಕಾರವನ್ನು ಎಂದಿಗೂ ಮರೆಯುವುದಿಲ್ಲ" ಮಂದಾಕಿನಿ ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಹೇಳಿದಳು.

"ಪರವಾಗಿಲ್ಲ, ಥ್ಯಾಂಕ್ಸ್ ಎಲ್ಲಾ ಯಾಕೆ ?... ನಿಧಾನವಾಗಿ ಊಟಮಾಡಿ" ಎಂದು ಹೇಳಿ ತನ್ನ ತಟ್ಟೆಗೂ ಬಡಿಸಿಕೊಂಡಳು. ಮೌನವಾಗಿ ಊಟ ಸಾಗಿತು.

* * *

"ಈ ಅಳುಗೂಬೆ ಎಲ್ಲಿ ಸಿಕ್ಕಿದ್ಲು ನಿಮ್ಗೆ ಈಗ್ಲಾದ್ರೂ ನಿಜ ಹೇಳ್ತೀರಾ ?" ಮಲಗುವ ಮೊದಲು ರಾಜಲಕ್ಷ್ಮಿ ಗಂಡನನ್ನು ದಬಾಯಿಸಿದಳು.

"ನಾನು ನಿಜಾನೇ ಹೇಳಿದ್ದು ರಾಜೀ..... ನನ್ಮೇಲೆ ನಂಬಿಕೆ ಇದೆ ಅಲ್ವಾ ? ..... ನಿನ್ನ ಅಕ್ಕ ತಂಗೀನೋ, ನನ್ನ ಅಕ್ಕ ತಂಗೀನೋ ಯಾರಾದ್ರೂ ಹೀಗೆ ಅಸಹಾಯಕ ಸ್ಥಿತೀಲಿ ಇದ್ರೆ ಸಹಾಯ ಮಾಡ್ತಾ ಇದ್ನೋ ಇಲ್ವೋ, ಹಾಗೇ ಅಂತ ಅಂದ್ಕೋ..."

"ಅಕ್ಕ ತಂಗೀರಾದ್ರೆ ಒಂದು ಸಂಬಂಧ ಅಂತ ಇರುತ್ತೆ. ಅಧಿಕಾರ ಇರುತ್ತೆ. ಇವಳೆಂಥಾ ಸಂಬಂಧ ನಿಮಗೆ ! ... ನಾಳೇನೇ ಕರ್ಕೊಂಡು ಹೋಗಿ, ಪೋಲಿಸ್ ಸ್ಟೇಷನ್‌ನಲ್ಲಿ ಬಿಟ್ಟು ಬನ್ನಿ. ಅವರು ಅವಳ ಗಂಡನನ್ನೋ, ಅಣ್ಣನನ್ನೋ ಹುಡುಕಿಸಿ ಕೊಡ್ತಾರೆ. ಮುಂದೆ ಅವಳ ಹಣೇ ಬರಹ ನಮಗೆಲ್ಲಿಯ ಕರ್ಮ ?" ಹಾಸಿಗೆಯ ಮೇಲಿನ ಧೂಳನ್ನು ಝಾಡಿಸಿದಳು.

"ಹೀಗೆ ಕಠಿಣವಾಗಿ ಮಾತಾಡ್ಬೇಡ ರಾಜೀ.... ಪಾಪ, ಕಂಕುಳಲ್ಲಿ ಒಂದು ಚಿಕ್ಕ ಮಗು ಇದೆ. ಮಗು ಹೊಟ್ಟೆ ಹಸಿವಿನಿಂದ ಅಳ್ತಾನೇ ಇತ್ತು. ನಂಗೆ ನಮ್ಮ ಶರೀಯ ನೆನಪು ಬಂತು. ಮನುಷ್ಯತ್ವದಿಂದ ಸಹಾಯ ಮಾಡ್ದೆ ಅಷ್ಟೆ ನಾನು, ಮುಂದೆ ಏನ್ಮಾಡ್ಬೇಕು ಅಂತ ಯೋಚಿಸ್ತೀನಿ. ನೀನು ತಲೆ ಕೆಡಿಸ್ಕೋಬೇಡ. ನಾಲ್ಕು ದಿನದಿಂದ ಒಂಟಿಯಾಗಿದ್ದು ಬೇಸರ ಆಗಿದೆ." ಎನ್ನುತ್ತಾ ಅವಳ ಬಳಿಗೆ ಸರಿದ.

"ಇವತ್ತು ನನ್ನ ಮನಸ್ಸು ಸರಿ ಇಲ್ಲ, ನೀವು ಹತ್ರ ಬರ್ಬೇಡಿ" ಅವಳು ದೂರ ಸರಿದಳು.

"ರಾಜೀ ಯಾಕೇ ಹೀಗಾಡ್ತೀಯ ? ನಾನು ನಿನ್ನ ಗಂಡ ಕಣೇ" ಎನ್ನುತ್ತಾ ಅವಳನ್ನು ಬಲವಂತವಾಗಿ ತನ್ನೆಡೆಗೆ ಎಳೆದುಕೊಂಡ. ಅವಳು ಅಷ್ಟೇ ಬಿರುಸಾಗಿ ಅವನನ್ನು ತಳ್ಳಿದಳು.

"ಆ ಹೆಂಗಸು ಈ ಮನೆಯಲ್ಲಿ ಇರೋವರ್ಗೂ ನನ್ನನ್ನ ಮುಟ್ಬೇಡಿ" ಕಿರುಚಿದಳು.

"ಶ್ , ಮೆಲ್ಲಗೆ ಮಾತಾಡೇ ಆಕೆಗೆ ಕೇಳಿಸೀತು. ಆಕೆ ಸದ್ಯಕ್ಕೆ ಈ ಮನೆಗೆ ಬಂದಿರುವ ಅತಿಥಿ.... ಆಕೆ ನೊಂದ್ಕೊಂಡಾಳು."

"ಅತಿಥಿಯಂತೆ ಅತಿಥಿ.... ಈ ಮೊದಲು ಹೀಗೆ ಯಾವ ಅತಿಥಿ ಎಂದು ಬಂದಿದಾರೆ?"

"ಪ್ಲೀಸ್ ರಾಜೀ.... ನನ್ನ ಸಹನೆಗೂ ಒಂದು ಮಿತಿ ಇದೆ. ವಿನಾಕಾರಣ ನೀನೇ ಏನೇನನ್ನೋ ಊಹಿಸ್ಕೊಂಡು ವಾದ ಮಾಡ್ಬೇಡ. ನಮ್ಮ ಮಗುವಿನ ಮೇಲೆ ಆಣೆ ಮಾಡಿ ಹೇಳ್ತೀನಿ. ನಿನ್ನ ಸಂದೇಹಕ್ಕೆ ತಲೆ ಬುಡ ಇಲ್ಲ"

"ಸಾಕು, ಅವನ ಮೇಲೆ ಯಾಕೆ ಆಣೆ ಹಾಕ್ತೀರಿ? ಅವನೇನು ನಿಮ್ಮ ಸ್ವಂತ ಮಗನಾ?"

"ರಾಜೀ..... ಏನು ಮಾತೂಂತ ಆಡ್ತೀದೀಯ.... ಎಂದೂ ಇಲ್ಲದ್ದು ?"

"ಹೌದ್ರಿ.... ಇಂದು ನಾನು ಆಡಲೇಬೇಕು. ನನಗೆ ಮಕ್ಕಳಾಗಲಿಲ್ಲ ಅನ್ನೋ ಅಸಮಾಧಾನ ನಿಮಗೆ ಇದ್ದೇ ಇದೆ. .... ಈಗ ಈ ಹೆಂಗಸು.... ಅವಳ ಕಂಕುಳಲ್ಲಿ ಒಂದು ಮಗು. ಇದಕ್ಕೇನು ಹೇಳ್ತೀರಿ?"

"ಒಬ್ಬ ಅಸಹಾಯಕ ಹೆಣ್ಣಿಗೆ ಸಹಾಯ ಮಾಡಿದೀನಿ ಅಂತ ಹೆಮ್ಮೆಯಿಂದ ಆಕೆಯನ್ನು ಮನೆಗೆ ಕರ್ಕೊಂಡು ಬಂದೆ. ಇಲ್ಲಿ ನಿನ್ನ ವರಸೆಯೇ ಬೇರೆ ಆಗಿದೆ. ಒಂದು ವೇಳೆ ನೀನೇ ಇಂಥಾ ಪರಿಸ್ಥಿತಿಗೆ ಸಿಕ್ಕಿ ಬಿದ್ದಿದ್ದರೆ ಏನ್ಮಾಡ್ತಿದ್ದೆ ?"

"ನಾನೂ ಹೀಗೆ ಒಬ್ಬ ಗಂಡಸನ್ನ ಮನೆಗೆ ಕರ್ಕೊಂಡು ಬಂದಿದ್ರೆ ಏನ್ಮಾಡ್ತಿದ್ರಿ ?"

"ಒಬ್ಬ ಗಂಡಸಿಗೆ, ಅಸಹಾಯಕ ಸ್ಥಿತಿ ಹೇಗೆ ಬರುತ್ತೆ ! ಇಂಥಾ ತಾಪತ್ರಯವೆಲ್ಲಾ ಹೆಂಗಸರಿಗೆ ತಾನೇ ! ಒಂದು ವೇಳೆ ನೀನು, ಅಸಹಾಯಕ ಸ್ಥಿತಿಯಲ್ಲಿರುವ ಯಾರನ್ನೇ ನಿನ್ನ ಜೊತೆ ಮನೆಗೆ ಕರೆದುಕೊಂಡು ಬಂದಿದ್ದರೆ ನಾನು ಹೀಗಾಡ್ತಿರಲಿಲ್ಲ"

"ಆಹಾಹಹಾ.... ಈಗ ಹೀಗೆ ಹೇಳ್ತಿದೀರಿ... ನಾನು ಆಕೆಯ ಎದುರಿಗೆ ಯಾವ ರಾದ್ಧಾಂತವನ್ನೂ ಮಾಡಿಲ್ಲ. ರೂಮಿನಲ್ಲಿ ನಿಮ್ಮನ್ನು ಪ್ರಶ್ನಿಸ್ತಿದೀನಿ.... ನನಗೂ ಮಾನ ಮರ್‍ಯಾದೆ ಅಂದ್ರೆ ಏನೂಂತ ಗೊತ್ತು. ನೀವು ಖಂಡಿತಾ ಹೀಗೆ ನಡೇದುಕೋಳ್ತಿರಲಿಲ್ಲ, ನಂಗೊತ್ತು."

"ನೀನು ಒಳ್ಳೆಯವಳು ರಾಜೀ..... ನೀನು ನಿಧಾನವಾಗಿ ಆಕೆಯ ಹತ್ತಿರ ಮಾತ್ನಾಡು. ಅವಳ ಸಮಸ್ಯೆ ಏನೂಂತ ತಿಳ್ಕೋ. ಏನಾದರೂ ಪರಿಹಾರವನ್ನು ಕಂಡು ಹಿಡಿಯೋಣ."

"ನನಗ್ಯಾಕ್ರೀ ಈ ಕರ್ಮ?"

"ನನ್ನಂಥ ಗಂಡನನ್ನ ಪಡೆದಿದೀಯಲ್ಲ, ಅದಕ್ಕೇ ಅಂತ ತಿಳ್ಕೊ. ಇನ್ಮುಂದೆ ನಿಂಗೆ ಇಂಥ ಇಕ್ಕಟ್ಟಿನ ಪ್ರಸಂಗ ಬರುವುದಿಲ್ಲ.. ಖಂಡಿತಾ ...." ಅವನು ಅವಳ ಭುಜವನ್ನು ತಟ್ಟಿ ತನ್ನ ಪಾಡಿಗೆ ತಾನು ಹೊದ್ದಿಕೆ ಹೊದ್ದು ಮಲಗಿದ. ಅವಳು ಗಂಡನನ್ನೇ ದಿಟ್ಟಿಸಿ ನೋಡಿ, ದೀಪವನ್ನಾರಿಸಿ ತಾನೂ ಮಲಗಿದಳು. ನಿದ್ದೆ ಬರುವಂತೆ ಅನ್ನಿಸಲಿಲ್ಲ

* * *

ರಾಜಲಕ್ಷ್ಮಿ ಹಾಗೂ ಯಶವಂತ ಒಬ್ಬರನ್ನೊಬ್ಬರು ಪ್ರೀತಿಸಿ ಮದುವೆಯಾಗಿದ್ದರು. ರಾಜಲಕ್ಷ್ಮಿಯ ತಂದೆ ತಾಯಿಗೆ ಸಮ್ಮತವಿರಲಿಲ್ಲ. ಯಶವಂತ ತಮ್ಮ ಜಾತಿಗೆ ಸೇರಿದವನಲ್ಲ ಎಂಬ ಕಾರಣ ಒಂದೇ ಅಲ್ಲದೆ, ಯಶವಂತ ಹೆಚ್ಚು ಅನುಕೂಲ ಸ್ಥಿತಿಯಲ್ಲಿಲ್ಲ ಎನ್ನುವ ಕಾರಣವೂ ಸೇರಿತ್ತು. ಮಗಳಿಗೆ ಸಾಕಷ್ಟು ತಿಳುವಳಿಕೆಯನ್ನು ಹೇಳಿದ್ದರು.

ಯಶವಂತನ ತಂಗಿ ನಿರ್ಮಲ ಹಾಗೂ ರಾಜಲಕ್ಷ್ಮಿ ಕಾಲೇಜಿನಲ್ಲಿ ಸಹಪಾಠಿ ಗಳಾಗಿದ್ದರು. ರಾಜಲಕ್ಷ್ಮಿ ಗೆಳತಿಯ ಮನೆಗೆ ಹೋದಾಗ, ಯಶವಂತನನ್ನು ಕಂಡಿದ್ದಳು. ಪರಿಚಯವಾಗಿತ್ತು. ಸ್ನೇಹ ಬೆಳೆಯಿತು. ನಂತರ ಪ್ರೀತಿ ಪ್ರಾರಂಭವಾಗಿತ್ತು. ನಿರ್ಮಲ ಮದುವೆಯಾಗಿ ವಿದೇಶಕ್ಕೆ ಹೊರಟು ಹೋಗಿದ್ದಳು.

ಯಶವಂತನ ತಂದೆ ತಾಯಿಗೂ ರಾಜಲಕ್ಷ್ಮಿ ಸೊಸೆಯಾಗಿ ಬರುವುದು ಇಷ್ಟವಿರಲಿಲ್ಲ. ತಾವು ಬೇರೆ ಹೆಣ್ಣನ್ನು ನೋಡಿ ಮದುವೆಯನ್ನು ಮಾಡುವುದಾಗಿ ಹೇಳಿದ್ದರೂ, ಅವನು ಒಪ್ಪಲಿಲ್ಲ. ಮದುವೆಯಾಗುವುದಾದರೆ ರಾಜಲಕ್ಷ್ಮಿಯನ್ನೇ, ಇಲ್ಲದಿದ್ದರೆ ಮದುವೆಯೇ ಬೇಡ ಎಂದು ಖಡಾಖಂಡಿತವಾಗಿ ಹೇಳಿದ್ದ.

ಇಬ್ಬರ ಮನೆಯವರ ವಿರೋಧಗಳ ನಡುವೆಯೂ , ಮದುವೆ ನೆರವೇರಿತ್ತು. ತಮ್ಮ ಮನೆಯ ರೀತಿ ನೀತಿ ಆಚರಣೆ, ರಾಜಲಕ್ಷ್ಮಿಗೆ ಸರಿಹೋಗುವುದಿಲ್ಲವೆಂದು ಅರಿತ ಯಶವಂತ ಬೇರೆ ಸಂಸಾರವನ್ನು ಹೂಡಿದ. ಸೈನ್ಸ್ ಪದವೀಧರನಾಗಿದ್ದವನು, ತಾನೇ ಒಂದು ಬಿಸಿನೆಸ್‌ನ್ನು ಪ್ರಾರಂಭಿಸಲು ಯೋಚಿಸಿದ. ಕೆಲವು ಆತ್ಮೀಯ ಗೆಳೆಯರ ಸಹಕಾರದಿಂದ, ಬ್ಯಾಂಕಿನಲ್ಲಿ ಸಾಲವನ್ನು ತೆಗೆದುಕೊಂಡು ಒಂದು ಹೊಸ ಆಫೀಸನ್ನು ಪ್ರಾರಂಭಿಸಿದ. ಕೆಲವು ಔಷಧ ಸಂಸ್ಥೆಗಳ ಏಜೆನ್ಸಿಗಳನ್ನು ತೆಗೆದುಕೊಂಡು, ಸಂಪಾದನೆಗಾಗಿ ಕಷ್ಟಪಡುತ್ತಿದ್ದ ಮಾರ್ಕೆಟಿಂಗ್‌ಗಾಗಿ ಬೇರೆ ಬೇರೆ ಊರುಗಳಿಂದ ಹೋಗಬೇಕಾಗುತ್ತಿತ್ತು. ಅಂಥ ಸಮಯಗಳಲ್ಲಿ ಮನೆಯಲ್ಲಿ ರಾಜಲಕ್ಷ್ಮಿ ಒಬ್ಬಳೇ ಆಗಿ ಬಿಡುತ್ತಿದ್ದಳು. ಒಮ್ಮೊಮ್ಮೆ ಯಶವಂತ ಹೇಳುತ್ತಿದ್ದ.

"ಬೇಕಾದರೆ ನಿಮ್ಮ ತಂದೆಯ ಮನೆಗೆ ಹೋಗಿ ಬಾ, ಇಲ್ಲಿ ಒಬ್ಬಳೇ ಇದ್ದು ಏನ್ಮಾಡ್ತೀಯ ಅಂತ" ಅವಳು ತಲೆಯನುನ ಅಡ್ಡಡ್ಡ ಆಡಿಸುತ್ತಿದ್ದಳು.

"ಇಲ್ಲ, ನಾನು ತವರಿಗೆ ಹೋಗುವುದಿಲ್ಲ. ಅಲ್ಲಿ ನಿಮ್ಮ ಬಗ್ಗೆ ಯಾರಿಗೂ ಆದರ ವಿಲ್ಲ. ನಿಮ್ಮ ಬಗ್ಗೆ ತಾತ್ಸಾರ. ನನಗೆ ಬೇಸರವಾಗುತ್ತದೆ" ಎನ್ನುತ್ತಿದ್ದಳು.

"ಅದಕ್ಕೆ ನಿಂಗ್ಯಾಕೆ ಬೇಸರ. ನೀನೇನು ಸದಾ ಕಾಲಕ್ಕೂ ಅಲ್ಲಿ ಇರಬೇಕಾಗಿಲ್ಲವಲ್ಲ. ನಮ್ಮ ಮನೆಗೆ ಹೋಗು ಅಂತ ಹೇಳಬಹುದು. ಆದರೆ ಅಮ್ಮನಿಗೆ ನಿನ್ನನ್ನು ಕಂಡರೆ ಅಷ್ಟಕ್ಕಷ್ಟೇ."

"ಹೌದೂರೀ.... ಅವರುಗಳಿಗೆ ನಾವುಗಳು ಬೇಡವಾದಾಗ ನಾವ್ಯಾಕೆ ಹೋಗಿ, ನಮ್ಮನ್ನು ನಾವು ಕಡಿಮೆ ಅಂತ ಅನ್ನಿಸ್ಕೋಳ್ಬೇಕು. ನಾನು ಎಲ್ಲಿಗೂ ಹೋಗುಲ್ಲ..."

"ಬೇಜಾರು ಮಾಡ್ಕೋಬೇಡ ಚಿನ್ನಾ. ನಾನೂ ಯಾರಿಗೂ ಕಡಿಮೆ ಇಲ್ಲ ಅನ್ನುವ ದಿನಗಳು ಖಂಡಿತಾ ಬರುತ್ತೆ. ನನಗೂ ನಿನ್ನನ್ನು ಸುಖವಾಗಿಟ್ಟುಕೊಳ್ಬೇಕು ಅಂತ ಆಸೆ." ಅವಳು ಅವನ ಎದೆಗೆ ಒರಗಿದಳು.

"ನಾನೂ ಕೆಲಸಕ್ಕೆ ಸೇರಿಕೊಳ್ತೀನಿ..... ಸುಮ್ಮನೆ ಮನೇಲಿ ಕುಳಿತು ಏನ್ಮಾಡ್ಲಿ ?"

"ಏನೂ ಬೇಡ. ನಿನ್ನನ್ನ ಕೆಲಸಕ್ಕೆ ಕಳಿಸಿ, ಸಂಪಾದನೆ ಮಾಡುವ ಅಗತ್ಯವಿಲ್ಲ. ಸುಮ್ಮನೇ ಮನೇಲಿರು. ನಾನು ಗಂಡಸು. ಸಂಪಾದಿಸಿ, ಹೆಂಡತಿಯನ್ನು ಸಾಕುವ ಯೋಗ್ಯತೆ ನನಗಿದೆ." ಬಿರುಸಾಗಿ ನುಡಿದಿದ್ದ.

"ಮನೇಲಿ ಕಾಲ ಕಳೆಯೋಕೆ ಕಷ್ಟ ಆಗುತ್ತೆ. ಅದಕ್ಕೇ ಹೇಳ್ದೆ. ಒಂದು ಮಗೂನಾದ್ರೂ ಇದ್ದಿದ್ರೆ ನನಗೆ ಸಮಯವೇ ಸಾಕಾಗ್ತಿರಲಿಲ್ಲ." ಅವಳು ತನ್ನಾಸೆಯನ್ನು ವ್ಯಕ್ತ ಪಡಿಸಿದ್ದಳು. ಅವನು ಅವಳ ತಲೆಯ ಮೇಲೆ ಕೈಯಾಡಿಸಿದ.

"ಈಗ್ಲೇ ಮಕ್ಕಳು ಬೇಡ ರಾಜೀ......"

"ಯಾಕೆ ? ಒಂದು ಮಗುವನ್ನು ಸಾಕುವಷ್ಟು ಬಡತನ ನಮಗೆ ಬಂದಿಲ್ಲವಲ್ಲ."

"ಹಾಗಲ್ಲ . ನಮ್ಮ ಜವಾಬ್ದಾರಿ ಹೆಚ್ಚುತ್ತೆ.... ಅಲ್ಲದೇ ನಿನ್ನ ಸೌಂದರ್ಯ ಕಡಿಮೆ ಆಗಿ ಬಿಡುತ್ತೆ ರಾಜೀ....ಈಗ ನೀನು ಹುಡುಗಿಯ ಹಾಗೆ ಇದೀಯ. ದೊಡ್ಡ ಹೆಂಗಸಾಗಿ ಬಿಡ್ತೀಯ. .... ನಿನ್ನನ್ನು ನೀನು ನೋಡ್ಕೊಳ್ಳೋಕೆ ಸಮಯವೇ ಇರುಲ್ಲ" ಲಘುವಾಗಿ ಹೆದರಿಸಿದ.

"ಗರ್ಭಿಣಿ ಆದರೆ, ನನ್ನ ಸೌಂದರ್ಯ ಇಮ್ಮಡಿಯಾಗುತ್ತೆ.... ತಾಯಿಯಾಗುವ ಆನಂದವನ್ನು ನಾನು ಅನುಭವಿಸಬೇಕು ... ಗಳಿಗೆ ಗಳಿಗೆಗೂ ಸಿಗುವ ಅನುಭವಗಳನ್ನು ಆನು ಹೊಂದಬೇಕು. ನಾನು ಆದಷ್ಟು ಬೇಗ ತಾಯಿಯಾಗಲೇ ಬೇಕು. ..." ಅವಳು ಮೂತಿ ಉದ್ದಮಾಡಿ ನುಡಿದಾಗ ಅವನು ನಸುನಕ್ಕು ಮುದ್ದಿಸಿ, ತಲೆಯಾಡಿಸಿದ.

"ಸರಿ. ನಿನ್ನ ಆಸೆ ಬೇಗ ನೆರವೇರಲಿ ಅಂತ ಹಾರೈಸ್ತೀನಿ...." ಎನ್ನುತ್ತಾ ಅವಳನ್ನು ತನ್ನೆಡೆಗೆ ಬರಸೆಳೆದು ಆಲಂಗಿಸಿದ. ಸುಖದ ದಿನಗಳು ಸರಿದಿದ್ದವು. ಆದರೆ ರಾಜಲಕ್ಷ್ಮಿ ಗರ್ಭವತಿಯಾಗುವ ಸೂಚನೆ ಕಂಡು ಬಂದಿರಲಿಲ್ಲ. ಅವಳಿಗೆ ಆತಂಕ ಪ್ರಾರಂಭವಾಗಿತ್ತು. ಯಶವಂತ ಆ ಬಗ್ಗೆ ತಲೆ ಕೆಡಿಸಿಕೊಂಡಿರಲಿಲ್ಲ. ಅವನು ತನ್ನ ಟೂರ್‌ಗಳಲ್ಲಿ ನಿರತನಾಗಿದ್ದ. ಒಮ್ಮೆ ಅವನು ಊರಿನಲ್ಲಿರುವಾಗ ಅವಳು ಅವನ ಮೇಲೆ ಹರಿಹಾಯ್ದಳು.

"ನೀವು ಟೂರ್ ಟೂರ್ ಅಂತ ಸದಾ ಹೊರಗೇ ತಿರುಗಾಡ್ಕೊಂಡು ಹಾಯಾಗಿದೀರಿ. ಇಲ್ಲಿ ನನ್ನ ಸ್ಥಿತಿ ಏನಾಗಿದೆ ಅಂತ ವಿಚಾರಿಸುಕ್ಕಾದ್ರೂ ನಿಮಗೆ ಸಮಯ ಇದೆಯಾ ?"

"ಏನಾಗಿದೆಯೇ ರಾಜಿ ನಿಂಗೆ .... ನಾನು ಈಗ ವಿಚಾರಿಸ್ತಿದೀನಿ. ಏನು ಬೇಕು ಹೇಳು."

"ನನಗೆ ಒಂದು ಮಗು ಬೇಕು."

"ಮಗು ಬೇಕು ಅಂತಂದ್ರೆ ಅದನ್ನು ನೀನು ನಂಗೆ ಹೆತ್ತು ಕೊಡ್ಬೇಕು ಅಲ್ವಾ ?"

"ಸಾಕು ನಿಮ್ಮ ತಮಾಷೆ.... ನಾನು ಪ್ಲ್ಯಾನ್‌ನೂ ಮಾಡ್ತಿಲ್ಲ, ನಾನು ಗರ್ಭಿಣಿಯಾಗಿಲ್ಲ."

"ಇದಕ್ಕೆ ನಾನೇನು ಹೇಳ್ಲಿ ರಾಜೀ...... ನಿಧಾನವಾಗಿ ಆಗಲಿ ಬಿಡು...."

"ಈ ಮಾತೇ ನನಗೆ ಇಷ್ಟವಾಗುಲ್ಲ... ಮೊದಲು ಡಾಕ್ಟರ್ ಹತ್ರ ಹೋಗಿ ಟೆಸ್ಟ್

ಮಾಡಿಸ್ಕೊಳ್ಳಿ."

"ನಾನಾ ! .... ನಂಗ್ಯಾಕೇ ಟೆಸ್ಟ್ . ನಾನು ಗಂಡಸು... ಸರಿಯಾಗೇ ಇದೀನಿ."

"ಈ ದುರಹಂಕಾರ ಬೇಡ. ಈ ಕಾಲ್ದಲ್ಲಿ ಗಂಡಸ್ರೂ ಟೆಸ್ಟ್ ಮಾಡಿಸ್ಕೊಳ್ಳಲೇ ಬೇಕು. ನೀವು ಈ ಟೂರು ಗೀರನ್ನು ಕಡಿಮೆ ಮಾಡಿ. ಡಾಕ್ಟರ ಸಲಹೆ ತಗೊಳ್ಳಿ...."

"ಅಂದ್ರೆ..... ನೀನು ....?"

"ನಾನು ಸರಿಯಾಗಿದೀನಿ ಅನ್ನೋ ನಂಬಿಕೆ ನನಗಿದೆ...."

"ಸರಿ ಹಾಗಾದ್ರೆ. ಯಾವ ಡಾಕ್ಟರ್ರೂ ಬೇಡ. ಇನ್ನೊಂದಿಷ್ಟು ದಿನ ಕಾಯೋಣ..."

"ಕಾಯ್ತಾನೇ ಇರಿ. ಆಮೇಲೆ ನಾವು ಮುದುಕರಾಗಿ ಬಿಡ್ತೀವಿ...." ಅವಳ ಮಾತಿಗೆ ಅವನು ಮುಕ್ತವಾಗಿ ನಕ್ಕ.

"ನೀವು ನಗ್ಬೇಡಿ ನನಗೆ ಕೆಟ್ಟ ಕೋಪ ಬರುತ್ತೆ.... ಡಾಕ್ಟರ್ ಹತ್ರ ಯಾವಾಗ ಹೋಗ್ತೀರಿ. ಅದನ್ನು ಹೇಳಿ..."

"ಆಯ್ತು.... ನಾನು ಸದ್ಯದಲ್ಲೇ ಹೋಗ್ತೀನಿ. ಈಗ ಈ ವಿಷಯದ ಬಗ್ಗೆ ಚರ್ಚೆ ಸಾಕು."

"ಯಾಕ್ರೀ. ನನ್ನ ಮಾತ್ನಿಂದ ಬೇಸರ ಆಯ್ತು ?"

"ಬೇಸರ ಆಗ್ದೇ ಇರುತ್ತಾ ರಾಜೀ.... ನಾನು ಮನೆಯಲ್ಲಿ ಇರೋದೇ ಕಡಿಮೆ. ಸಮಯ ಸಿಕ್ಕಾಗ ಸರಸವಾಡಿಕೊಂಡಿರೋಣ ಅಂತ ನನಗೆ ಆಸೆ.... ನೀನು ನನ್ನ ಮೂಡ್‌ನ ಕೆಡಿಸಿ ಬಿಡ್ತೀಯ"

"ನಂಗೆ ಒಂದು ಮಗುವಾಗಲಿ. ಆಮೇಲೆ ನಾನು ನಿಮ್ಮನ್ನು ಏನನ್ನೂ ಕೇಳುಲ್ಲ.... ನೀವು ಏನು ಬೇಕಾದ್ರೂ ಮಾಡ್ಕೊಳ್ಳಿ "

"ನೋಡಿದ್ಯಾ ! ಮತ್ತೆ ಅದೇ ಮಾತಿಗೆ ಬಂದ್ಯಲ್ಲಾ..."

"ಏನ್ಮಾಡ್ಲಿ ಹೇಳಿ.... ನಾನು ತಾಯಿಯಾಗ್ಬೇಕು ಅಂತ ಆಸೆ ಪಡೋದು ತಪ್ಪಾ...." ಅವಳು ನಡುಗುವ ದನಿಯಲ್ಲಿ ಕೇಳಿದಾಗ ಅವನು ಮೆತ್ತಗಾದ....

"ಸಾರೀ ರಾಜೀ....ನನಗೆ ನಿನ್ನ ಆಸೆ ಅರ್ಥವಾಗುತ್ತದೆ...." ಎಂದು ಸಮಾಧಾನ ಹೇಳಿದ.

ಆನಂತರ ಅವನಿಗೂ ಹೆಂಡತಿಯ ಮಾತುಗಳು ತಲೆಯನ್ನು ಕೊರೆಯಲಾರಂಭಿಸಿತು. ತಾವಿಬ್ಬರೂ ಅನ್ಯೋನ್ಯವಾಗಿದೀವಿ. ಆದರೂ ರಾಜಿಗೆ ಸುಖವಿಲ್ಲ, ಇವಳಿಗೊಂದು ಮಗುವಾಗಿಬಿಟ್ಟರೆ ಆಗ ಯಾವ ಆಕ್ಷೇಪಣೆಯೂ ಇರುವುದಿಲ್ಲ ಎಂದುಕೊಂಡು ಡಾಕ್ಟರರ ಸಲಹೆಯನ್ನು ಪಡೆಯಲು ನಿಶ್ಚಯಿಸಿದ. ಬಿಡುವು ಮಾಡಿಕೊಂಡು ಡಾಕ್ಟರ ಬಳಿಗೆ ಹೋಗಿ ಬಂದ. ರಿಪೋರ್ಟ್‌ನ್ನು ತೆಗೆದುಕೊಂಡು ಬರುವುದೊಂದು ಬಾಕಿ ಉಳಿದಿತ್ತು.

ಮತ್ತೆ ಹೆಂಡತಿ ಪದೇ ಪದೇ ನೆನಪು ಮಾಡಿದ ಮೇಲೆ ರಿಪೋರ್ಟ್‌ನ್ನು ತೆಗೆದುಕೊಂಡು, ಡಾಕ್ಟರ್ ಬಳಿ ಮಾತನಾಡಿದ. ಅವನಿಗೆ ತಾನು ಎಲ್ಲಾ ರೀತಿಯಿಂದಲೂ ಸರಿಯಾಗಿರುವ

ವಿಷಯ ತಿಳಿದು ಖುಷಿಯೂ ಆಯಿತು. ಹಾಗೇ, ಆತಂಕವೂ ಆಗಿತ್ತು.

"ನಮಗೆ ಮದುವೆಯಾಗಿ ಎರಡು ವರ್ಷಗಳಾಯ್ತು. ನಮಗೆ ಮಕ್ಕಳಾಗಲಿಲ್ಲ. ನನ್ನ ಹೆಂಡತಿ ಒತ್ತಾಯ ಮಾಡಿದ್ದರಿಂದ ನಾನು ಪರೀಕ್ಷೆ ಮಾಡಿಸಿಕೊಂಡೆ. ಆದರೆ ...."

"ನಿಮ್ಮ ಪತ್ನಿ ಪರೀಕ್ಷೆ ಮಾಡಿಸಿಕೊಂಡಿದಾರಾ ?" ಡಾಕ್ಟರು ಕೇಳಿದರು.

"ಹೂಂ, ಅಂತ ಕಾಣುತ್ತೆ. ನಾನು ಹೆಚ್ಚು ಊರಿನಲ್ಲಿರುವುದಿಲ. ಅವಳು ಸರಿಯಾಗಿದಾಳೆ ಅಂತ ನನ್ನ ಭಾವನೆ.... ಅವಳಿಗೆ ಬೇಸರವಾಗಬಾರದು ಅಂತ ನಾನು ಕೇಳಿಲ್ಲ"

"ಇದೊಳ್ಳೆ ಚನ್ನಾಗಿದೆ. ಅವರು ಹೇಳಿದ್ರು ಅಂತ ನೀವು ಟೆಸ್ಟ್ ಮಾಡಿಸಿಕೊಳ್ತೀದೀರಿ. ಆದರೆ ಅವರು ಪರ್ಫೆಕ್ಟ್ ಆಗಿದಾರೋ ಇಲ್ವೋ ಅಂತ ನಿಮಗೆ ಗೊತ್ತಿಲ್ಲ" ನಕ್ಕರು.

"ನಾನು ಅವಳನ್ನು ತುಂಬಾ ಪ್ರೀತಿಸ್ತಿನಿ ಡಾಕ್ಟರ್...."

"ಪ್ರೀತಿ ಬೇರೆ, ವಾಸ್ತವ ಬೇರೆ. ಮಕ್ಕಳಾಗಲಿಲ್ಲ ಅನ್ನುವ ಕಾರಣಕ್ಕೆ ನಿಮ್ಮಿಬ್ಬರ ಮಧ್ಯೆ ವೈಮನಸ್ಯ ಬರಬಹುದು. ಅವರ ಹತ್ತಿರ ನೇರವಾಗಿ ಮಾತನಾಡಿ ಅವರಲ್ಲಿ ಏನಾದರೂ ತೊಂದರೆ ಇದ್ದರೆ ಅದಕ್ಕೆ ಪರಿಹಾರಗಳೂ ಇರುತ್ತವೆ. ಆಲ್ ದಿ ಬೆಸ್ಟ್" ಎಂದು ಹೇಳಿ ಕಳುಹಿಸಿಕೊಟ್ಟರು.

ಯಶವಂತನ ಆತಂಕದ ಮುಖವನ್ನು ಕಂಡು ರಾಜಲಕ್ಷ್ಮಿ ಕಳೆಗುಂದಿದಳು. ರಿಪೋರ್ಟ್‌ನಲ್ಲಿ ಏನಿದೆ ಅಂತ ಕೇಳಲು ಹಿಂಜರಿದಳು. ಅವನು ಅವಳಿಗೆ ಕಾಣುವಂತೆ ರಿಪೋರ್ಟ್‌ಗಳನ್ನಿಟ್ಟು ತನ್ನ ಪಾಡಿಗೆ ತಾನು ಆಫೀಸಿಗೆ ಹೊರಟು ಹೋದ. ಅವಳು ಕುತೂಹಲವನ್ನು ತಡೆಯಲಾರದೇ ರಿಪೋಟ್ಸ್‌ಗಳನ್ನು ತೆರೆದು ನೋಡದಳು. ಮನಸ್ಸಿಗೆ ಸಮಾಧಾನವಾಗಿತ್ತು. ಆದರೆ ಮರುಗಳಿಗೆಯೇ ಮಂಕು ಕವಿದಂತಾಂಗಿತ್ತು. ಅಂದರೆ.... ತನ್ನ ಗಂಡನಲ್ಲಿ ಏನೂ ದೋಷವಿಲ್ಲ ... ಹಾಗಾದ್ರೆ ತನ್ನಲ್ಲಿ ಖಂಡಿತಾ ದೋಷವಿದೆ. ಹಾಸಿಗೆಯ ಮೇಲೆ ದೊಪ್ಪನೆ ಕುಳಿತಳು. ಈ ಬಗ್ಗೆ ತಾನೇಕೆ ಮೊದಲೇ ಯೋಚಿಸಲಿಲ್ಲ! ತಾನು ಸರಿಯಾಗಿದ್ದೇನೆಂಬ ಪ್ರಬಲ ನಂಬಿಕೆ ನನ್ನಲ್ಲಿತ್ತು.... ಆದರೆ ಈಗ ? .... ಕೈಗಳಿಂದ ಮುಖವನ್ನು ಮುಚ್ಚಿ ಅತ್ತಳು. ಸ್ವಲ್ಪ ಹೊತ್ತಿನ ನಂತರ ತನಗೆ ತಾನೇ ಸಮಾಧಾನ ಮಾಡಿಕೊಂಡಳು. ತನ್ನ ದುಗುಡವನ್ನು ಅದಮಿಟ್ಟಳು... ಈ ಬಗ್ಗೆ ಗಂಡ ಹೆಂಡತಿಯರಲ್ಲಿ ಮಾತುಕತೆ ಮುಂದುವರೆಯಲಿಲ್ಲ.

ಮತ್ತೊಮ್ಮೆ ಅವನು ಟೂರ್ ಹೋಗಿದ್ದಾಗ, ರಾಜಲಕ್ಷ್ಮಿ ಒಬ್ಬ ಲೇಡಿ ಡಾಕ್ಟರರ ಬಳಿಗೆ ಹೋಗಿ ತನ್ನ ಸಮಸ್ಯೆಗಳನ್ನು ಹೇಳಿಕೊಂಡಳು. ಅವರು ಎಲ್ಲಾ ವಿವರಗಳನ್ನು ಕೇಳಿ ತಿಳಿದುಕೊಂಡು, ಗರ್ಭಕೋಶಕ್ಕೆ ಸಂಬಂಧಿಸಿದಂತೆ ಪ್ರತಿಯೊಂದು ಪರೀಕ್ಷೆಯನ್ನು ಮಾಡಿದರು. ರಿಪೋರ್ಟ್‌ನ್ನು ಅವಳ ಕೈಗೆ ಕೊಡುವ ಮೊದಲು ಸಂತೈಸುವಂತೆ ಮಾತನಾಡಿದರು.

ನಿಮ್ಮ ಗರ್ಭಕೋಶದಲ್ಲಿ ಸಣ್ಣ ಸಮಸ್ಯೆ ಇದೆ. ಅದನ್ನು ಸಣ್ಣ ಆಪರೇಷನ್ ಮಾಡಿ ಸರಿಪಡಿಸಬಹುದು. ಆದರೆ, ಅದಕ್ಕೆ ಮೊದಲು ನಾನು ನಿಮ್ಮ ಯಜಮಾನರ ಬಳಿ ಮಾತನಾಡಬೇಕು. ಅವರನ್ನು ಕರೆದುಕೊಂಡು ಬನ್ನಿ. ಆತಂಕ ಪಡುವ ಕಾರಣವಿಲ್ಲ ಎಂದು ಮತ್ತೆ ಮತ್ತೆ ಹೇಳಿ ಕಳಿಸಿದ್ದಳು. ಆದರೆ ರಾಜಲಕ್ಷ್ಮಿ ಕಂಗೆಟ್ಟಳು. ಗಂಡ ಊರಿಗೆ ಬರುವುದನ್ನೇ

ಕಾದಿದ್ದು ಬಂದೊಡನೆ ಅವನನ್ನು ತಬ್ಬಿಕೊಂಡು ಅತ್ತಳು.

"ಏನಾಯ್ತು ಚಿನ್ನಾ ? ... ಅಮ್ಮ ಏನಾದ್ರೂ ಬಂದಿದ್ಲಾ ? ನಿಮ್ಮಿಬ್ಬರಲ್ಲಿ ಏನಾದ್ರೂ ಮಾತುಕತೆ ಆಯ್ತಾ ?.... " ಅವಳನ್ನು ಬಳಿಯಲ್ಲಿ ಕೂರಿಸಿಕೊಂಡು ಕೇಳಿದ.

"ನನ್ನ ಅನುಮಾನ ನಿಜವಾಯ್ತು ರೀ... ನನಗೆ ಮಕ್ಕಳಾಗುವುದೇ ಇಲ್ಲ. ನನ್ನನ್ನು ಎಲ್ಲರೂ ಬಂಜೆ ಅಂತ ಅಂತಾರೆ... ನಾನು ಹೇಗೆ ಬದುಕಿರಲಿ ?" ಬಿಕ್ಕಿದಳು.

"ಹಾಗಂದೋರು ಯಾರು !.... ನಾನು ಪರೀಕ್ಷೆ ಮಾಡಿಸ್ಕೊಂಡು ಬಂದಿದ್ದೆನಲ್ಲ"

"ನೀವು ಸರಿಯಾಗಿದೀರಿ. ಆದರೆ ನಾನೇ ಸರಿಯಾಗಿಲ್ಲ. ನನಗೆ ಗರ್ಭಕೋಶದಲ್ಲಿ ತೊಂದರೆ ಇದೆ. ಆಪರೇಷನ್ ಆಗಬೇಕಂತೆ. ... ನನಗೆ ಭಯ ಆಗುತ್ತೆ." ಮತ್ತೆ ಅತ್ತಳು.

"ನೀನು ಹೀಗೆ ಅತ್ತರೆ ನಾನು ಏನು ಹೇಳಲಿ ? ನಿಧಾನವಾಗಿ ಏನು ವಿಷಯ ಅಂತ ನಂಗೆ ಹೇಳು. ನಂಗೆ ಕಾಫಿ ತಿಂಡಿ ಏನನ್ನಾದ್ರೂ ಕೊಡು. ತುಂಬಾ ಹೊಟ್ಟೆ ಹಸಿದಿದೆ." ಅವನು ಮಾತಿನ ಜಾಡನ್ನು ಬದಲಾಯಿಸಲು ನೋಡಿದ. ಅವಳು ಕಣ್ಣೊರೆಸಿಕೊಂಡು ಎದ್ದಳು. ಅವನು ಬಾತ್‌ರೂಂ ಕಡೆಗೆ ನಡೆದ.

ಅವಳು ತಿಂಡಿ ಕಾಫಿಯನ್ನು ತಂದಿತ್ತು ಹೊರಡಲಿದ್ದವಳನ್ನು ಕೈ ಹಿಡಿದು ತನ್ನ ಬಳಿ ಕೂರಿಸಿಕೊಂಡ. "ನೀನು ಇಷ್ಟು ವರಿ ಮಾಡ್ಕೋಬೇಡ ರಾಜಿ. .... ಇದೆಲ್ಲ ಏನು ಮಹಾ ದೊಡ್ಡ ವಿಷಯ? ಇದಕ್ಯಾಕೆ ಇಷ್ಟು ತಲೆ ಕೆಡಿಸಿಕೊಳ್ತೀಯ ?...."

"ನಿಮಗೆ ಇದು ಸಣ್ಣ ವಿಷಯ ಇರಬಹುದು. ಆದರೆ ನನಗೆ ಹಾಗಲ್ಲ. ನಾವು ಪ್ರೀತಿಸಿ ಮದುವೆಯಾದೆವು. ನಮ್ಮ ಮದುವೆಗೆ ಹಿರಿಯರ ವಿರೋಧವಿತ್ತು. ನನ್ನ ಅಪ್ಪ ಅಮ್ಮನಿಗೆ ನಾನು ಬೇಸರ ಮಾಡಿದೆ. ಅವರ ಶಾಪ ನನಗೆ ತಟ್ಟಿದೆ. ನಾನು ನೆಮ್ಮದಿಯಿಂದ ಹೇಗೆ ಇರಲಿ ನೀವೇ ಹೇಳಿ ?"

"ಶಾಪ ಗೀಪ ಎಲ್ಲಾ ಏನೂ ಇಲ್ಲ. ಅದನ್ನೆಲ್ಲ ನಂಬಬೇಡ.... ಡಾಕ್ಟರು ಹೇಳಿದ ಹಾಗೆ ಕೇಳೋಣ. ಆಪರೇಷನ್ ಮಾಡಿಸಿದರೆ ಎಲ್ಲಾ ಸರಿ ಹೋಗುತ್ತೆ ಅಂತ ಡಾಕ್ಟರು ಭರವಸೆ ಕೊಟ್ಟರೆ ಅದನ್ನು ಮಾಡಿಸ್ಕೋ..."

"ಆಪರೇಷನ್ನಾ ? ನಂಗೆ ಭಯ ಆಗುತ್ತೆ.... ನಾನು ಸತ್ತು ಹೋದರೆ ?"

"ಛೀ..... ಹಾಗ್ಯಾಕೆ ಹೇಳ್ತೀಯ. ನಾನು ಡಾಕ್ಟರ್ ಹತ್ರ ಮಾತಾಡ್ತೀನಿ. ಬೇರೆ ಏನಾದ್ರೂ ಉಪಾಯ ಇದೆಯೋ ಅಂತ ಕೇಳ್ತೀನಿ. ನೀನು ಕೊರಗಬೇಡ" ಅವಳನ್ನು ಸಂತೈಸಿದ... ಅವಳಿಗೋಸ್ಕರ ಬಿಡುವು ಮಾಡಿಕೊಂಡು ಇಬ್ಬರೂ ಡಾಕ್ಟರರ ಬಳಿಗೆ ಬಂದರು. ಆಕೆ ಹೇಳಿದರು.

"ನಿಮ್ಮ ಪತ್ನಿಯ ಗರ್ಭಕೋಶದಲ್ಲಿ ತೊಂದರೆ ಇದೆ. ಸ್ಕ್ಯಾನಿಂಗ್ ಮಾಡಿದರೆ ಏನು ತೊಂದರೆ ಅಂತ ನಿಖರವಾಗಿ ಗೊತ್ತಾಗುತ್ತೆ. ಆ ನಂತರ ಒಂದು ಸಣ್ಣ ಆಪರೇಷನ್ ಮಾಡಬೇಕಾಗುತ್ತದೆ. ನಿಮ್ಮಿಬ್ಬರಿಗೆ ಒಪ್ಪಿಗೆ ಇದ್ದರೆ ಆದಷ್ಟು ಬೇಗ ಆಪರೇಷನ್ ಮಾಡುತ್ತೇವೆ...."

"ಇವಳಿಗೆ ಆಪರೇಷನ್ ಅಂದರೆ ಭಯ. ಇದಲ್ಲದೇ ಬೇರೆ ಏನೂ ಉಪಾಯ ಇಲ್ಲವಾ

? " ಅವನು ಮುಗ್ಧನಂತೆ ಕೇಳಿದ್ದ. ಆಕೆ ನಕ್ಕಳು.

"ನಮಗೆ ತಿಳಿದ ಉಪಾಯವನ್ನು ನಾವು ತಿಳಿಸಿದ್ದೇವೆ. ಇನ್ನೇನೇ ಇದ್ದರೂ ನಿರ್ಧಾರ ನಿಮ್ಮದು. ಇದನ್ನು ಬಿಟ್ಟು ಬೇರೆ ಯಾವ ಸಲಹೆಯನ್ನೂ ನಾನು ಕೊಡ್ಲಾರೆ."

"ಯೋಚಿಸಿ ನಿರ್ಧಾರವನ್ನು ತಗೋತೀನಿ" ಎಂದು ಹೇಳಿ ಇಬ್ಬರೂ ಹೊರಬಂದರು.

ರಾಜಲಕ್ಷ್ಮಿ ಆಪರೇಷನ್ ಮಾಡಿಸಿಕೊಳ್ಳಲು ಒಪ್ಪಿಗೆಯನ್ನು ಕೊಡಲಿಲ್ಲ. ಆ ನಂತರ ಮಕ್ಕಳಾಗುತ್ತೆ ಅಂತ ಏನು ಗ್ಯಾರಂಟಿ ! ನನಗೆ ಈ ಡಾಕ್ಟರ ಮೇಲೆ ನಂಬಿಕೆಯೇ ಬರ್ತಿಲ್ಲ. ಖರ್ಚು, ಶ್ರಮ, ನೋವು ಯಾವುದನ್ನೂ ಅನುಭವಿಸಲು ನಾನು ಸಿದ್ಧಳಿಲ್ಲ. ದೇವರ ಇಚ್ಛೆ ಇದ್ದರೆ ಮಕ್ಕಳಾಗಲಿ, ಇಲ್ಲದಿದ್ದರೆ ಹೀಗೇ ಇದ್ದು ಬಿಡ್ತೀನಿ. ಅವಳು ಉದ್ವೇಗದಿಂದ ನುಡಿದಳು. ಅವನು ಸುಮ್ಮನೇ ಅವಳ ಕಡೆ ನೋಡಿದ.

ಇಬ್ಬರೂ ದೇವಸ್ಥಾನಗಳಿಗೆ ಹೋಗಿ ಬಂದರು , ಕೆಲವು ಪುಣ್ಯಕ್ಷೇತ್ರಗಳಿಗೆ ಹೋಗಿ ಬಂದರು. ಅಲ್ಲಿ ಯಾರದ್ದೋ ಒಬ್ಬರ ಸಲಹೆಯಂತೆ ಪ್ರಸಿದ್ಧ ಜ್ಯೋತಿಷ್ಯಿಯೊಬ್ಬರ ಬಳಿಗೆ ಹೋದರು. ಅವರು ಜಾತಕವನ್ನು ಕೂಲಂಕಷವಾಗಿ ಪರೀಕ್ಷಿಸಿದರು. ನಂತರ ತಲೆಯಾಡಿಸಿದರು.

"ಮಕ್ಕಳಾಗುವ ಯೋಗ ನಿಮ್ಮ ಜಾತಕದಲ್ಲಿ ಕಂಡು ಬರುತ್ತಿಲ್ಲ... ಆದರೆ ಮಕ್ಕಳನ್ನು ಬೆಳೆಸುವ ಯೋಗ ಪ್ರಬಲವಾಗಿದೆ. ಅಂದರೆ ನೀವು ಒಂದು ಮಗುವನ್ನು ದತ್ತು ತೆಗೆದುಕೊಂಡು ಸಾಕುವ ಲಕ್ಷಣಗಳನ್ನು ನಿಮ್ಮ ಗ್ರಹಗತಿಗಳು ತೋರಿಸುತ್ತಿವೆ." ಎಂದರು. ಗಂಡ ಹೆಂಡತಿ ಮುಖ ಮುಖ ನೋಡಿಕೊಂಡರು. ರಾಜಲಕ್ಷ್ಮಿಯ ಮುಖದ ಕಳೆ ಇಳಿದು ಹೋಗಿತ್ತು. ದಕ್ಷಿಣೆಯನ್ನು ಕೊಟ್ಟು ಇಬ್ಬರೂ ಅಲ್ಲಿಂದ ಹೊರಬಂದರು. ರಾಜಲಕ್ಷ್ಮಿ ಅಗತ್ಯಕ್ಕಿಂತ ಹೆಚ್ಚು ಮೌನಿಯಾಗಿದ್ದಳು. ಅವಳ ಮೌನ ಅವನನ್ನು ಯೋಚಿಸುವಂತೆ ಮಾಡಿತ್ತು. ಅವಳಾಗಿಯೇ ಮಾತನಾಡಲಿ. ತಾನು ಏನೂ ಹೇಳುವುದು ಬೇಡ ಅಂತಂದುಕೊಂಡ.

ಒಂದುವಾರ ಕಳೆದಿತ್ತು. ಯಶವಂತ ಮತ್ತೆ ಟೂರ್‌ಗೆಂದು ಹೊರಡಬೇಕಾಗಿತ್ತು. ಇದ್ದಕ್ಕಿದ್ದಂತೆ ಏನನ್ನೋ ನಿರ್ಧಾರ ತೆಗೆದುಕೊಂಡವಳಂತೆ ರಾಜಲಕ್ಷ್ಮಿ ಮೌನವನ್ನು ಮುರಿದಳು.

"ನೀವು ಬೇರೆ ಇನ್ನೊಂದು ಮದುವೆಯಾಗಿ. ನಾನು ನನ್ನ ತವರಿಗೆ ಹೊರಟು ಹೋಗ್ತೀನಿ" ಎಂದಳು. ಅವನು ಅವಳನ್ನು ಬಲವಾಗಿ ಅಲುಗಾಡಿಸಿದ.

"ಅಂಥಾದ್ದೇನಾಯ್ತು .....? ನನ್ನನ್ನು ಬಿಟ್ಟು ಹೋಗುವಷ್ಟು ಬೇಡದವನಾದ್ನಾ ನಾನು?"

"ಹಾಗಲ್ಲರೀ... ನಿಮ್ಮ ತಾಯಿ ತಂದೆ ಮನೆಯವರಿಗೆ ಮೊದಲೇ ನನ್ನ ಬಗ್ಗೆ ಅಸಮಾಧಾನ. ನನಗೆ ಮಕ್ಕಳಾಗುವಂತಿಲ್ಲ ಅಂತ ತಿಳಿದರೆ ಹಂಗಿಸದೇ ಬಿಡುವುದಿಲ್ಲ. ಅವರ ಇಷ್ಟದಂತೆ ಒಳ್ಳೆಯ ಹುಡ್ಗೀನ್ನ ನೋಡಿ ಮದುವೆಯಾಗಿ..."

"ಹೀಗೆಲ್ಲಾ ಮಾತನ್ನಾಡಿ ನನ್ನನ್ನು ಪರೀಕ್ಷಿಸಬೇಡ. ಒಂದು ಮಗುವಿಗಾಗಿ ನಿನ್ನನ್ನು ದೂರ ಮಾಡುವಷ್ಟು ನೀಚ ನಾನಲ್ಲ...ಯಾರು ಏನೇ ಅಂದರೂ, ಹಂಗಿಸಿದರೂ, ನಾನು ನಿನ್ನೊಂದಿಗೆ ಇರ್ತೀನಿ..... ಇವತ್ತೇ ಕೊನೆ ಮತ್ತೆ ಇಂತಹ ಮಾತುಗಳನ್ನಾಡಬೇಡ" ಜೋರಿನಿಂದ ಹೇಳಿದ್ದ

"ಮತ್ತೇಗೆ ಈ ಕೊರತೆಯನ್ನು ತುಂಬೋದು ?....."

"ನಿನ್ನ ಮನಸ್ನಲ್ಲಿ ಏನಿದೆ ಅಂತ ಬಾಯಿ ಬಿಟ್ಟು ಹೇಳು..."

"ಹಾಗಾದ್ರೆ ....ಒಂದು ಮಗೂನ ದತ್ತು ತಗೊಳ್ಳೋಣ. ನೀವಾಗಿಯೇ ಇದರ ಬಗ್ಗೆ ಮಾತಾಡ್ತೀರಿ ಅಂತ ಅಂದ್ಕೊಂಡಿದ್ದೆ.. ನಿಮಗೆ ಇಷ್ಟವಿದೆಯೋ ಇಲ್ಲವೋ ಹೇಳಿ."

"ಯಾಕೆ ಹೀಗೆ ಸಂದೇಹ ಪಡ್ತೀಯ ರಾಜೀ.... ನಿನ್ನ ನಿರ್ಧಾರವೇ ನನ್ನ ನಿರ್ಧಾರ ನೀನಾಗಿಯೇ ಹೇಳಲಿ ಅಂತ ನಾನೂ ಸುಮ್ಮನಿದ್ದೆ. ಇದರಲ್ಲಿ ನನಗೆ ಯಾವ ಬೇಸರವೂ ಇಲ್ಲ."

"ಹೃದಯದಿಂದ ಈ ಮಾತನ್ನು ಹೇಳ್ತಿದೀರಾ?"

"ಹೃದಯ ಬಗೆದು ತೋರಿಸ್ಲೇನು ?" ಅವನು ನಸುನಕ್ಕು ಕೇಳಿದ.

"ಥ್ಯಾಂಕ್ಸ್ ರೀ.... ನೀವು ನನ್ನನ್ನು ಇಷ್ಟು ಪ್ರೀತಿಸ್ತೀರಿ ಅಂತ ಇವತ್ತೇ ಗೊತ್ತಾದದ್ದು" ಎನ್ನುತ್ತಾ ಅವನು ಎದೆಗೆ ಒರಗಿದಳು.

"ಈ ಪ್ರೀತಿ ನಿರಂತರವಾಗಿರುತ್ತೆ. ರಾಜೀ... ನಿನ್ನ ಆಸೆಗಳಿಗೆ ನಾನು ಎಂದೂ ಅಡ್ಡಿ ಬರುವುದಿಲ್ಲ. ನಾನು ಟೂರ್ ಅಂತ ಹೊರಗೆ ಹೊರಟು ಹೋಗ್ತೀನಿ. ಮನೆಯಲ್ಲಿ ನಿನಗೆ ಎಷ್ಟು ಬೇಸರವಾಗಬಹುದು ಅಂತ ನಾನು ಊಹಿಸಬಲ್ಲೆ. ನಿನ್ನ ಈ ನಿರ್ಧಾರದಿಂದ ನನಗೂ ಸಮಾಧಾನವಾಗಿದೆ..."

"ಹಾಗಾದ್ರೆ ಆದಷ್ಟು ಬೇಗ ಒಂದು ಮಗುವನ್ನು ದತ್ತು ತಗೋಳ್ಳೋಣ. ಹೆಣ್ಣು ಮಗುವಾಗಲಿ ಅಂತ ನನಗೆ ಆಸೆ..."

"ಹೆಣ್ಣು ಮಗೂನ ? ಯಾಕೆ ?.... ಹೆಂಗಸ್ರು ಗಂಡು ಮಕ್ಕಳನ್ನು ಬಯಸ್ತಾರೆ ಅಂತ ಅಂದ್ಕೊಂಡಿದ್ದೆ...."

"ಏನೋ ನನಗೆ ಹಾಗನ್ನಿಸ್ತು. ಬಗೆ ಬಗೆಯ ಅಲಂಕಾರ ಮಾಡುಕ್ಕೆ ಮನೆಯಲ್ಲಿ ಹೆಣ್ಣು ಮಕ್ಕಳು ಚೆನ್ನ. ಒಡವೆ, ವಸ್ತ್ರ ಎಲ್ಲಕ್ಕೂ ಹೆಣ್ಣು ಮಕ್ಕಳೇ ಸರಿ...."

"ಸರಿ ನಿನ್ನಿಷ್ಟ.... ಈ ಸಾರಿ ಟೂರ್‌ನಿಂದ ಬಂದ ಕೂಡಲೇ ವಿಚಾರಿಸ್ತೀನಿ" ಎನ್ನುತ್ತಾ ಅವಳ ಕೆನ್ನೆಯನ್ನು ತಟ್ಟಿದ

* * *

ಮುಂದಿನ ಕೆಲವೇ ದಿನಗಳಲ್ಲಿ ಮನೆಗೆ ಮಗನಾಗಿ ಬಂದವನು ಶರತ್. ಸಮಾಜ ಕಲ್ಯಾಣ ಇಲಾಖೆಯುವರ ಪರಿಚಯದಿಂದ, ಮೂರುತಿಂಗಳ ಮಗುವಾಗಿದ್ದವನನ್ನು ಮನೆಗೆ ಸಂಭ್ರಮದಿಂದ ಕರೆತಂದರು. ದತ್ತು ಮಗುವಾಗಿ, ಕಾನೂನಿನ ಪ್ರಕಾರ ಸ್ವೀಕರಿಸಿ, 'ಶರತ್' ಎಂದು ನಾಮಕರಣವನ್ನು ಮಾಡಿ, ನೆಂಟರಿಷ್ಟರಿಗೆ ಸಿಹಿಯನ್ನು ಹಂಚಿದರು. ಅವಳ ತಂದೆ ತಾಯಿಯರಾಗಲೀ, ಅವನ ತಂದೆಯಾಯಿಯರಾಗಲೀ, ಯಾವ ಸಂಭ್ರಮವನ್ನು ತೋರಲಿಲ್ಲ.

ರಾಜಲಕ್ಷ್ಮಿ ಅವರ ವರ್ತನೆಗೆ ಬೇಸರಗೊಂಡಿದ್ದಳು.

"ಇಷ್ಟಕ್ಕೆಲ್ಲಾ ನೀನು ಬೇಸರಗೊಳ್ಳಬೇಡ. ನಮ್ಮಿಬ್ಬರ ವಿವಾಹಕ್ಕೇ ವಿರೋಧವನ್ನು ವ್ಯಕ್ತ ಪಡಿಸಿದ್ದವರಿಂದ ನಾವು ಯಾವ ಸಂಭ್ರಮವನ್ನೂ ಅಪೇಕ್ಷಿಸುಕ್ಕೆ ಆಗುಲ್ಲ, ಇದುವರೆಗೆ ನಾವು ಇಬ್ಬರು ಇದ್ದೆವು. ಇನ್ನು ಮುಂದೆ ಈ ಹೊಸ ಸದಸ್ಯ ನಮ್ಮೊಂದಿಗೆ ಇದ್ದಾನೆ. ಅವನ ಪೋಷಣೆ, ಪಾಲನೆ, ನಿನಗೆ ಸೇರಿದ್ದು ಅವನ ಆಟ ಪಾಠಗಳು ನಮಗಾಗಿ ನಾವು ಬೇರೆ ಯಾರಿಗೂ ಹೆದರಬೇಕಾಗಿಲ್ಲ" ಎಂದು ಸಂತೈಸಿದ.

"ಹೆದರಿಕೆ ಅಲ್ಲ ರೀ..... ನಾವುಗಳ್ಯಾರ್ಗೂ ಇಷ್ಟು ಬೇಡದವರಾಗಿ ಬಿಟ್ಟೆವಾ ಅಂತ ವ್ಯಥೆಯಾಗುತ್ತೆ.... ನಮಗೆ ಹೆಣ್ಣು ಮಗು ಸಿಕ್ಕಿದ್ದರೆ ಚೆನ್ನಾಗಿತ್ತು. ಎಷ್ಟಾಗಲೀ ಇವನು ಗಂಡು ಮಗು. ಮುಂದೆ ಹೇಗೋ ಏನೋ ಅಂತ ನೆನೆಸಿಕೊಂಡರೆ ಭಯವಾಗುತ್ತೆ."

"ನೀನು ಈ ವ್ಯಥೆಯನ್ನು ಮನಸ್ಸಲ್ಲಿಟ್ಟುಕೊಂಡು ಕೊರಗ್ಬೇಡ ; ಇವನು ಮನೆಗೆ ಬಂದ ಸಮಯ ಒಳ್ಳೆಯದಾಗಿದ್ದು ನಮಗೇ ಒಂದು ಹೆಣ್ಣುಮಗುವಾಗುವ ಯೋಗ ಬರಬಹುದೋ ಏನೋ...."

"ಹಾಗಂತೀರಾ ! ನನಗೆ ಆ ನಂಬಿಕೆಯೇ ಹೊರಟುಹೋಗಿದೆ..."

"ನಾವಿನ್ನೂ ಮುದುಕರಾಗಿಲ್ಲ, ನಮಗೆ ಯೌವನವಿದೆ.... ಆ ನಂಬಿಕೆ ಇದೆ ತಾನೇ?"

"ನಮ್ಮ ರಕ್ತಮಾಂಸಗಳನ್ನು ಹಂಚಿಕೊಂಡ ಮಗುವೊಂದು ಹುಟ್ಟಿಬರಲಿ ಅನ್ನೋ ಆಸೆ ಇದೆ. ಆದರೆ ಜೊತೆಗೇ ಭಯ. ಈಗ ಶರತ್ ಬಂದಿದಾನೆ. ಅವನಿಗೆ ನಾನೀಗ ತಾಯಿ ನನಗೇನಾದ್ರೂ ಆಗಿ ಹೋದ್ರೆ ಇವನ ಗತಿಯೇನು ?..." ಆತಂಕದಿಂದ ಕೇಳಿದಳು.

"ನೀನು ತುಂಬಾ ಯೋಚಿಸ್ತೀಯ ರಾಜೀ.... ಇದು ನಿನ್ನ ಆರೋಗ್ಯಕ್ಕೆ ಒಳ್ಳೇದಲ್ಲ, ನಿನ್ನ ಆರೋಗ್ಯ ಚೆನ್ನಾಗಿದ್ದರೆ, ನೀನು ಶರತ್‌ನ ಸರಿಯಾಗಿ ಸಾಕಬಲ್ಲೆ ... ಒಬ್ಬ ಅನಾಥ ಮಗುವನ್ನು ಕರೆತಂದು ಸರಿಯಾಗಿ ಸಾಕದಿದ್ದರೆ, ಎಲ್ಲರೂ ನಮ್ಮನ್ನೇ ದೂಷಿಸ್ತಾರೆ..."

"ಹಾಗಾಗಬಾರದು. ನಾನು ಒಳ್ಳೆಯ ತಾಯಿ ಅಂತ ಅನ್ನಿಸ್ಕೋಬೇಕು..." ಎಂದು ಹೇಳಿ ಮಗುವನ್ನು ಮುದ್ದಿಸಿದಳು. "ಇವನನ್ನು ಹುಟ್ಟಿಸಿದ ತಂದೆ ತಾಯಿಗಳು ಎಲ್ಲಾ ರೀತಿಯಿಂದಲೂ ಚೆನ್ನಾಗಿರಬಹುದು. ಎಷ್ಟು ಮುದ್ದಾಗಿದಾನೆ ಅಲ್ವಾ !"

"ಹೌದು ರಾಜೀ.... ಈ ಮುದ್ದಿನ ಮಗು ನಮ್ಮ ಮಗು. ನಾವೇ ಈಗ ಇವನಿಗೆ ತಂದೆ ತಾಯಿ" ಎನ್ನುತ್ತಾ ಯಶವಂತನೂ ಮಗುವನ್ನು ಮುದ್ದಿಸಿದ.

ಎರಡು ವರ್ಷಗಳು ಕಳೆದದ್ದು ಗೊತ್ತಾಗಲೇ ಇಲ್ಲ, ಶರತ್‌ನ ಬೆಳೆಸುವುದರಲ್ಲಿ ಅವನ ಆಟ ಪಾಠಗಳನ್ನು ಗಮನಿಸುವುದರಲ್ಲಿ ಸಮಯ ಬೇಗ ಬೇಗ ಸರಿದಿತ್ತು. ಶರತ್ ಮುದ್ದಾಗಿ 'ಅಮ್ಮಾ' ಅಂತ ಕರೆದಾಗ ಅವಳು ಹೆಮ್ಮೆಯಿಂದ ಬೀಗಿ ಹೋದಳು. ಅವನನ್ನು ಎತ್ತಿಕೊಂಡು ಲೊಚಲೊಚನೆ ಮುತ್ತಿಟ್ಟಳು. ತೊದಲು ಮಾತು, ಮೊದಲ ನಡಿಗೆ ಎಲ್ಲವೂ ಅಪ್ಯಾಯಮಾನವಾಗಿತ್ತು. ಹೆಂಡತಿಯ ಉಲ್ಲಾಸವನ್ನು ಗಮನಿಸಿದ ಯಶವಂತ ನಿಶ್ಚಿಂತನಾಗಿದ್ದ.

ಈಗ ಅವನ ಸಂಪಾದನೆಯೂ ಹೆಚ್ಚಿತ್ತು. ಇನ್ನೂ ನಾಲ್ಕಾರು ಕಂಪೆನಿಗಳ ಏಜೆನ್ಸಿಯನ್ನು ತೆಗೆದುಕೊಂಡಿದ್ದ. ಟೂರ್ ಹೋಗುವ ಕೆಲಸ ಹೆಚ್ಚಾಗಿತ್ತು. ಆದರೆ ಈಗ ರಾಜಲಕ್ಷ್ಮಿಯಿಂದ ಯಾವ ಆಕ್ಷೇಪಣೆಯೂ ಇರಲಿಲ್ಲ. ಒಮ್ಮೊಮ್ಮೆ ಅವಳ ಬಗ್ಗೆ ಆಶ್ಚರ್ಯಗೊಂಡರೆ, ಒಮ್ಮೊಮ್ಮೆ ಅವಳ ಮೇಲೆ ಮುನಿಸೂ ಉಂಟಾಗುತ್ತಿತ್ತು. ಮಗ ಮಡಿಲಿಗೆ ಬಂದಮೇಲೆ ಅವಳಿಗೆ ತನ್ನ ಮೇಲೆ ಪ್ರೀತಿ ಕಡಿಮೆಯಾಗಿದೆಯೇನೋ ಅಂತ ಅನ್ನಿಸುತ್ತಿತ್ತು.

"ರಾಜೀ.... ನನ್ನನ್ನು ಅಲಕ್ಷ್ಯ ಮಾಡ್ತಿದೀಯ ನೀನು.... ನನಗಿಂತ ನಿನ್ನ ಮಗನೇ ಹೆಚ್ಚಾಗಿ ಬಿಟ್ಟಿದಾನೆ ನಿನಗೆ..." ಹಗುರವಾಗಿ ಆಕ್ಷೇಪಿಸಿದ.

"ನಿಮಗೆ ನಿಮ್ಮ ಟೂರ್‌ನಿಂದ ಬಿಡುವಿಲ್ಲ. ನಿಮಗೇ ಮೊದಲಿನ ಪ್ರೀತಿ ಇಲ್ಲ... ಪಾಪ ಇವನದ್ದೇನು ತಪ್ಪು ?" ಅವಳೂ ಕೆಣಕಿ ನುಡಿದಿದ್ದಳು.

"ಟೂರ್ ಹೋಗದಿದ್ದರೆ ಜೀವನಾನೇ ನಡೆಯಲ್ಲ ಕಣೆ.... ನನ್ನ ಸಂಪಾದನೆಯ ಮೂಲವೆಲ್ಲಾ ಈ ಟೂರ್‌ನಿಂದಲೇ.... ಜೇಬು ತುಂಬುವುದೂ ಇದರಿಂದ್ಲೇ..."

"ಹಾಗಾದ್ರೆ ಮನೆಗೇ ಬರ್ಬೇಡಿ. ಟೂರ್ ಮಾಡ್ಕೊಂಡೇ ಇರಿ. ನನ್ನ ಜ್ಞಾಪಕ ಬಂದರೆ ಫೋನು ಮಾಡಿ ಬಿಡಿ ಸಾಕು." ವೈಯ್ಯಾರದಿಂದ ತುಟಿ ಕೊಂಕಿಸಿ ನುಡಿದಳು.

"ನೀನೇ ಮನೆಗೆ ಬರ್ಬೇಡಿ ಅಂತ ಹೇಳ್ತೀದೀಯ. ನೆನಪಿರಲಿ....." ನಕ್ಕ.

ನಿದ್ದೆ ಬಾರದೆ ಹೊರಳಾಡುತ್ತಿದ್ದವಳಿಗೆ ಈ ಮಾತುಗಳು ನೆನಪಾದವು. ಈ ಶರತ್ ಬಂದಮೇಲೆ ನಮ್ಮಿಬ್ರಲ್ಲಿ ಅಂತರ ಜಾಸ್ತಿ ಆಗಿದೆ. ಇದೇ ಕಾರಣದಿಂದ, ನನ್ನ ಗಂಡ ಈ ಹೆಂಗಸಿನ ಸಹವಾಸ ಮಾಡಿರಬಹುದೇ.... ಅವಳ ಕಂಕುಳಿನಲ್ಲಿರುವ ಮಗು ಇವನದ್ದೇ ಆಗಿದ್ದರೆ.... ? ಮೃದುವಾದ ಹಾಸಿಗೆ ಒತ್ತಿದಂತಾಯಿತು. ಎದ್ದು ಕುಳಿತಳು. ಪಕ್ಕದಲ್ಲಿ ಮಲಗಿದ್ದವನ ಕಡೆ ತಿರುಗಿದಳು. ಮಬ್ಬು ಬೆಳಕಿನಲ್ಲಿ ಅವನ ಮುಖ ಸರಿಯಾಗಿ ಕಾಣುತ್ತಿರಲಿಲ್ಲ. ಎಬ್ಬಿಸಿ, ಪ್ರಶ್ನಿಸುವ ಮನಸ್ಸಾದರೂ ತಡೆದುಕೊಂಡಳು. ತಾನೀಗ ದುಡುಕಿ ಗಂಡನೊಡನೆ ಜಗಳವಾಡಿದರೆ, ಗಂಡ ತನ್ನಿಂದ ಮತ್ತೂ ದೂರವಾಗಬಹುದು. ಹಾಗಾಗಬಾರದು. ತನಗೆ ಈಗ ಗಂಡನೇ ಸರ್ವಸ್ವ. ಬೇರೆ ಬಂಧು ಬಳಗ ಯಾರೂ ಇಲ್ಲ... ತಾನೀಗ ತಾಳ್ಮೆಯಿಂದ ವರ್ತಿಸಬೇಕು. ಆ ಹೆಂಗಸು ಈ ಮನೆಯಿಂದ ಹೋಗುವಂತೆ ಮಾಡಬೇಕು ಎಂದು ತನ್ನಲ್ಲೇ ನಿಶ್ಚಯಿಸಿದಳು. ತಲೆಯಡಿ ಕೈಗಳನ್ನಿಟ್ಟು ಮತ್ತೆ ದಿಂಬಿಗೆ ಒರಗಿ ಮಲಗಿದಳು.

* * *

ಬೆಳಿಗ್ಗೆ ಎಚ್ಚರವಾದಾಗ, ಹಿಂದಿನ ರಾತ್ರಿಯ ವಿಷಯಗಳು ನೆನಪಿಗೆ ಬಂದು ತಟ್ಟನೆ ಎದ್ದು ಕುಳಿತಳು. ಪಕ್ಕದ ಹಾಸಿಗೆಯ ಮೇಲೆ ಸುಖನಿದ್ರೆಯಲ್ಲಿದ್ದ ಗಂಡನನ್ನು ಕಂಡಳು. ಮನಸ್ಸು ಸ್ವಲ್ಪ ಮಟ್ಟಿಗೆ ಸಮಾಧಾನಗೊಂಡಿತು. ಆ ಹೆಂಗಸು, ಯಾರೋ ಏನೋ...? ಇದಾಳೋ .... ಏನಾದ್ರೂ ಹೊತ್ಕೊಂಡು ಮನೆ ಬಿಟ್ಟು ಹೊರಟೇ ಹೋಗಿದ್ದಾಳೋ... ಎನ್ನುವ ಅನುಮಾನವೂ ಕಾಡಿತು. ಬಾಗಿಲನ್ನು ತೆರೆದು ಹೊರಬಂದಳು. ಮಹಡಿ ಮೆಟ್ಟಿಲು ಕೆಳಗಿದ್ದ ರೂಮಿನ

ಕಡೆ ಗಮನ ಹರಿಯಿತು. ಹಾಕಿದ್ದ ಬಾಗಿಲು ಹಾಕಿದ್ದಂತೆಯೇ ಇತ್ತು. ಸ್ವಲ್ಪ ಮಟ್ಟಿಗೆ ಮನಸ್ಸು ಸಮಾಧಾನಗೊಂಡಿತು. ಮುಖ ತೊಳೆದು ಅಡಿಗೆ ಮನೆಗೆ ಬಂದಳು. ಹಾಲನ್ನು ಬಿಸಿ ಮಾಡಿದಳು. ಕಾಫಿಯನ್ನು ಬೆರೆಸಿ ಕುಡಿದಳು. ಬೆಳಗಿನ ಉಪಹಾರಕ್ಕೆ ಸಿದ್ಧತೆಯನ್ನು ಮಾಡಿದಳು. ಮಧ್ಯೆ ಮಧ್ಯೆ ರೂಮಿನ ಕಡೆ ಗಮನವಿಡುತ್ತಿದ್ದಳು.

ಮಂದಾಕಿನಿ ಮಗನನ್ನು ಎತ್ತಿಕೊಂಡು ರೂಮಿನಿಂದ ಹೊರಬಂದಳು. ಮುಖವನ್ನು ತೊಳೆದು ಬಂದು, ಅಡಿಗೆ ಮನೆಯ ಬಾಗಿಲಲ್ಲಿ ಅವನನ್ನು ತೊಡೆಯ ಮೇಲೆ ಕೂರಿಸಿಕೊಂಡು ಕುಳಿತಳು. ಮಂದಾಕಿನಿಯ ಮುಂದೆ ಕಾಫಿಯ ಬಟ್ಟಲನ್ನು ಹಾಲಿನ ಬಟ್ಟಲನ್ನು ತಂದಿತ್ತಳು. ಮಂದಾಕಿನಿ ಸಂಕೋಚದಿಂದ, ಕಾಫಿಯನ್ನು ಕುಡಿದು ಮಗನಿಗೆ ಹಾಲನ್ನು ಕುಡಿಸಿದಳು.

"ನಾನೇನಾದ್ರೂ ಸಹಾಯ ಮಾಡ್ಲಾ ! ತರಕಾರಿ ಹೆಚ್ಚಿ ಕೊಡ್ತೀನಿ. ಕಾಯಿ ತುರಿದು ಕೊಡ್ತೀನಿ. ಏನಾದರೂ ಕೆಲಸ ಇದ್ದರೆ ಹೇಳಿ" ರಾಜಲಕ್ಷ್ಮಿಯ ಕಡೆ ನೋಡುತ್ತಾ ನುಡಿದಳು.

"ಏನೂ ಬೇಡ, ಎಲ್ಲಾ ಆಗಿದೆ." ಇತ್ತ ತಿರುಗದೇ ನುಡಿದಳು.

"ಇಲ್ಲಿ ಹತ್ತಿರದಲ್ಲಿ ಯಾವುದಾದ್ರೂ ಮಹಿಳಾ ಆಶ್ರಮಗಳಿವೆಯಾ ?... ಇದ್ದರೆ ನಾನು ಹೋಗಿ ಅಲ್ಲಿರ್ತೀನಿ. "

"ಏನೋ ನಂಗೊತ್ತಿಲ್ಲ, ವಿಚಾರಿಸ್ಬಿಟ್ಟು ಹೇಳ್ತೀನಿ...." ಅಷ್ಟರಲ್ಲಿ ಶರತ್ ಅತ್ತಿದ್ದು ಕೇಳಿಸಿತ್ತು. ತನ್ನ ರೂಮಿಗೆ ಧಾವಿಸಿದಳು. ಯಶವಂತನೂ ಎದ್ದು ಕೂತ. "ಕಾಫಿ ತಿಂಡಿ ಮಾಡಿದ್ದಾಗಿದೆ ಎದ್ದು ಸ್ನಾನ ಮಾಡಿ" ಎನ್ನುತ್ತಾ ಶರತ್‌ನ ಎತ್ತಿಕೊಂಡು ಹೊರಕ್ಕೆ ಬಂದಳು. ಮಂದಾಕಿನಿ ಮಗನನ್ನು ಎತ್ತಿಕೊಂಡು ಮುಂಬಾಗಿಲ ಕಡೆಗೆ ಹೊರಟಿದ್ದಳು.

"ನೋಡಿ.... ಮುಂಬಾಗಿಲ್ನಲ್ಲಿ ಹೋಗಿ ನಿಂತ್ಕೋಬೇಡಿ. ಅಕ್ಕಪಕ್ಕದವರು ಕುತೂಹಲದಿಂದ ನೋಡ್ತಾರೆ. ಪ್ರಶ್ನೆ ಕೇಳ್ತಾರೆ... ನಿಮ್ಮ ಮಗೂನ್ನೂ ಇಟ್ಕೊಂಡು ರೂಮಿನೊಳಗೇ ಇರಿ..." ರಾಜಲಕ್ಷ್ಮಿ ಅಪ್ಪಣೆ ಕೊಡುವಂತೆ ಹೇಳಿದಾಗ, ಮಂದಾಕಿನಿ ಪೆಚ್ಚಾದಳು. ತಲೆ ತಗ್ಗಿಸಿ ತನ್ನ ರೂಮಿಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು.

ಯಶವಂತ ಹೆಂಡತಿಯ ಕಡೆಗೊಮ್ಮೆ ದೀರ್ಘವಾಗಿ ನೋಡಿದ. ಆದರೆ ಏನನ್ನೂ ಹೇಳದೆ, ಟವೆಲ್ಲನ್ನು ಹಿಡಿದು ಬಚ್ಚಲು ಮನೆಯ ಕಡೆಗೆ ನಡೆದ. ಸ್ನಾನ ಮುಗಿಸಿದ.

ಅವನು ತನ್ನ ಆಫೀಸಿಗೆ ಹೊರಟು ನಿಂತ. ಬೀಳ್ಕೊಡಲು, ಮಗನನ್ನು ಎತ್ತಿಕೊಂಡು, ರಾಜಲಕ್ಷ್ಮಿ ಮುಂಬಾಗಿಲಿಗೆ ಬಂದಳು. ಯಶವಂತ ಮಗನನ್ನು ಮುದ್ದಿಸಿ ಟಾಟಾ ಮಾಡಿಸಿಕೊಂಡು "ರಾಜೀ.... ಬಾಯ್" ಎಂದು ಹೇಳಿ , ಅತ್ತಿತ್ತ ನೋಡಿ ಪಿಸುದನಿಯಲ್ಲಿ ನುಡಿದ.

"ಆ ಹೆಂಗಸಿನ ಬಳಿ ಹೆಚ್ಚಿಗೆ ಮಾತಾಡ್ಬೇಡ... ಮನೆಗೆ ಬಂದ್ಮೇಲೆ ಆಕೆಗೆ ಏನಾದ್ರೂ ಒಂದು ವ್ಯವಸ್ಥೆ ಮಾಡೋಣ...."

"ಅದೇನು ಮಾಡ್ತೀರೋ ಬೇಗ ಮಾಡಿ... ನೀವು ತಾನೇ ಕರ್ಕೊಂಡು ಬಂದಿರೋರು.

ನನಗೇನಾಗ್ಬೇಕಾಗಿದೆ ?''

''ನನಗೂ ಏನೂ ಆಗ್ಬೇಕಾಗಿಲ್ಲ. ಈಗ ಹೊತ್ತಾಗಿದೆ. ಆಮೇಲೆ ಬಂದು ಮಾತಾಡ್ತೀನಿ'' ಎನ್ನುತ್ತಾ ಕಾಂಪೌಂಡನ್ನು ದಾಟಿ ರಸ್ತೆಗೆ ಇಳಿದ. ಬಾಗಿಲನ್ನು ಭದ್ರ ಪಡಿಸಿ ರಾಜಲಕ್ಷ್ಮಿ ಒಳಕ್ಕೆ ಬಂದಳು. ಊಟದ ಮನೆಯ ಬಾಗಿಲ ಬಳಿ ಮಗುವನ್ನು ಕೂರಿಸಿಕೊಂಡು ಕೂತಿದ್ದ ಮಂದಾಕಿನಿಯನ್ನು ಕಂಡಳು. ಹುಬ್ಬುಗಳು ಕೂಡಿಕೊಂಡವು. ಶರತ್‌ನ ಸೊಂಟಕ್ಕೆ ಸಿಕ್ಕಿಸಿಕೊಂಡು ಅಡಿಗೆ ಮನೆಗೆ ನಡೆದಳು. ಎರಡು ತಟ್ಟೆಗಳಿಗೆ ತಿಂಡಿಯನ್ನು ಹಾಕಿಕೊಂಡು ತಂದು ಆಕೆಯ ಮುಂದೆ ಇಟ್ಟಳು.

''ಮುಂದೇನು ಮಾಡ್ಬೇಕು ಅಂತಿದೀರಿ!.... ನಿಮ್ಮೂರಿಗೆ ವಾಪಸ್ಸು ಹೋಗ್ಬಿಡಿ'' ಆಕೆಗೆ ಹೇಳಿದಳು. ಅವಳು ಆತಂಕದಿಂದ ನೋಡಿದಳು. ''ನೀವು ಏನನ್ನೋ ಮುಚ್ಚಿಡ್ತಾ ಇದೀರಿ. ನಮ್ಮ ಯಜಮಾನರು ಮುಗ್ಧರು. ನಿಮಗೆ ಸಹಾಯ ಮಾಡಲು ಹೋಗಿ ಕಷ್ಟಕ್ಕೆ ಸಿಕ್ಕಿಬಿದ್ದರೆ, ನಾನು ನಿಮ್ಮನ್ನು ಸುಮ್ಮನೆ ಬಿಡುಲ್ಲ...'' ಎಚ್ಚರಿಸಿದಳು.

''ನಂಗೂ ಏನೂ ತೋಚ್ತಿಲ್ಲ.. ನನ್ನನ್ನು ಬಸ್ನಲ್ಲಿ ಕೂರಿಸಿ ನನ್ನ ಗಂಡ ಎಲ್ಲಿಗೆ ಹೋದ್ರು ಅಂತ ಗೊತ್ತಾಗ್ತಿಲ್ಲ. ನನ್ನ ಅಣ್ಣ ಯಾಕೆ ಬಸ್‌ಸ್ಟ್ಯಾಂಡಿಗೆ ಬರ್ಲಿಲ್ಲ ಅಂತಲೂ ಗೊತ್ತಿಲ್ಲ. ಕೈಯಲ್ಲಿ ಹಣವಿಲ್ಲ. ನಾನೇನು ಮಾಡ್ಲೀ ?'' ಅಸಹಾಯಕತೆಯಿಂದ ಹೇಳಿದಳು.

''ಹಾಗಂತ , ಇಲ್ಲೇ ಇರುವ ಯೋಚ್ನೆ ಮಾಡ್ತಿದೀರಾ ? ಅದು ಮಾತ್ರ ಸಾಧ್ಯವಿಲ್ಲ. ನೀವು ಯಾರೋ...? ನಮಗೇನಾಗ್ಬೇಕು ?''

''ಅದಕ್ಕೇ ಹೇಳಿದ್ದು ಯಾವುದಾದ್ರೂ ಮಹಿಳಾ ಆಶ್ರಮಕ್ಕೆ ನನ್ನನ್ನು ಕರ್ಕೊಂಡು ಹೋಗಿ, ಅಲ್ಲಿ ಚಾಕರಿ ಮಾಡ್ಕೊಂಡು ಇರ್ತೀನಿ.''

''ಅದು ಅಷ್ಟು ಸುಲಭವಲ್ಲ.... ಬಸ್ಸಿಗೆ ಹತ್ತಿಸ್ತೀವಿ. ನಿಮ್ಮೂರಿಗೇ ವಾಪಸ್ಸು ಹೊರಟು ಹೋಗಿ. ಯಾವ ತಂಟೆಯೂ ಇರುವುದಿಲ್ಲ''

''ಈಗಲೇ ಬೇಡ. ಪೋಲಿಸರು ಬಂದು ಹಿಂಸೆ ಕೊಡಬಹುದು.''

''ಅಂಥಾ ಕೆಲಸ ಏನು ಮಾಡಿದೀರಿ ?'' ಭಯ ಮಿಶ್ರಿತ ಕುತೂಹಲದಿಂದ ಕೇಳಿದಳು.

''ನನ್ನ ಗಂಡನನ್ನ ಪೋಲಿಸರು ಹುಡುಕುತ್ತಿದ್ರು. ಯಾಕೆ ಅಂತ ನನಗೂ ಸರಿಯಾಗಿ ಗೊತ್ತಿಲ್ಲ.. ಪೋಲಿರು ನಮ್ಮಿಬ್ಬರನ್ನು ಎಳೆದುಕೊಂಡು ಹೋದ್ರೆ ಇವನ ಗತಿ?''

''ನಿಮ್ಮನ್ನ ಇಲ್ಲಿ ಯಾರಾದ್ರೂ ಕಂಡು, ಪೋಲಿಸರು ಇಲ್ಲಿಗೂ ಬರಬಹುದು. ನಾವು ಮರ್ಯಾದಸ್ಥ ಜನ. ಕಳ್ಳತನ, ಸುಳ್ಳುತನ, ಗೊತ್ತಿಲ್ಲದವರು. ನಮ್ಮನ್ನು ಫಜೀತಿಗೆ ಸಿಕ್ಕಿಸಬೇಡಿ'' ಪೋಲಿಸರಿಗೆ ದೂರು ಕೊಡಿ. ನಿಮ್ಮ ಗಂಡನನ್ನು ಹುಡುಕಿಸಿಕೊಡ್ತಾರೆ.''

''ನಂಗೆ ಭಯ ಆಗುತ್ತೆ ಅಕ್ಕಾ.'' ರಾಜಲಕ್ಷ್ಮಿ ತಟ್ಟನೆ ಕತ್ತೆತ್ತಿ ನೋಡಿದಳು.

''ಹೋಗ್ಲಿ ನಿಮ್ಮ ಬಗ್ಗೆ ವಿವರಗಳನ್ನು ಹೇಳಿ. ನಿಮ್ಮ ಬಗ್ಗೆ ತಿಳಿಯದೇ ಇಲ್ಲಿ ಯಾರೂ ನಿಮ್ಮನ್ನು ಕೆಲಸಕ್ಕೆ ಇಟ್ಟುಕೊಳ್ಳುವುದಿಲ್ಲ. ಮಹಿಳಾ ಆಶ್ರಮದವರಿಗೂ, ನಾವು ನಮ್ಮ

ವಿಳಾಸವನ್ನೇ ಕೊಡಬೇಕಾಗುತ್ತೆ. ನಿಮ್ಮ ಅಣ್ಣನ ಹೆಸರನ್ನು, ಇರುವ ಜಾಗವನ್ನಾದರೂ ತಿಳಿಸಿ. ಅವರನ್ನು ಹುಡುಕಿಸೋಣ...''

''ಅವರ ಹೆಸರು ಅಪ್ಪಣ್ಣ ಅಂತ. ಚಾಮರಾಜ ಪೇಟೆಯಲ್ಲಿ ಮನೆ ಇದೆ ಅಂತ ಅಷ್ಟು ಗೊತ್ತು. ಪೋನು ನಂಬರ್ರು ಕೂಡಾ ನೆನಪಿನಲಿಲ್ಲ.''

''ಎಂಥಾ ಹೆಂಗಸರ್ರೀ ನೀವು. ಬೆಂಗಳೂರಿನಿಂದ ಊರಿಗೆ ಬರುವಾಗ, ಅಡ್ರೆಸ್ಸು ಪೋನು ನಂಬರ್ರು ಇಲ್ಲದೆ ಯಾರನ್ನಾದ್ರೂ ಹೇಗೆ ಹುಡುಕ್ತೀರಿ !'' ಅವಳು ಸೊರ ಸೊರ ಅಳತೊಡಗಿದಾಗ ಅವಳಿಗೆ ಬೇಸರವೆನಿಸಿತು. ''ಮಾತು ಮಾತಿಗೆ ಅಳ್ಬೇಡಿ. ಒಂದೆರಡು ದಿನಗಳಲ್ಲಿ ಏನಾದ್ರೂ ವ್ಯವಸ್ಥೆ ಮಾಡೋಣ. ಅಲ್ಲಿಯವರೆಗೆ ತೆಪ್ಪಗಿರಿ.''

''ನನಗೂ ಬಿಟ್ಟಿ ಊಟ ಮಾಡುಕ್ಕೆ ಸಂಕೋಚವಾಗುತ್ತೆ. ಏನಾದ್ರೂ ಕೆಲಸ ಇದ್ದರೆ ಹೇಳಿ ಮಾಡಿ ಕೊಡ್ತೀನಿ.''

''ಆಗಲಿ, ಹೇಳೇ ಹೇಳ್ತೀನಿ. ನನಗೂ ಇವನು ಚಿಕ್ಕ ಮಗು. ಇವನನ್ನು ನೋಡ್ಕೊಂಡು ಕೆಲಸ ಮಾಡುವುದು ಕಷ್ಟವೇ....'' ಎನ್ನುತ್ತಾ ಕಾಫಿಯನ್ನು ತಂದಿತ್ತಳು. ಸ್ನಾನ ಮಾಡಿ ಬನ್ನಿ. ತರಕಾರಿ ಹೆಚ್ಚಿ ಕೊಡೋರಂತೆ. ... ಅಷ್ಟರಲ್ಲಿ ಮುಂಬಾಗಿಲ ಕರೆಗಂಟೆ ಸದ್ದು ಮಾಡಿತು. ಬಾಗಿಲನ್ನು ತೆರೆದಳು. ಅವಳ ಹಿಂದೆಯೇ ಅವಳ ಸ್ನೇಹಿತೆ ವಿಜಯ ಹಾಗೂ ಅವಳ ಗೆಳತಿ ಇಬ್ಬರೂ ಒಳಕ್ಕೆ ಬಂದರು.

''ಯಾರೋ ಗೆಸ್ಟ್ ಬಂದಿರುವ ಹಾಗಿದೆ...'' ಎನ್ನುತ್ತಾ ಮಂದಾಕಿನಿಯ ಕಡೆ ನೋಡಿ, ಆ ಮಗುವಿನ ಕಡೆ ನೋಡಿ, ಮುಗುಳ್ನಕ್ಕು ಬಾ ಅಂತ ಕರೆದಳು. ಎಷ್ಟು ಕ್ಯೂಟ್ ಆಗಿದಾನೆ. ನಿಮ್ಮ ಮಗನಾ? ಎಷ್ಟು ವರ್ಷ'' ವಿಜಯ ಕೇಳಿದಳು.

''ಮೂರು ವರ್ಷ....'' ಎಂದಳು ಮಂದಾಕಿನಿ.

''ಅದೇನ್ರೀ ವಿಜಯ ! ಇಷ್ಟು ಬೇಗನೇ ಬಂದಿದೀರಿ... ಕ್ಲಬ್‌ನ ಪಾರ್ಟಿ ಆಗಲೇ ಆಯ್ತಲ್ಲ.''

''ಅದಕ್ಕಲ್ಲ ಬಂದಿದ್ದು, ಬೇರೆ ವಿಷಯ .... ಮುಂದಿನ ವಾರ ನನ್ನ ತಂಗಿ ನಮ್ಮ ಮನೆಗೆ ಬರ್ತಿದಾಳೆ. ಅವಳು ಪ್ರೆಗ್ನೆಂಟು....'' ಸೋಜಿಗದ ಸಂಗತಿಯನ್ನು ತಿಳಿಸುವಂತೆ ತಿಳಿಸಿದಳು.

''ಯಾರು ? ನಿಮ್ಮ ತಂಗಿ ಸುಜಯಾನಾ ?... ಪ್ರೆಗ್ನೆಂಟಾ?'' ಆಶ್ಚರ್ಯದಿಂದ ಕೇಳಿದಳು.

''ಹೂಂ..... ವಿಷಯ ತಿಳಿದು ನಂಗೂ ಆಶ್ಚರ್ಯ ಆಯಿತು. ಪೋನಿನಲ್ಲೇ ಚೆನ್ನಾಗಿ ಬೈದೆ. ಏನೋ ಎಡವಟ್ಟು ಮಾಡಿಕೊಂಡಿದಾಳೆ. ಹೇಳುಕ್ಕೇ ಅಸಹ್ಯ ಆಗುತ್ತೆ. ''

''ಇಲ್ಲಿಗೆ ಬಂದು ಅಬಾರ್ಷನ್ ಮಾಡಿಕೊಳ್ತಾಳಂತಾ?''

''ಏನೋ ಗೊತ್ತಿಲ್ಲ, ಅವಳಿಗೆ ತಕ್ಷಣಕ್ಕೆ ಇರುಕ್ಕೆ ಒಂದು ಸಣ್ಣ ಮನೆ ಬೇಕು. ನಿಮ್ಮ ಯಜಮಾನ್ರಿಗೆ ಹೇಳ್ತೀರಾ ! ಒಂದು ರೂಮಿನ ಮನೆ ಆದ್ರೂ ಸಾಕು. ನಮ್ಮ ಮನೆಯ ವಿಷಯ ನಿಮಗೆ ಗೊತ್ತೇ ಇದೆಯಲ್ಲ, ನನ್ನ ಗಂಡಂಗೆ ಇದೆಲ್ಲ ಸರಿ ಹೋಗುಲ್ಲ, ಸುಜೀ

ಪ್ರೆಗ್ನೆಂಟ್ ಅಂತ ಗೊತ್ತಾದ್ರೆ ಹೆಂಚು ಹಾರಿ ಹೋಗುವ ಹಾಗೆ ಕಿರುಚಾಡ್ತಾರೆ. ಅವಳಿಗೂ ನನ್ನನ್ನು ಬಿಟ್ಟರೆ ಬೇರೆ ಯಾರೂ ಇಲ್ಲ, ಅಣ್ಣನ ಮನೆಗೆ ಹೋಗುವಂತಿಲ್ಲ.''

''ಹೀಗಾದ್ರೆ ಬಹಳ ಕಷ್ಟ ವಿಜಯಾ.... ಗಂಡಸರನ್ನ ನಂಬೋದು ಕಷ್ಟ ಅಂತ ಅಂದ್ಕೋತೀವಿ. ಆದ್ರೆ ಹೆಂಗಸರನ್ನು ನಂಬೋದೂ ಕಷ್ಟವಾಗ್ತಿದೆಯಲ್ಲ'' ಎನ್ನುತ್ತಾ ಮಂದಾಕಿನಿಯ ಕಡೆ ನೋಡಿದಳು. ವಿಜಯ ಅದನ್ನು ಗಮನಿಸಿದಳು. ಮಂದಾಕಿನಿ ತಟ್ಟೆಗಳನ್ನೆತ್ತಿಕೊಂಡು ತೊಳೆಯಲೆಂದು ಹಿತ್ತಲಿಗೆ ಹೋದಳು.

''ಈಕೆ ಯಾರು ?... ನೋಡಿದ್ರೆ ಕಷ್ಟದಲ್ಲಿದ್ದಾಳೆ ಅಂತ ಅನ್ನಿಸುತ್ತೆ.''

''ಹೂಂ. ನನ್ನ ಗಂಡನ ದೂರದ ಸಂಬಂಧಿ... ಗಂಡ ಬಿಟ್ಟು ಎಲ್ಲೋ ಹೋಗಿದಾನೆ. ಹುಡುಕಿಕೊಂಡು ಇಲ್ಲಿಗೆ ಬಂದಿದಾಳೆ... ಅವನು ಸಿಕ್ಕ ಕೂಡಲೇ ಹೊರಟು ಹೋಗ್ತಾಳೆ.''

''ಬಿಟ್ಟು ಹೋದವನು ಮತ್ತೆ ಬರ್ತಾನೇನ್ರೀ... ಒಂದು ಮಗು ಬೇರೆ ಇದೆ. ಅತ್ಲಾಗೆ ವಾಪಸ್ಸು ಕಳಿಸಿ. ನಿಮಗೆಲ್ಲಿ ಹಣೆಯಬರಹ?'' ಸ್ನೇಹಿತೆ ಸಲಹೆಯನ್ನಿತ್ತಳು.

''ನಾನೂ ಅದನ್ನೇ ಯೋಚಿಸ್ತಿದ್ದೆ. ನಿಮ್ಮ ತಂಗಿ ಬರ್ತಾಳೆ ಅಂತ ಅಂದ್ರಲ್ಲ, ಅವಳೊಂದಿಗೆ ಇಟ್ಟುಕೊಳ್ತಾಳಾ ಅಂತ ವಿಚಾರ್ಸಿ.... ಮನೆ ಕೆಲಸ ಮಾಡಿಕೊಡ್ತಾಳೆ.''

''ನೋಡೋಣ.. ವಿಚಾರಿಸ್ತೀನಿ. ಮೊದಲು ಒಂದು ಮನೆ ಸಿಗಲಿ. ಇದೇ ಏರಿಯಾದಲ್ಲಿ ಹತ್ತಿರದಲ್ಲಿದ್ದರೆ ಒಳ್ಳೆಯದು....''

ರಾಜಲಕ್ಷ್ಮಿ ಅವರಿಬ್ಬರಿಗೂ ಕಾಫಿಯನ್ನು ತಿಂಡಿಯನ್ನು ಕೊಟ್ಟಳು. ಮಂದಾಕಿನಿ ಮಗನಿಗೂ ಸ್ನಾನ ಮಾಡಿಸಿ, ತಾನೂ ಮಾಡಿ ಹೊರಕ್ಕೆ ಬಂದಳು. ಇವರುಗಳು ತಿಂದು ಇಟ್ಟ ಎಂಜಲು ತಟ್ಟೆ ಲೋಟಗಳನ್ನು ಬೇಡ ಅಂತಂದ್ರೂ ತೊಳೆದಿಟ್ಟಳು. ಶರತ್‌ನ ಎತ್ತಿಕೊಂಡು ಆಡಿಸಲೆಂದು ಹೊರಕ್ಕೆ ಕರೆದುಕೊಂಡು ಹೋದಳು.

* * *

''ರಾಜೀ ಇವತ್ತು ಏನಾಯ್ತು ಗೊತ್ತಾ ?....ಆಫೀಸಿಗೆ ಒಬ್ಬ ಅಪರಿಚಿತ ವ್ಯಕ್ತಿ ಬಂದ. ಆದರೆ ಅವನು ನನ್ನ ವಿಷಯಗಳನ್ನೆಲ್ಲ ತಿಳಿದುಕೊಂಡಿದ್ದ, ಅವನ್ಯಾರು ಗೊತ್ತಾ ?.... ಈಕೆಯ ಗಂಡ.... ರಾಧಾಕೃಷ್ಣ...''

''ಅವನ್ಯಾಕ್ರಿ ಬಂದಿದ್ದ ? ಏನು ಹೇಳ್ದ ?....'' ಗಾಬರಿಯಿಂದ ಪ್ರಶ್ನಿಸಿದಳು.

''ಪೋಲಿಸರು ಅವನನ್ನು ಹುಡುಕ್ತಿದಾರಂತೆ. ... ಯಾವುದೋ ಬ್ಯಾಂಕ್ ಲೂಟಿಯ ಕೇಸ್‌ನಲ್ಲಿ ಅವನೂ ಸೇರಿಕೊಂಡಿದಾನಂತೆ... ಆದರೆ ತಾನು ನಿರಪರಾಧಿ ಅಂತ ಹೇಳ್ದ.''

''ನಿರಪರಾಧಿಗಳನ್ನು ಪೋಲಿಸರು ಯಾಕೆ ಹುಡಕ್ತಾರೆ! ಅವನಿಗೇನು ಭಯ ? ನಿನ್ನ ಹೆಂಡತಿ ಇಲ್ಲಿದಾಳೆ ಕರೆದ್ಕೊಂಡು ಹೋಗು ಅಂತ ಹೇಳ್ಬೇಕಾಗಿತ್ತು ನೀವು.''

''ಅವನಿಗೆ ಗೊತ್ತು ಅದಕ್ಕೇ ನನ್ನನ್ನು ಹುಡುಕ್ಕೊಂಡು ಬಂದಿದ್ದ. ಅವಳೂ ಮಗು

ಸದ್ಯಕ್ಕೆ ನಿಮ್ಮ ಮನೇಲಿರ್‍ಲಿ...ಊರಿಗೆ ಕಳಿಸ್ಬೇಡಿ ಅಂತ ಬೇಡಿಕೊಂಡ."

"ನೀವು ಒಪ್ಪಿಕೊಂಡು ಬಿಟ್ರಾ ? ಪೋಲಿಸರು ಇಲ್ಲಿಗೂ ಬಂದರೆ .... ಎಷ್ಟಾಗಲೀ ಇವಳು ಕಳ್ಳನ ಹೆಂಡತಿ.... ಅವಳ ಅಣ್ಣನ ಮನೆಗೆ ಹೋಗಲಿ ಅಂತ ಹೇಳ್ಬೇಕಾಗಿತ್ತು."

"ಅಣ್ಣನೂ ಸಿಕ್ಕಿ ಬಿದ್ದಿದಾನೆ. ಎಲ್ಲಾ ಕಳ್ಳರ ಸಂತೆ.... ಹೀಗೆಲ್ಲಾ ಸುತ್ತಿಕೊಳ್ಳುತ್ತೆ ಅಂತ ನಂಗೆ ಗೊತ್ತಾಗ್ಲಿಲ್ಲ ರಾಜೀ...." ಅಸಹಾಯದ ಧ್ವನಿಯಲ್ಲಿ ಮಾತಾಡಿದ.

"ಈಗ ಏನ್ರಿ ಮಾಡೋದು... ?"

"ಅವನು ಪೋಲಿಸರಿಗೆ ಶರಣಾಗತನಾಗ್ತಾನಂತೆ. ಒಂದ್ಸಾರಿ ಹೆಂಡತೀನ, ಮಗೂನ ನೋಡ್ಬೇಕು ಅಂತಂದ."

"ನೀವು ಒಪ್ಪಿಕೊಂಡು ಬಿಟ್ರಾ ?" ತಟ್ಟನೇ ಕೇಳಿದಳು.

"ಇಲ್ಲ..... ನಾನು ಒಪ್ಪಲಿಲ್ಲ... ತರಕಾರಿ ಮಾರ್ಕೆಟ್ಟಿನ ಬಳಿ ಇರುವ ದೇವಸ್ಥಾನಕ್ಕೆ ಕಳಿಸಿಕೊಡಿ. ದೂರದಿಂದ ನೋಡ್ತೀನಿ. ಮಾತನ್ನು ಸಹ ಆಡುಲ್ಲ... ಇಷ್ಟು ಉಪಕಾರ ಮಾಡಿ ಅಂತ ಕೈ ಹಿಡಿದು ಕೇಳ್ಕೊಂಡ."

"ನೀವು ಧರ್ಮರಾಯರು . ಹೂಂ ಅಂತ ಅಂದಿರ್ತೀರಿ... ನಮಗೆ ಈ ರಗಳೆಯೆಲ್ಲ ಬೇಡ... ಅತ್ಲಾಗೆ ಕಳಿಸಿಕೊಡಿ."

"ನಾನೂ ಹಾಗೆ ಯೋಚಿಸಿದೀನಿ. ನೀನು ಈಕೆಯ ಹತ್ರ ಮಾತನ್ನಾಡು. ಅವಳು ಹೋಗೇ ಹೋಗ್ತಾಳೆ. ಇಲ್ಯಾಕೆ ಇರ್ತಾಳೆ ?..."

"ಸರಿ, ನಾನೀಗ್ಲೇ ಮಾತಾಡ್ತೀನಿ. ಅವಳಿನ್ನು ಮಲಗಿರ್‍ಲಿಲ್ಲ.." ಎನ್ನುತ್ತಾ ಹೊರಬಂದು ಮಂದಾಕಿನಿ ಇದ್ದ ರೂಮಿನ ಬಾಗಿಲನ್ನು ತಳ್ಳಿದಳು. ಅವಳನ್ನು ಹೊರಕ್ಕೆ ಕರೆದಳು. ಕೆಳಗಿನ ದನಿಯಲ್ಲಿ ಗಂಡ ಹೇಳಿದುದನ್ನು ಹೇಳಿದಳು. "ನೋಡೀಮ್ಮ. ನಮಗೆ ಈ ಫಜೀತಿಯೆಲ್ಲಾ ಬೇಡ. ನಿಮ್ಮ ಗಂಡನ ಜೊತೆ ಹೊರಟು ಹೋಗಿ. ಏನೋ ಎರಡು ದಿನ ನಿಮಗೆ ಆಶ್ರಯ ಕೊಟ್ಟಿದ್ದಾಯ್ತು. ಇನ್ನು ಸಾಧ್ಯವಿಲ್ಲ, ನಿಮ್ಮೂರಿಗೆ ಹೊರಟು ಹೋಗಿ.."

"ಹಾಗನ್ಬೇಡಿ ಅಕ್ಕಾ. ನನ್ನ ಗಂಡ ಏನೋ ಕಷ್ಟದಲ್ಲಿರಬೇಕು. ಅವರು ಜೈಲಿಗೆ ಹೋದರೆ ಮುಂದೆ ನಮ್ಮ ಗತಿಯೇನು ?... ನನ್ನ ಮಗನ ಭವಿಷ್ಯ ಏನು?"

"ಇದನ್ನೆಲ್ಲಾ ಮುಂಚೇನೇ ಯೋಚಿಸ್ಬೇಕಾಗಿತ್ತಮ್ಮ.... ಈಗ ಹೀಗಂದ್ರೆ ... ನಾವೇನು ನಿಮ್ಮ ಬಂಧುವೇ ಬಳಗವೇ..... ನಮಗ್ಯಾಕೆ ಕಷ್ಟ ಕೊಡ್ತೀರಿ?"

"ನಿಮ್ಮ ಮನೆಯ ಕಸ ಮುಸುರೆ ಕೆಲಸ ಮಾಡ್ಕೊಂಡು ಇರ್ತೀನಿ. ಇಲ್ಲಿಂದ ಹೋಗು ಅಂತ ಮಾತ್ರ ಹೇಳ್ಬೇಡಿ. ನಮ್ಮ ಈ ಮಗುವನ್ನು ನಿಮಗೇ ಕೊಟ್ಟು ಬಿಡ್ತೀನಿ. ನಾನು ಕೆರೇನೋ ಬಾವೀನೋ ನೋಡ್ಕೋತೀನಿ."

"ಸರಿ, ಆ ಹಗರಣ ಬೇರೆ ಕಾದಿದೆಯೋ ನಮಗೆ?.... ಆಶ್ರಯ ಕೊಟ್ಟಿದ್ದಕ್ಕೆ ಆತ್ಮಹತ್ಯೆಯ

ಬೆದರಿಕೆ ಹಾಕಿ ನಮ್ಮನ್ನ ಜೈಲಿಗೆ ಕಳಿಸ್ಬೇಕು ಅಂತ ಮಾಡಿದೀರಾ ? ಇದೆಲ್ಲ ಚೆನ್ನಲ್ಲ... ನಿಮ್ಮ ಗಂಡನ ಹತ್ತಿರ ಮಾತನ್ನಾಡಿ ಒಂದು ಇತ್ಯರ್ಥಕ್ಕೆ ಬನ್ನಿ ...ನಮಗೆ ಸಾಕು."

"ಆಯ್ತು , ನೀವು ಇಷ್ಟು ಹೇಳಿದ್ಮೇಲೆ , ನನಗೂ ಇಲ್ಲಿ ಇರುಕ್ಕೆ ಕಷ್ಟ ಆಗುತ್ತೆ." ಅವಳು ಕಣ್ಣುಗಳನ್ನು ಒರೆಸಿಕೊಂಡಾಗ, ಇವಳಿಗೂ ಹೃದಯ ಭಾರ ಆಯಿತು.

ಇವಳ ಗಂಡ ಅಪರಾಧಿಯೋ, ನಿರಪರಾಧಿಯೋ ತಿಳಿಯದು. ಆದರೆ, ಈಕೆಯ ಹಾಗೂ ಈ ಮಗುವಿನ ತಪ್ಪಾದರು ಏನಿದೆ? . ಇವರೇಕೆ ಅನುಭವಿಸ್ಬೇಕು. ಅಂತಂದು ಕೊಂಡಳು. ಆದರೆ ಅದನ್ನು ಆಡಲಿಲ್ಲ. ಎದ್ದು ತನ್ನ ರೂಮಿಗೆ ಹೊರಟು ಹೋದಳು. ಮಂದಾಕಿನಿಯೂ ತನ್ನ ರೂಮಿಗೆ ಬಂದು, ಮಗನನ್ನು ಅಪ್ಪಿಕೊಂಡು ಮಲಗಿ ರೋಧಿಸಿದಳು. ತಾನು ಈ ಮನೆಗೆ ಬಂದು ನಾಲ್ಕು ದಿನಗಳು ಕಳೆದಿವೆ. ಗಂಡ ಹೆಂಡತಿ ಇಬ್ಬರೂ ಒಳ್ಳೆಯವರೇ. ಆದರೂ ತನಗೆ ಆಶ್ರಯ ಕೊಡಬೇಕು ಎನ್ನುವುದು ಯಾವ ನ್ಯಾಯ ? ಗಂಡನೊಡನೆ ಮಾತನಾಡಿ, ಒಂದು ವ್ಯವಸ್ಥೆ ಮಾಡುವಂತೆ ಕೇಳಿಕೊಳ್ತೀನಿ. ಯಾವುದಾದರೂ ಮಹಿಳಾ ಆಶ್ರಮಕ್ಕೆ ಸೇರಿಕೊಂಡು ಕಾಲವನ್ನು ಕಳಿತೀನಿ ಎಂದು ತನ್ನಲ್ಲೇ ನಿರ್ಧರಿಸಿಕೊಂಡಳು.

* * *

ದೇವಸ್ಥಾನದ ಕಟ್ಟೆಯ ಮೇಲೆ ಕಾದು ಕುಳಿತಿದ್ದ ಮಂದಾಕಿನಿ ಗಂಡನ ಬರವನ್ನು ನಿರೀಕ್ಷಿಸುತ್ತಿದ್ದಳು. ಅವನು ಬರಲೇ ಇಲ್ಲ. ಅವನು ಹೇಳಿದ್ದ ಸಮಯ ಕಳೆದಿತ್ತು. ಅವಳೊಂದಿಗೆ ಬಂದಿದ್ದ ಯಶವಂತನಿಗೂ ಅವನು ಎಲ್ಲಿಯೂ ಕಾಣಲಿಲ್ಲ. ಅವನಿಗೂ ಆತಂಕವಾಗಿತ್ತು.

"ಈಗೇನು ಮಾಡ್ತೀಯಮ್ಮ ! ನಿಮ್ಮ ಗಂಡ ಬರಲೇ ಇಲ್ಲ..."

"ನಾನೇನು ಮಾಡ್ಬೇಕು ಅಂತ ನೀವೇ ಹೇಳಿ.... ಈ ಮಗುವನ್ನು ನಿಮ್ಮೊಂದಿಗೆ ಕರೆದುಕೊಂಡು ಹೋಗಿ... ನನ್ನ ವಿಷಯ ಬಿಟ್ಟುಬಿಡಿ."

"ನಾನು ನಿಮ್ಮ ಜೊತೆಯಲ್ಲಿರುವುದನ್ನು ಎಷ್ಟೋ ಜನರು ನೋಡಿದಾರೆ. ನೀವೇನಾದ್ರೂ ಮಾಡಿಕೊಂಡ್ರೆ ನನ್ನ ತಲೆಗೆ ಬರುತ್ತದೆ. ಮನೆಗೆ ಹೋಗೋಣ ನಡೆಯಿರಿ" ಹಲ್ಲುಕಚ್ಚಿ ನುಡಿದ. ಇಬ್ಬರೂ ವಾಪಸ್ಸು ಮನೆಗೆ ಬಂದರು. ಗಂಡನೊಡನೆ ಮತ್ತೆ ಮಂದಾಕಿನಿ ಬಂದುದನ್ನು ಕಂಡು ರಾಜಲಕ್ಷ್ಮಿ ಸಿಡಿಮಿಡಿಗೊಂಡಳು. ಆದರೆ ಏನನ್ನು ಆಡಲಿಲ್ಲ. ಅವಳ ಗೆಳತಿ ವಿಜಯ ತನ್ನ ತಂಗಿಯೊಂದಿಗೆ ಬಂದು ಕುಳಿತಿದ್ದಳು. ಯಶವಂತ ಕಾಫಿಯನ್ನು ಕುಡಿದು ಸೀದಾ ತನ್ನ ಆಫೀಸಿಗೆ ಹೊರಟು ಹೋದ. ಮಂದಾಕಿನಿ ತನ್ನ ರೂಮನ್ನು ಸೇರಿಕೊಂಡಳು. ರಾಜಲಕ್ಷ್ಮಿಗೆ ಅವರುಗಳೊಂದಿಗೆ ಮಾತನಾಡುವ ಮನಸ್ಸೇ ಇರಲಿಲ್ಲ. ಬೇಸರದಿಂದ ಎಲ್ಲರಿಗೂ ಕಾಫಿಯನ್ನು ಬೆರೆಸಿ ತಂದು ಕೊಟ್ಟಳು. ಸೌಜನ್ಯವನ್ನು ಬಿಡದೇ ಮಂದಾಕಿನಿಗೂ ಕಾಫಿಯನ್ನು ಕೊಟ್ಟಳು.

"ಸ್ವಲ್ಪ ಅವರನ್ನು ಹೊರಕ್ಕೆ ಕರೀರಿ. ನಾನು ಅವರ ಹತ್ರ ಮಾತಾಡ್ಬೇಕು" ಸುಜಯ ಹೇಳಿದಾಗ, ವಿಧಿ ಇಲ್ಲದೇ ಹೊರಕ್ಕೆ ಕರೆದಳು.

ಸುಜೀ ನೀನು ಏನು ಬೇಕೋ ಎಲ್ಲಾ ಮಾತಾಡು.... ನಾನು ಇಲ್ಲೇ ಹತ್ತಿರದ ಅಂಗಡಿಗೆ

ಹೋಗಿ ಬರ್ತೀನಿ. ಅಂತ ಹೇಳಿ ವಿಜಯ ಹೊರಟಳು.

"ನಾನೂ ಬರ್ತೀನಿ ವಿಜಯಾ.... ಮನೆ ಬಿಟ್ಟು ನಾಲ್ಕು ದಿನಗಳಾದವು. ನಂಗೂ ಸ್ವಲ್ಪ ಸಾಮಾನುಗಳನ್ನು ಕೊಳ್ಳೋದಿದೆ." ಎಂದು ಹೇಳಿ ರಾಜಲಕ್ಷ್ಮಿಯೂ ಅವಳೊಡನೆ ಹೊರಟಳು.

"ಮುಂಬಾಗಿಲನ್ನು ಹಾಕ್ಕೊಳ್ಳಿ, ಬೇಗ ಬಂದು ಬಿಡ್ತೀವಿ. ಮಕ್ಕಳನ್ನು ಆಚೆಗೆ ಬಿಡ್ಬೇಡಿ. ಶರತ್ ಮಲಗಿದಾನೆ. ಅವನು ಏಳೋದ್ರೊಳ್ಗೆ ಬಂದು ಬಿಡ್ತೀವಿ" ಎಂದು ಇಬ್ಬರನ್ನೂ ಕುರಿತು ಹೇಳಿ ಮನೆಯಿಂದ ಹೊರಕ್ಕೆ ಹೊರಟಳು.

ಅವರಿಬ್ಬರೂ ವಾಪಸ್ಸು ಬರುವಷ್ಟರಲ್ಲಿ ಸುಜಯಾ, ಮಂದಾಕಿನಿ ಇಬ್ಬರೂ ಆಪ್ತರಾಗಿ ಬಿಟ್ಟಿದ್ದರು. ಮಂದಾಕಿನಿಯ ಅಸಹಾಯಕತೆ ಸುಜಯಳನ್ನು ತಟ್ಟಿತ್ತು. ಸುಜಯಳ ನಡೆ ನುಡಿ, ಸ್ನೇಹ, ವಿಶ್ವಾಸ ಮಂದಾಕಿನಿಗೆ ಹಿಡಿಸಿತ್ತು.

"ನನಗೆ ಇಲ್ಲೇ ಸಮೀಪದಲ್ಲಿ ಮನೆಯನ್ನು ಗೊತ್ತು ಮಾಡಿಕೊಡ್ತಾರೆ. ನನ್ನ ಜೊತೆಗೆ ನೀವು ಇದ್ದು ಬಿಡಿ. ನನಗೆ ಸಹಾಯವಾಗುತ್ತದೆ. ಬಾಣಂತನವನ್ನು ಮುಗಿಸಿಕೊಂಡು ನಾನು ಮತ್ತೆ ಕೆಲಸಕ್ಕೆ ಸೇರಿಕೊಳ್ತೀನಿ"ಎಂದಿದ್ದಳು.

"ಈಗ ನಿಮಗೆ ಎಷ್ಟು ತಿಂಗಳು ! ನೀವು ಪ್ರೆಗ್ನೆಂಟ್ ಅಂತ ಗೊತ್ತಾಗುವುದೇ ಇಲ್ಲ" ಎಂದು ಕೇಳಿದಳು.

"ಈಗಿನ್ನು ಮೂರು ತಿಂಗಳು ತುಂಬಿದೆ. ಇನ್ನೂ ಆರು ತಿಂಗಳು ಕಳೆಯಬೇಕು. ನಾನು ಪ್ರೆಗ್ನೆಂಟ್ ಅಂತ ನನ್ನ ಅಕ್ಕನಿಗೆ ಮಾತ್ರ ಗೊತ್ತು. ನನ್ನ ಅಣ್ಣ, ಅತ್ತಿಗೆಗೆ, ತಾಯಿಗೆ ತಿಳಿಯದು. ಅದಕ್ಕೇ ಯಾರಿಗೂ ಗೊತ್ತಾಗದಂತೆ ನಾನು ಒಬ್ಬಳೇ ಇರ್ತೀನಿ."

"ಯಾಕೆ ? ನಿಮ್ಮ ಅತ್ತೆ ಮನೆಯವರ್‍ಯಾರೂ ಇಲ್ವಾ?" –ಮುಗ್ಧಳಂತೆ ಕೇಳಿದಳು. ಸುಜಯ ನಕ್ಕಳು.

"ಇದಾರೆ, ಆದರೆ ನಾನು ಅಲ್ಲಿಗೆ ಹೋಗುವಂತಿಲ್ಲ, ನಾನು ನನ್ನ ಗಂಡನಿಗೆ ಡೈವೋರ್ಸ್ ಕೊಟ್ಟಿದೀನಿ."

"ಮತ್ತೆ ಈ ಮಗು ?... ಅವರಿಗೆ ಬೇಡ್ವಾ?..."

"ಅವರಿಗ್ಯಾಕೆ ಕೊಡ್ಬೇಕು? ,... ಈ ಮಗು ನನ್ನದೂ ಅಲ್ಲ, ನನ್ನ ಸ್ನೇಹಿತಯದು ಅವಳಿಗೋಸ್ಕರ ಹೆತ್ತು ಕೊಡ್ತಿದೀನಿ...."

"ಸ್ನೇಹಿತೆಗೋಸ್ಕರ ನೀವು ಬಸಿರಿ ಆಗಿದೀರಾ?..... ಹಾಗಾದ್ರೆ ಮಗುವಿನ ತಂದೆ?..."

"ಈ ಮಗುವಿನ ತಂದೆ ನನ್ನ ಸ್ನೇಹಿತೆಯ ಗಂಡ. ಅವರಿಬ್ಬರೂ ಒಪ್ಪಿಯೇ ನನ್ನನ್ನು ಅವರ ಮಗುವಿಗೆ ಬಾಡಿಗೆ ತಾಯಿಯನ್ನಾಗಿ ಆಯ್ಕೆ ಮಾಡಿದ್ದಾರೆ...."

"ಬಾಡಿಗೆ ತಾಯೀನಾ ? ..... ಹಾಗಂದ್ರೆ ?..."

"ಯಾಕೆ ? ನಿಮಗೆ ಈ ವಿಷಯ ಗೊತ್ತಿಲ್ವಾ...?" ಅಷ್ಟರಲ್ಲಿ ಗೇಟು ತೆರೆದ ಸದ್ದಾಯಿತು.

ಸುಜಯ ಮಾತನ್ನು ನಿಲ್ಲಿಸಿದಳು. "ನಾನು ಇದನ್ನೆಲ್ಲ ನಿಮಗೆ ಹೇಳ್ದೆ ಅಂತ ಯಾರ್ಗೂ ಹೇಳ್ಬೇಡಿ...."

"ಹಾಗಾದ್ರೆ ನಿಮ್ಮ ಅಕ್ಕನಿಗೂ ಗೊತ್ತಿಲ್ವಾ ? ..."

"ಇಲ್ಲ... ಅವಳಿಗೂ ಗೊತ್ತಿಲ್ಲ... "ಎಂದು ಹೇಳಿ ಸೋಫಾದ ಬೆನ್ನಿಗೆ ಒರಗಿದಳು.

ಮಂದಾಕಿನಿ ಅವಳು ಹೇಳಿದುದನ್ನೇ ಯೋಚಿಸುತ್ತಿದ್ದಳು. ಗೆಳತಿಯರಿಬ್ಬರು ಒಳಕ್ಕೆ ಬಂದರು. ತಾವು ಕೊಂಡು ತಂದಿದ್ದ ಸಾಮಾನುಗಳನ್ನು ಸುಜಯಳಿಗೆ ತೋರಿಸಿದರು.

"ನಿನಗೆ ಅಂತ ಒಂದು ಮನೇನೂ ನೋಡ್ಕೊಂಡು ಬಂದಿದೀವಿ. ಮನೆ ಚೆನ್ನಾಗಿದೆ. ಔಟ್‌ಹೌಸ್. ಆದರೆ ಮೇಲಿನ ಮನೆ. ನಿನಗೆ ಹತ್ತಿ ಇಳಿಯೋಕೆ ಆಗುತ್ತೇನೆ ?"

"ಆಗುತ್ತೆ , ನಾನು ಆರೋಗ್ಯವಾಗಿದೀನಿ....."

"ನಿನಗೆ ಈ ಆಸೆ ಯಾಕೆ ಹುಟ್ತೋ ನಂಗಂತೂ ಅರ್ಥವಾಗುಲ್ಲ"

"ನಾನು ಆರಾಮವಾಗಿದೀನಿ. ನೀನ್ಯಾಕೆ ತಲೆ ಕೆಡಿಸ್ಕೋತೀಯ ಬಿಡು."

"ಮಗು ನಂಗೆ ಬೇಕು ಅಂತ ನಿನ್ನ ಗಂಡ ಕೇಸು ಹಾಕಿದ್ರೆ ಏನ್ಮಾಡ್ತೀಯೇ.... "

"ಮಗು ಅವನದ್ದಲ್ಲ...."

"ಹಾಗಾದ್ರೆ ಯಾರ ಸ್ನೇಹ ಇದೆ ? ಈಗ್ಲಾದ್ರೂ ಹೇಳು...."

"ಮಗು ನಂದು ಕಣೇ.... ಡೈವೋರ್ಸ್ ಆದ್ಮೇಲೆ ಅವನು ನನ್ನ ಗಂಡನಲ್ಲ, ಹಾಗೇ ನನಗೆ ಯಾರ ಗೆಳೆತನವೂ ಇಲ್ಲ, ಈ ವಿಷಯ ನಿಂಗೆ ಬೇಡ ಬಿಡು."

"ಮತ್ತೆ ನನ್ನ ಸಹಾಯಾನ ಯಾಕೆ ಕೇಳ್ತೀದೀಯ.....?"

"ಬಿಡಿ ವಿಜಯಾ... ಈಗ ಚರ್ಚೆ ಯಾಕೆ ? ....ಅವರೇ ಎಂದಾದ್ರೂ ಹೇಳ್ತಾರೆ ಬಿಡಿ" ರಾಜಲಕ್ಷ್ಮಿ ಎಂದಳು. ಅವರುಗಳು ಹೊರಟು ಹೋದರು .

"ಅಕ್ಕಾ , ನಿಮ್ಮಿಂದ ನನಗೆ ತುಂಬಾ ಉಪಕಾರವಾಯ್ತು. ಈ ಋಣವನ್ನು ಹೇಗೆ ತೀರಿಸ್ಬೇಕೋ ತಿಳೀದ ಹಾಗಾಗಿದೆ. ನನಗೆ ಆಶ್ರಯ ಕೊಟ್ಟಿರಿ. ನನಗೆ ಒಂದು ದಾರಿಯನ್ನು ಮಾಡಿ ಕೊಟ್ಟಿದೀರಿ......" ಮಂದಾಕಿನಿ ಕೈ ಮುಗಿದು ಕೃತಜ್ಞತೆಯನ್ನು ತೋರಿದಳು.

"ಪರವಾಗಿಲ್ಲ ಬಿಡಿ. ನಮ್ಮ ಯಜಮಾನರಿಗೆ ಹೆಂಗರುಳು. ಹಿಂದೆ ಮುಂದೆ ಯೋಚಿಸದೇ ನಿಮ್ಮನ್ನು ನಮ್ಮ ಮನೆಗೆ ಕರೆತಂದರು. ಆ ಕೋಪದಲ್ಲಿ ನಾನು ಅಸಹನೆಯಿಂದ ಮಾತನಾಡಿದೀನಿ. ಅದನ್ನೆಲ್ಲ ಮನಸ್ಸಿಗೆ ಹಚ್ಕೋಬೇಡಿ. ಆದರೆ ನಂಗೆ ಒಂದು ವ್ಯಥೆ. ನಿಮ್ಮ ಗಂಡನ ಮನೆಗೆ ನೀವು ವಾಪಸ್ಸು ಹೊರಟು ಹೋಗಿದ್ದಿದ್ರೆ ಚೆನ್ನಾಗಿತ್ತು."

"ಅವರು ಪೋಲಿಸರ ಕೈಗೆ ಸಿಕ್ಕಿ ಬಿದ್ದಿರಬಹುದು. ಬಿಡುಗಡೆಯಾದ ಮೇಲೆ ಅವರೇ ಬರ್ತಾರೆ ಬಿಡಿ."

"ಅಂಥಾ ಅಪರಾಧ ಏನು ಮಾಡಿದ್ರು ?"

"ಏನೋ ನಂಗೂ ಸರಿಯಾಗಿ ತಿಳಿಯದು. ಪೋಲಿಸರ ಕೈಗೆ ಸಿಕ್ಕದಂತೆ ತಪ್ಪಿಸಿಕೊಂಡು ತಿರುಗಾಡುತ್ತಿದ್ರು. ಒಮ್ಮೆ ನನ್ನ ಹತ್ರ ಮಾತನ್ನಾಡಿದ್ರೆ ಚೆನ್ನಾಗಿತ್ತು. ಯಾಕೆ ಬರಲಿಲ್ಲವೋ ನಂಗೆ ಗೊತ್ತಾಗಲೇ ಇಲ್ಲ, ಮನೆ, ಸಾಮಾನು, ಸರಂಜಾಮುಗಳನ್ನು ಏಕಾಏಕಿ ಬಿಟ್ಟು ಇಲ್ಲಿಗೆ ಬಂದು ಬಿಟ್ಟೆ ಅಲ್ಲಿಗೆ ಯಾವಾಗ ಹೋಗ್ತೀನೋ...." ಮಂದಾಕಿನಿಯ ಕಣ್ಣುಗಳು ನೀರಾಡಿದವು.

"ಅಳ್ಬೇಡಿ, ದೇವರು ಒಂದು ಮಾರ್ಗ ತೋರಿದಾನೆ.... "

"ನನಗೆ ನನ್ನ ಮಗನ ಭವಿಷ್ಯದ್ದೇ ಚಿಂತೆ. ನನ್ನ ಗಂಡ ವಾಪಸ್ಸು ಯಾವಾಗ ಬರ್ತಾನೋ.. ಅಥವಾ ಬರುವುದೇ ಇಲ್ಲವೋ?"

"ಛೇ, ಹಾಗ್ಯಾಕೆ ಯೋಚಿಸ್ತೀರಿ?.... ಸುಜಯ ನಾಳೆ ಬೆಳಿಗ್ಗೆ ಸೀದಾ ಈ ಮನೆಗೇ ಬರ್ತಾಳಂತೆ. ನೀವು ಆಮೇಲೆ ಹೋಗಿ ಮನೆ ಕ್ಲೀನ್ ಮಾಡಿಬಿಡಿ."

"ಅಕ್ಕಾ, ಬಾಡಿಗೆ ತಾಯಿ ಅಂದ್ರೇನು?" ಇದ್ದಕ್ಕಿದ್ದಂತೆ ಮಂದಾಕಿನಿ ಕೇಳಿದಾಗ ರಾಜಲಕ್ಷ್ಮಿ ಆಶ್ಚರ್ಯದಿಂದ ನೋಡಿದಳು.

"ಇದ್ದಕ್ಕಿದ್ದ ಹಾಗೆ ಈ ವಿಷಯ ಯಾಕೆ?" ಯಾಕೆ ಕೇಳ್ತಿದೀರಿ ?

"ನಾನು ಹೇಳಿದ್ರೆ ತಪ್ಪಾಗಬಹುದು. ಅವರು ಯಾರಿಗೂ ಹೇಳ್ಬೇಡಿ ಅಂತಂದ್ರು. ಸುಜಯ ಅವರು ಈಗ ಬಾಡಿಗೆ ತಾಯಿಯಾಗಿದಾರಂತೆ. ಅವರ ಸ್ನೇಹಿತೆಗೆ ಮಗುವನ್ನು ಹೆತ್ತು ಕೊಡ್ತಾರಂತೆ."

"ಹೌದಾ ! ನಿಮಗೆ ಹೇಗೆ ಗೊತ್ತಾಯಿತು?"

"ಅವರೇ ಹೇಳಿದ್ರು. ಆದರೆ ಇದು ಹೀನಾಯದ ಕೆಲಸ ಅಲ್ವಾ ! ಇವರ ಸ್ನೇಹಿತೆ ಅದ್ಹೇಗೆ ಒಪ್ಪಿಕೊಂಡು, ಗಂಡನ್ನ ಇವರ ಬಳಿಗೆ ಕಳ್ಸಿದ್ರು.... "

"ಎಲ್ಲೋ ಆಕೆಗೆ ಮಕ್ಕಳಾಗದೇ ಇರುವಂಥ ತೊಂದರೆ ಇರಬಹುದು.... ಆತನಿಗೆ ಮಗು ಬೇಕು ಅಂತ ಅನ್ನಿಸಿರಬಹುದು. ಗುಟ್ಟುಗುಟ್ಟಾಗಿ ಏನೋ ವ್ಯವಹಾರ ನಡೆದಿದೆ. ನಮಗ್ಯಾಕೆ ಬಿಡಿ..."

"ಇಂಥಾ ಸ್ನೇಹಿತೆಯರೂ ಇರ್ತಾರಾ !"

"ಇದು ಸ್ನೇಹಿತೆಯರಲ್ಲಿ ಮಾಡಿಕೊಂಡಿರುವ ಒಂದು ಒಪ್ಪಂದ. ಈಗ ಕಾನೂನಿನಲ್ಲಿ ಇದಕ್ಕೆ ಬೆಂಬಲ ಇದೆ. ಡಾಕ್ಟರ್ಸ್‌ಗಳು, ಕೃತಕವಾಗಿ ಗರ್ಭಧಾರಣೆ ಮಾಡಿಸುವ ಕೇಂದ್ರಗಳಿವೆ."

"ಹೌದಾ ! ನನಗೆ ಈ ವಿಷಯ ಗೊತ್ತಿರಲೇ ಇಲ್ಲ"

"ಬಾಡಿಗೆ ತಾಯಿ" ಎನ್ನುವುದು ಈಗ ಕೆಲವಾರು ವರ್ಷಗಳಿಂದ ಸಮಾಜದಲ್ಲಿ ಪರಿಚಯಗೊಂಡಿರಬಹುದು. ನನ್ನಂಥ ಮಕ್ಕಳನ್ನು ಹೆರಲಾಗದ ಹೆಂಗಸರು... ಎಂದಷ್ಟೇ ಹೇಳಿ ನಾಲಗೆಯನ್ನು ಕಚ್ಚಿಕೊಂಡು ಸುಮ್ಮನಾದಳು. ಮಂದಾಕಿನಿ ಅವಳನ್ನೇ ಕುತೂಹಲದಿಂದ

ನೋಡಿದಳು....

"ಹಾಗಾದ್ರೆ.... ಶರತ್... ಬಾಡಿಗೆ ತಾಯಿಗೆ ಹುಟ್ಟಿದವನಾ ?"

"ಅಲ್ಲ ಅವನನ್ನು ನಾವು ದತ್ತು ತೆಗೆದುಕೊಂಡಿದೀವಿ.... ಇನ್ನು ಈ ಮಾತ ಸಾಕು. ಈ ಬಗ್ಗೆ ಮಾತನಾಡಲು ನನಗೆ ಇಷ್ಟವಿಲ್ಲ...." ರಾಜಲಕ್ಷ್ಮಿ ಮುಖ ಅತ್ತ ತಿರುಗಿಸಿದಳು. ತಾನು ಆಡಬಾರದ್ದು ಏನನ್ನೋ ಆಡಿದೆ ಎಂಬಂತೆ ರಾಜಲಕ್ಷ್ಮಿ ಕಳವಳಗೊಂಡಳು.

* * *

ಹಿಂದನ ರಸ್ತೆಯಲ್ಲೇ ಇದ್ದ ಒಂದು ಔಟ್ ಹೌಸಿನಲ್ಲಿ ಸುಜಯ ಬಂದು ಇರತೊಡಗಿದಳು. ಮಂದಾಕಿನಿ ತನ್ನ ಮಗನೊಂದಿಗೆ ಅಲ್ಲಿಗೆ ಹೋಗಿರುವುದೆಂದು ತೀರ್ಮಾನವಾಗಿತ್ತು.

"ನೋಡಿ ಮಂದಾಕಿನಿ, ವಿಜಯಾ ನನ್ನ ಸ್ನೇಹಿತೆ, ನೀವು ಅವಳ ತಂಗಿಯ ಜೊತೆ ಇರಲು ಹೋಗುತ್ತಿದೀರಿ. ಹೇಳದೇ ಕೇಳದೆ ಎಲ್ಲೆಲ್ಲೋ ಹೊರಟು ಬಿಡಬೇಡಿ. ಅವಳಿಗೆ ಸಹಾಯಕಳಾಗಿರಬೇಕು. ತೊಂದರೆ ಕೊಡುವಂತೆ ಆಗಬಾರದು. ಬೇಜಾರು ಮಾಡಬಾರದು. ಅವಳ ಬಾಣಂತನ ಮುಗಿದು ಅವಳು ವಾಪಸ್ಸು ಹೋಗುವವರೆಗೂ ನೀವು ಅಲ್ಲಿರಬೇಕು."

"ಆಮೇಲೆ?.... ನಾನೆಲ್ಲಿಗೆ ಹೋಗ್ಲಿ ಅಕ್ಕಾ ?"

"ನೋಡೋಣ. ಅಷ್ಟರೊಳಗೆ ನಿಮ್ಮ ಗಂಡ ನಿಮ್ಮನ್ನು ಕರೆದೊಯ್ಯಬಹುದು. ಅಥವಾ ಸುಜಯ ನಿಮ್ಮನ್ನು ಕರೆದೊಯ್ಯುವುದಾದರೆ ಹೋಗ್ತೀರಿ ಅಲ್ವಾ?"

"ಯಾಕೋ ಭಯ ಆಗುತ್ತೆ ಅಕ್ಕಾ...."

"ಭಯ ಯಾಕೆ ? ಹತ್ತಿರದಲ್ಲಿ ನಾವುಗಳು ಇದೀವಿ. ಅಕ್ಕ ಪಕ್ಕದಲ್ಲಿ ಸಂಸಾರಸ್ಥರಿದಾರೆ. ಏನಾದ್ರು ಸಹಾಯ ಬೇಕಾದ್ರೆ ಕೇಳಿ... ಮಾಡ್ತಾರೆ..."

"ನಾನು ಒಬ್ಬಳೇ ಇದೀನಿ ಅಂತ, ಯಾರಾದ್ರೂ ನನ್ನನ್ನು ಬಾಡಿಗೆ ತಾಯಿಯಾಗ್ತೀಯ ಅಂತ ಕೇಳಿ ಬಿಟ್ಟರೆ ?...." ರಾಜಲಕ್ಷ್ಮಿ ನಕ್ಕಳು.

"ಅದೆಲ್ಲ ಅಷ್ಟು ಸುಲಭವಲ್ಲ, ಅಂಥ ಪ್ರಸಂಗ ಬಂದರೆ ಯೋಚಿಸೋಣ" ಅಂತ ಹೇಳಿ ಕಳಿಸಿದಳು.

ಈಗ ಮನೆ ಖಾಲಿ ಖಾಲಿ ಅಂತೆನಿಸತೊಡಗಿತು. ಮಂದಾಕಿನಿಯೂ ಇಲ್ಲ, ಅವಳ ಮಗನ ಗಲಾಟೆ ಚೇಷ್ಟೆ ಯಾವುದೂ ಇಲ್ಲ, ಶರತ್‌ನ ಹಠ ಬೇಸರವಾಗುತ್ತಿತ್ತು. ಮಂದಾಕಿನಿ ಇದ್ದಿದ್ದರೆ, ಇವನನ್ನು ನೋಡಿಕೊಳ್ಳಲು ಬಿಡಬಹುದಾಗಿತ್ತು ಅಂತೆನ್ನಿಸಿತ್ತು. ಯಶವಂತನೂ ಟೂರ್‌ನಿಂದ ಬಂದಿರಲಿಲ್ಲ, ಬೇಸರವನ್ನು ಕಳೆಯಲು ಯಾರಾದರೂ ಬೇಕೆನ್ನಿಸಿತ್ತು. ವಿಜಯಳಿಗೆ ಫೋನು ಮಾಡಿದಳು. "ಮಂದಾಕಿನಿಯೂ ಮನೇಲಿಲ್ಲ, ಬೇಸರ ಆಗ್ತಿದೆ. ಬರ್ತೀರಾ?" ಅಂತ ಕೇಳಿದಳು.

"ಇಲ್ಲ , ರಾಜಲಕ್ಷ್ಮಿ ನನಗೆ ಈಗ ಬಿಡುವಿಲ್ಲ" ಎಂದು ಬಿಟ್ಟಳು ವಿಜಯ.

ರಾಜಲಕ್ಷ್ಮಿ ರಿಸೀವರ್‌ನ ಕುಕ್ಕಿ ಸೋಫಾದ ಮೇಲೆ ಕುಳಿತಳು. ಅಳುತ್ತಿದ್ದ ಶರತ್ ಬಂದು

ಪಕ್ಕದಲ್ಲಿ ಕುಳಿತು ಪೀಡಿಸಲಾರಂಭಿಸಿದ. ರೇಗಿತು. ದೂರಸರಿದಳು. ಅವನ ಅಳು ಹೆಚ್ಚಿತ್ತು. "ಥೂ, ಇವನೊಬ್ಬ... ಸುಮ್ಮನೇ ಕೂತಿರೋಕೂ ಬಿಡುಲ್ಲ, ಯಾವಾಗ್ಲೂ ಇವನ ಸೇವೆಯೇ ಆಯ್ತು... ನನ್ನ ಹೊಟ್ಟೇಲಿ ಹುಟ್ಟಿದ್ದಿದ್ರೆ ಹೀಗೆ ಅಳು ಬರುಕನಾಗ್ತಿರಲಿಲ್ಲ, ಯಾಕಾದ್ರೂ ಸಾಕ್ತೀವಿ ಅಂತ ದತ್ತು ತಗೊಂಡ್ವೋ..... ಇದರ ಬದಲು ಒಬ್ಬ ಬಾಡಿಗೆ ತಾಯಿಯನ್ನು ಗೊತ್ತುಮಾಡಿಕೊಂಡು, ನಮ್ಮ ಸ್ವಂತ ಮಗುವನ್ನೇ ಪಡೆದಿದ್ದರೆ ಚೆನ್ನಾಗಿತ್ತೇನೋ.... ನಾವು ದುಡುಕಿ ಬಿಟ್ವೆವು.... ನನ್ನ ಗಂಡ ನನ್ನ ಮಾತಿಗೆ ಒಪ್ಪಿ ಸಾಕುವುದಕ್ಕೆ ಇವನನ್ನು ಕರೆತಂದರು. ಇದರ ಬದಲು ಒಂದು ಹೆಣ್ಣು ಮಗು ಇದ್ದಿದ್ದರೆ.... ಈಗಲೂ ಕಾಲ ಮಿಂಚಿಲ್ಲ.....ಒಂದು ಹೆಣ್ಣು ಮಗುವನ್ನು ತಂದು ಸಾಕಿದರೇ.... ಬೇಡ ಬೇಡ.... ಬೇರೆ ಯಾರದ್ದೋ ಮಗು ಬೇಡ... ನಮ್ಮದೇ ರಕ್ತ ಮಾಂಸವನ್ನು ಹಂಚಿಕೊಂಡು ಹುಟ್ಟುವ ಹೆಣ್ಣು ಮಗುವನ್ನು ಸೃಷ್ಟಿಸಿದರೇ.... ಅದಕ್ಕಾಗಿ ಒಬ್ಬ ಬಾಡಿಗೆ ತಾಯಿಯನ್ನು ಗೊತ್ತು ಮಾಡಿಕೊಂಡರೇ.... ಅವಳ ಆಲೋಚನಾ ಲಹರಿ ಎತ್ತೆತ್ತಲೋ ಹರಿಯಿತು. ಅತ್ತು ಅತ್ತು ಸುಸ್ತಾದ ಶರತ್ ಹಾಗೇ ಮಲಗಿ ನಿದ್ದೆ ಹೋಗಿದ್ದ...

"ಛೆ.... ಎಂಥಾ ಕೆಲಸವಾಯ್ತು. ತನ್ನ ಯಾವುದೋ ಆಲೋಚನೆಯಲ್ಲಿ ಮಗುವಿಗೆ ಹಾಲನ್ನು ಕುಡಿಸಲಿಲ್ಲ, ತಿನ್ನಲು ಏನನ್ನೂ ಕೊಡಲಿಲ್ಲ. ಹಸಿವು ಅಂತ ಅಳ್ತಿದ್ದನೋ ಏನೋ... ಛೇ.... ತಾನೆಂಥಾ ಪಾಪಿ..." ಎಂದು ತನ್ನನ್ನು ತಾನೇ ಬೈದುಕೊಂಡು, ಶರತ್‌ನನ್ನು ಸರಿಯಾಗಿ ಮಲಗಿಸಿ, ಅಡಿಗೆ ಮನೆಗೆ ಹೋಗಿ, ಹಾಲನ್ನು ಬಿಸಿ ಮಾಡಿ, ಫೀಡಿಂಗ್ ಬಾಟಲಿಗೆ ತುಂಬಿ ಹೊರಗೆ ತಂದಿತ್ತಳು.... ತನಗೆ ಕಾಫಿಯನ್ನು ಮಾಡಿಕೊಂಡು ಕುಡಿದಳು. ಅಲ್ಲಿ ಮಂದಾಕಿನಿ ಏನು ಮಾಡುತ್ತಿರಬಹುದು ?.... ಗಮನ ಮತ್ತೆ ಅವಳ ಕಡೆ ಹಾರಿತು.

"ಈಗ ತನಗೇಕೆ ಮಂದಾಕಿನಿಯ ಚಿಂತೆ ?.... ಅವಳು ಯೋಚಿಸುವಂತೆ, ಈಗ ಯಾರಾದರೂ ಅವಳನ್ನು ಬಾಡಿಗೆ ತಾಯಿಯಾಗು ಅಂತ ಕೇಳಿದರೆ .... ಅವಳೇನಂದಾಳು? ಸುಜಯ ಬಾಡಿಗೆ ತಾಯಿಯ ಕೆಲಸಕ್ಕೆ ಒಪ್ಪಿಕೊಂಡು ಗರ್ಭಿಣಿಯಾಗಿದಾಳೆ ಅಂತ ಹೇಳಿದಳಲ್ಲವೇ?... ಹಣದ ಆಸೆಗೆ ಒಪ್ಪಿಬಿಡಬಹುದೆ?... ಅಥವಾ.... ತಾಯಿಯಾಗುವ ಅನುಭವಗಳನ್ನು ಪಡೆಯಲು ಒಪ್ಪಿಕೊಂಡಿರಬಹುದೇ ? ... ಮಂದಾಕಿನಿಯನ್ನು ಕೇಳಿದರೆ ನಿಜ ತಿಳಿಯುತ್ತೆ.... ಅಯ್ಯೋ... ತಿಳಿದುಕೊಂಡು ಏನಾಗಬೇಕಾಗಿದೆ ನನಗೆ ?..."

ಇಲ್ಲ, ತಿಳಿದುಕೊಂಡಿದ್ದರೆ ಒಳ್ಳೆಯದು... ಹಣ ಎಷ್ಟು ಖರ್ಚಾಗಬಹುದು? ಎನ್ನುವ ಒಂದು ಅಂದಾಜು ತಿಳಿಯುತ್ತದೆ. ಇದರಿಂದ ಮುಂದೆ ನನಗೆ ಅನುಕೂಲವಾಗಬಹುದು. ಅಂದರೇ.... ನನಗೆ ಒಬ್ಬ ಬಾಡಿಗೆ ತಾಯಿ ಬೇಕಾಗಿದಾಳೆ ಅನ್ನುವ ಸೂಚನೆ ಬರುತ್ತಿರಬಹುದೇ? ಮತ್ತೆ ಮತ್ತೆ ಈ ಆಸೆ ಒತ್ತಿಕೊಂಡು ಬರುತ್ತಿದೆ... ಇದಕ್ಕೆ ಗಂಡ ಒಪ್ಪುವರೇ....?

"ಯಾಕೆ ಒಪ್ಪುವುದಿಲ್ಲ, ನನ್ನ ಆಸೆಗೆ ಅವರು ಒಪ್ಪಲೇ ಬೇಕು... ಆದರೆ ಈ ಶರತ್ ಒಬ್ಬ ಈಗಾಗಲೇ ಇದಾನಲ್ಲ, ಇದ್ದರೇನಂತೆ? ಇವನ ಜೊತೆಗೆ ಆಡಿಕೊಂಡಿರಲು ಇನ್ನೊಂದು ಮಗು ಬಂದರೇನಂತೆ?.... ಗಂಡನನ್ನು ಒಪ್ಪಿಸಲೇ ಬೇಕು. ಆದರೆ ಮಗುವನ್ನು ಹೆತ್ತುಕೊಡಲು ಬಾಡಿಗೆ ತಾಯಿ ಯಾರು?....ಅವಳ ಕಣ್ಣುಮುಂದೆ ಮಂದಾಕಿನಿಯ ರೂಪ ಬಂದು ನಿಂತಿತು. ಹೌದು. ಇವಳೇ ಸರಿಯಾದವಳು. ನೋಡಲು ಲಕ್ಷಣ ವಾಗಿದಾಳೆ. ಆರೋಗ್ಯವಾಗಿದಾಳೆ. ಅವಳನ್ನು

ಕೇಳಬೇಕು. ಒಂದು ವೇಳೆ ಅವಳು ಒಪ್ಪದಿದ್ದರೆ ? ಯಾಕೆ ಒಪ್ಪುವುದಿಲ್ಲ. ಈಗಾಗಲೇ ನಮ್ಮ ಸಹಾಯದ ಋಣಭಾರ ಅವಳ ಮೇಲೆ ಇದೆ. ಅದನ್ನು ತೀರಿಸಲು ನಾನೇ ಅವಕಾಶವನ್ನು ಕೊಡ್ತಿದೀನಿ.... ಮೊದಲು ಡಾಕ್ಟರ ಹತ್ತಿರ ಮಾತನ್ನಾಡ್ಬೇಕು. ಗಂಡನೊಡನೆ ಸಮಾಲೋಚನೆ ನಡೆಸಬೇಕು. ಇವರು ಯಾವಾಗ ಬರುವರೋ ?" ಎಂದು ಗಂಡನನನ್ನು ನಿರೀಕ್ಷಿಸತೊಡಗಿದಳು.

* * *

"ನನಗೆ ಒಂದು ಒಳ್ಳೆಯ ಆಲೋಚನೆ ಬಂದಿದೆ. ನೀವು ಬೇಡ ಅಂತ ಅನ್ನುವಂತೆಯೇ ಇಲ್ಲ" ಗಂಡನಿಗೆ ಬಡಿಸುತ್ತಾ ಹೇಳಿದಳು.

"ಅಂಥ ವಿಷಯ ಯಾವುದು ? .... ಅದ್ಸರಿ... ಆ ಹೆಂಗಸು, ಅವಳ ಮಗ ಕಾಣ್ತಾನೇ ಇಲ್ಲ... ಮನೆ ಬಿಟ್ಟು ಹೊರಟು ಹೋದ್ರಾ ?" ಅನುಮಾನದಿಂದ ಕೇಳಿದ.

"ನಾನು ಒಂದು ಮುಖ್ಯವಾದ ವಿಷಯವನ್ನು ಹೇಳೋಕೆ ಶುರು ಮಾಡಿದೆ... ನಿಮಗೆ ಕೇಳಿಸಿಕೊಳ್ಳುವ ಆಸಕ್ತೀನೇ ಇಲ್ಲ, ಅವಳ ಚಿಂತೆಯೇ ಆಯ್ತು.... ನಿಮ್ಮ ಜೊತೆಯಲ್ಲಿ ಟೂರ್‌ಗೆ ಕರ್‍ಕೊಂಡು ಹೋಗ್ಬೇಕಾಗಿತ್ತು..." ವ್ಯಂಗ್ಯವಾಗಿ ನುಡಿದಳು.

"ಛೀ.....ಇದೆಂಥಾ ತಮಾಷೆ.... ಕಾಣ್ಲಿಲ್ಲವಲ್ಲ ಅದಕ್ಕೇ ಕೇಳ್ದೆ. ಅವಳ ಗಂಡ ಬಂದು ಕರ್‍ಕೊಂಡು ಹೋದ್ನೇನೋ ಅಂತ ಅಂದ್ಕೊಂಡೆ."

"ಅಷ್ಟು ಸುಲಭವಾಗಿ ಅವಳು ಹೋಗೋಳು ಅಲ್ಲರೀ....ನಮ್ಮ ಉಪಕಾರದ ಹೊರೆಯ ಋಣವನ್ನು ತೀರಿಸದೇ ಅವಳು ಎಲ್ಲಿಗೆ ಹೋಗಲು ಸಾಧ್ಯ ! ಋಣಭಾರ ತೀರಿಸ್ಲಿ ಬಿಡಿ"

"ಋಣಭಾರ ! ಅದೇನದು ?"

"ಮೊದಲು ಊಟವನ್ನು ಮಾಡಿ... ನಿಧಾನವಾಗಿ ತಿಳಿಸ್ತೀನಿ."

"ಆಕೇದು , ಅವಳ ಮಗಂದೂ ಊಟ ಆಯ್ತಾ ?"

"ಏನ್ರಿ ನೀವು ?... ನನ್ನ ಊಟ ಆಯ್ತಾ ? ಶರತ್‌ನ ಊಟ ಆಯ್ತಾ ಅಂತ ಪ್ರತಿಸಲ ಕೇಳ್ತಿದ್ರಿ? ... ಈಗ ಅವಳೇ ಹೆಚ್ಚಾದ್ಲಾ ?..."

"ಸುಮ್ಮನೇ ಕೇಳ್ದೆ, ಹೋಗ್ಲಿ ಅದೇನೋ ಮುಖ್ಯವಾದ ವಿಷಯವನ್ನು ಹೇಳ್ತೀನಿ ಅಂತ ಅಂದ್ಯಲ್ಲಾ ....ಹೇಳು... ಪೀಠಿಕೆ ಬೇಡ..."

"ನಮಗೆ ಇನ್ನೊಂದು ಮಗು ಬೇಕು ರೀ..." ಅವನ ಕೈಯಲ್ಲಿದ್ದ ತುತ್ತು ಜಾರಿ ತಟ್ಟೆಯೊಳಕ್ಕೆ ಬಿತ್ತು. "ಯಾಕ್ರೀ ಈಗ ಹೀಗೆ ಗಾಬರಿಯಾಗ್ತೀರಿ.... ಅಂಥಾದ್ದೇನು ಹೇಳ್ದೆ ನಾನು ? ಶರತ್ ಒಂಟಿಯಾಗ್ಬಿಟ್ಟಿದ್ದಾನೆ.... ಅವನಿಗೆ ಹೊತ್ತು ಹೋಗುಲ್ಲ, ಅಳು, ಹಠ, ರಗಳೆ ರಚ್ಚೆ... ಅವನಿಗೊಬ್ಬ ಪುಟ್ಟ ತಂಗಿ ಇದ್ದರೆ ಎಷ್ಟೋ ಚೆನ್ನಾ ಅಲ್ವಾ?..." ಮುದ್ದು ಮುದ್ದಾಗಿ ಕೇಳಿದಳು.

"ತಂಗೀನಾ ! .... ಮತ್ತೊಂದು ಮಗೂನ ದತ್ತು ತಗೋಳ್ಬೇಕಾ ?"

"ದತ್ತು ಮಗು ಬೇಡಾರೀ.... ನಾನೊಂದು ಉಪಾಯಾನಾ ಹುಡುಕಿದೀನಿ..."

"ಆಸ್ಪತ್ರೆಯಿಂದ ಕದ್ದು ತರ್ತೀಯ?..." ಗೇಲಿ ಮಾಡಿದ.

"ಛೀ.... ನಾನ್ಯಾಕೆ ಕಂಡೋರ ಮಕ್ಕಳನ್ನು ಕದ್ದು ತರಲಿ?.... ನಮ್ಮದೇ ಒಂದು ಮಗು. ನಮಗೆ ಹುಟ್ಟುವ ಮಗುವನ್ನು ಮನೆಗೆ ತರ್ತೀನಿ."

"ಅಂದ್ರೇ... ನೀನು ಗರ್ಭಿಣಿಯಾಗಿದೀಯಾ?.... ಈಗ ಹೇಳ್ತಾ ಇದೀಯಲ್ಲ ರಾಜೀ...."

"ಆ ಭಾಗ್ಯ ನನಗೆಲ್ಲಿದೆ ? ಗರ್ಭಿಣಿಯಾಗ್ಬೇಕು ಅಂತಂದ್ರೆ, ಅದೆಂಥದೋ ಆಪರೇಷನ್ ಮಾಡಿಸ್ಕೋಬೇಕಲ್ಲ... ಅದು ಬೇಡಬಿಡಿ.... ನಾನೊಬ್ಬ ಬಾಡಿಗೆ ತಾಯಿಯನ್ನು ಆಯ್ಕೆ ಮಾಡಿಟ್ಟುಕ್ಕೊಂಡಿದೀನಿ. ಅವಳು ನಮಗೋಸ್ಕರ ಒಂದು ಮಗುವನ್ನು ಹೆತ್ತು ಕೊಡ್ತಾಳೆ. ನೀವು ಇದಕ್ಕೆ ಒಪ್ಪಿಕೊಳ್ಳಲೇಬೇಕು...."

"ರಾಜೀ....! ಇದೆಂಥಾ ಹುಡುಗಾಟ. ನನಗೆ ಇದೆಲ್ಲಾ ಸರಿ ಹೋಗುಲ್ಲ , ಯಾವ ಹೆಂಗಸೂ ಬೇಡ. ಇದಕ್ಕೆ ನಾನು ಒಪ್ಪುವುದಿಲ್ಲ "

"ನೀವು ಒಪ್ಪಲೇ ಬೇಕು. ನೀವು ಒಪ್ಪುವವರೆಗೂ ನಾನು ಉಪವಾಸ ಮಾಡ್ತೀನಿ ಅಷ್ಟೇ."

"ಅಲ್ವೇ ರಾಜೀ.... ಯಾರದ್ದೋ ಹೆಂಡ್ತಿ ಮಾಡುವ ಕೆಲಸಾನೇನೇ ಇದು?"

"ಅಂದ್ರೇ.... ನಿಮಗೆ ಯಾರಾದ್ರೂ ನವ ಯೌವ್ವನದ ಹುಡ್ಗಿ ಬೇಕಾ ?...ಅಂಥಾ ಹುಡುಗಿ ಎಲ್ಲಿ ಸಿಗ್ತಾಳೆ?....."

"ಹುಡ್ಗೀನೂ ಬೇಡ, ಹೆಂಗ್ಸೂ ಬೇಡ.... ನಾನು ಯಾರ ಸಹವಾಸವನ್ನೂ, ಒಂದು ಮಗುವಿಗೋಸ್ಕರ ಮಾಡುವುದಿಲ್ಲ. ನಿನ್ನ ಈ ಆಸೆಗೆ ಒಪ್ಪಿ , ನಾನು ನಿನಗೆ ಮೋಸ ಮಾಡುವುದಿಲ್ಲ" ಎನ್ನುತ್ತಾ ತಟ್ಟೆಯಲ್ಲೇ ಕೈ ತೊಳೆದು ಎದ್ದ ಗಂಡ ಅರ್ಧ ಊಟದಲ್ಲೇ ಎದ್ದುದು ಅವಳಿಗೆ ಬೇಸರವನ್ನುಂಟು ಮಾಡಿತ್ತು. ಅವನ ಷರಟನ್ನು ಹಿಡಿದು ಎಳೆದು ನಿಲ್ಲಿಸಿದಳು.

"ನೀವು ನನ್ನ ಮಾತನ್ನು ಸರಿಯಾಗಿ ಅರ್ಥ ಮಾಡಿಕೊಂಡಿದೀರಿ ತಾನೇ...?"

"ಹೂಂ. ಅರ್ಥ ಆಗಿದೆ...." ಕೆಟ್ಟ ನಗೆ ನಕ್ಕ.

"ಯಾಕ್ರೀ ನಿಮಗೆ ಇಂಥ ಕೆಟ್ಟ ತಮಾಷೆ.... ನಾನು, ನೀವು ಯಾವ ಹೆಂಗಸಿನ ಸಹವಾಸವನ್ನು ಮಾಡಿ ಅಂತ ಹೇಳಲಿಲ್ಲ. ನಮಗೆ ಒಂದು ಮಗು ಬೇಕು ಅಂತ ಹೇಳ್ದೆ."

"ಒಗಟೊಗಟಾಗಿ ಮಾತಾಡ್ಬೇಡ ರಾಜೀ... ಮತ್ತೆ ಮಗು ಎಲ್ಲಿಂದ ಉದುರುತ್ತೆ?"

"ನಾನು ಸರಿಯಾಗಿ ಹೇಳ್ತೀನಿ. ಕೂತ್ಕೊಳ್ಳಿ...." ಎಂದು ಅವನನ್ನು ಮತ್ತೆ ಕೂರಿಸಿದಳು. ನಾನು ಡಾಕ್ಟರರ ಹತ್ತಿರ ಹೋಗಿ ಮಾತನಾಡಿಕೊಂಡು ಬಂದಿದೀನಿ... ಪ್ರನಾಳ ಶಿಶುಗಳ ವಿಷಯ ನಿಮಗೆ ಗೊತ್ತಿದೆಯಲ್ಲ... ನನ್ನ, ನಿಮ್ಮ ಒಂದು ಮಗುವನ್ನು ಪ್ರಯೋಗಾಲಯದಲ್ಲಿ ಕೃತಕವಾಗಿ ಸೃಷ್ಟಿಮಾಡಿ, ಅದನ್ನು ಬಾಡಿಯ ಗರ್ಭದಲ್ಲಿ ತಾಯಿ ಬೆಳೆಸಿ, ಹೆರುವಂತೆ ಮಾಡ್ತಾರಂತೆ. ...

ಮಗು ನಮ್ಮಿಬ್ಬರದೇ ... ಆದರೆ ಹೆರುವ ತಾಯಿ ಮಾತ್ರ ಬೇರೆ....'' ಅವನು ಪಿಳಿ ಪಿಳಿ ಕಣ್ಣುಗಳನ್ನು ಬಿಟ್ಟ.

''ಈ ಆಸೆ ನಿನಗ್ಯಾಕೆ ಬಂತು !.... ಇದಕ್ಕೆಲ್ಲ ಖರ್ಚು ಸಿಕ್ಕಾಬಟ್ಟೆ ಆಗುತ್ತೆ.''

''ಮುಂಚೇನೇ ಈ ಉಪಾಯ ಹೊಳೆದಿದ್ರೆ , ಶರತ್‌ನ ದತ್ತು ತೆಗೆದುಕೊಳ್ಳುವ ಗೋಜೇ ಇರ್ತಿಲ್ಲ...''

''ಬಾಡಿಗೆ ತಾಯಿಗೆ ಹಣ ಕೊಡ್ಬೇಕಾಗುತ್ತೆ ರಾಜೀ.... ಕಾನೂನಿನ ಸಲಹೆಯನ್ನು ಪಡೆಯಬೇಕಾಗುತ್ತೆ. ಯಾವುದೂ ಸುಲಭವಲ್ಲ...''

''ಕಷ್ಟವೇನೂ ಇಲ್ಲ, ಎಲ್ಲಾ ಸುಲಭದಲ್ಲಿ ಆಗುವಂಥ ಬಾಡಿಗೆ ತಾಯಿಯನ್ನೇ ಹುಡುಕಿದೀನಿ.... ಅವಳ್ಯಾರು ಗೊತ್ತಾ ?.... ಮಂದಾಕಿನಿ !....'' ಖುಷಿಯಿಂದ ಹೇಳಿದಳು. ಅವನು ಆಂ ! ಎಂದು ಬಾಯಿತೆರೆದು ಅವಳನ್ನೇ ನೋಡಿದ.

''ಯಾಕ್ರೀ ನಿಮಗೆ ಇಷ್ಟವಾಗ್ಲಿಲ್ವಾ !.... ಅವಳು, ನೀವು ಕರೆದುಕೊಂಡು ಬಂದ ಅಸಹಾಯಕ ಹೆಂಗ್ಸೇ ....'' ವ್ಯಂಗ್ಯವೂ ಸೇರಿಕೊಂಡಿತ್ತು.

''ನೀನು ಈ ರೀತಿ ನನಗೆ ಅವಮಾನ ಮಾಡ್ತೀಯ ಅಂತ ನಾನಂದುಕೊಂಡಿರ್ಲಿಲ್ಲ.''

''ಅಯ್ಯೋ ರಾಮಾ ! ಇದರಲ್ಲಿ ಅವಮಾನ ಏನುಂಟು ! .... ನಾವು ಅವಳಿಗೆ ಆಶ್ರಯವನ್ನು ಕೊಟ್ಟಿದೀವಿ. ಸಹಾಯ ಮಾಡಿದೀವಿ... ಬದಲಿಗೆ ನಮಗೆ ಸಹಾಯ ಮಾಡ್ತಾಳೆ ಅಷ್ಟೇ....''

''ಬೇಡ ರಾಜೀ.... ಹತ್ತು ಹನ್ನೆರಡು ತಿಂಗಳುಗಳು ಅವಳು ಮ್ಮ ಜೊತೆಗೆ ಇರ್ಬೇಕಾಗುತ್ತೆ. ಮಧ್ಯದಲ್ಲಿ ಅವಳ ಗಂಡ ಬಂದು ಗಲಾಟೆ ಮಾಡಿದರೆ ?....''

''ಅವನೆಲ್ಲಿ ಬರ್ತಾನೆ ! ಬಿಟ್ಟು ಹೋದ್ನಲ್ಲ... ನೀವು ಹೂಂ ಅನ್ನಿ. ಹತ್ತು ತಿಂಗಳು ಕಳೆಯುವುದು ಕಷ್ಟವಲ್ಲ... ನಾವು ನಾಳೇನೇ ಡಾಕ್ಟರ ಹತ್ರ ಹೋಗಿ ಬರೋಣ...''

''ಮೊದಲು ಆ ಹೆಂಗಸಿನ ಹತ್ರ ಮಾತ್ನಾಡು. ಅವಳೆಲ್ಲಿ ಅಂತ ಈಗ್ಲಾದ್ರೂ ಹೇಳು.'' ಯಶವಂತ ಅವಳ ಒತ್ತಾಯಕ್ಕೆ ಮಣಿದು ಹೇಳಿದ.

''ಅವಳು ಸುಜಯನ ಜತೇಲಿದಾಳೆ....'' ಎಂದು ಹೇಳಿ, ತನಗೆ ತಿಳಿದ ಸುಜಯಳ ವಿಷಯಗಳನ್ನು ಗಂಡನಿಗೆ ತಿಳಿಸಿದಳು.

ಒಂದು ದಿನ ಸಮಯ ನೋಡಿ, ಮಂದಾಕಿನಿಯನ್ನ ತನ್ನ ಮನೆಗೆ ಕರೆಸಿದಳು. ''ಸುಜಯಳಿಗೆ ಹೆರಿಗೆ ಆದ್ಮೇಲೆ ಮಗುವನ್ನು ನಿಜವಾದ ತಂದೆ ತಾಯಿಗಳಿಗೆ ಒಪ್ಪಿಸಿ ಕೊಟ್ಟು ಇಲ್ಲಿಂದ ಹೊರಟು ಹೋಗ್ತಾಳೆ. ಆಮೇಲೆ ಏನ್ಮಾಡ್ತೀರಿ ?'' ರಾಜಲಕ್ಷ್ಮಿ ಕೇಳಿದಳು.

ಮಂದಾಕಿನಿ ತಬ್ಬಿಬ್ಬಾದಳು. ಮಂಕುತನ ಮುಖದಲ್ಲಿ ಕವಿಯಿತು. ''ಅಯ್ಯೋ ಯಾಕೆ ಗಾಬರಿಯಾಗ್ತೀರಿ ?... ನಿಮಗೆ ಒಂದು ಕೆಲಸವನ್ನು ಕೊಡಿಸೋಣಾಂತೆ'' ಆಹ್ವಾನ ನೀಡಿದಳು.

''ನನ್ನ ಮಗನ ಭವಿಷ್ಯದ್ದೇ ನನಗೆ ಚಿಂತೆ. ನೀವು ಅವನನ್ನು ಸಾಕಿ ಕೊಳ್ತೀರಾ ಅಕ್ಕಾ

? ನನ್ನದು ಹೇಗೋ ಆಗುತ್ತೆ. ಆದರೆ ಇವನ ಗತಿ ? '' ಕಣ್ಣುಗಳು ನೀರಾಡಿದವು.

''ಛಿ..... ಹಾಗ್ಯಾಕೆ ಯೋಚಿಸ್ತೀರಿ ! ತಿಳಿದೂ ತಿಳಿದೂ ನಾವು ನಿಮ್ಮ ಕೈ ಬಿಡ್ತೀವಾ?.... ನಿಮ್ಮ ಮಗನನ್ನ ನೀವೇ ಚೆನ್ನಾಗಿ ಓದಿಸೋರಂತೆ. ಚಿಂತೆ ಮಾಡ್ಬೇಡಿ.''

''ಚಿಂತೆ ಆಗ್ದೆ ಇರುತ್ತಾ ಅಕ್ಕಾ ! ನಾನು ಹೆಚ್ಚಿಗೆ ಓದಿಲ್ಲ... ನಾನು ಯಾವ ಆಫೀಸ್ನಲ್ಲೂ ಕೆಲಸ ಮಾಡುಕ್ಕೆ ಆಗುಲ್ಲ.. ಅಲ್ಲದೇ ಭಯವೂ ಆಗುತ್ತೆ... ನಾನು ಒಂಟಿ ಹೆಂಗಸು ಅಂತ ತಿಳಿದ್ರೆ ಯಾರು ನನಗೆ ಹೇಗೆ ಮೋಸ ಮಾಡ್ತಾರೋ ? ಎಲ್ಲರೂ ನಿಮ್ಮ ಯಜಮಾನರಂತೆ ಒಳ್ಳೆಯರಾಗಿರ್ತಾರಾ ?..''

''ಹೌದು ನಮ್ಮವರು ತುಂಬಾ ಒ ಳ್ಳೆಯವರು. ನನ್ನನ್ನಲ್ಲದೇ ಬೇರೆ ಯಾವ ಹೆಂಗಸಿನ ಬಗ್ಗೆ ಕನಸ್ಸಿನಲ್ಲೂ ಯೋಚಿಸುಲ್ಲ... ನನ್ನನ್ನು ಅಷ್ಟೇ ಪ್ರೀತಿಸ್ತಾರೆ. ಆದರೆ ಅವರ ಪ್ರೀತಿಗೆ ತಕ್ಕ ಕಾಣಿಕೆಯನ್ನು ನಾನು ಕೊಡಲಿಲ್ಲ.... ನಮ್ಮಿಬ್ಬರ ಪ್ರೀತಿಯ ಕುರುಉಹಾಗಿ ನನಗೆ ಒಂದು ಮಗು ಹುಟ್ಟಲಿಲ್ಲ ನನಗೆ ಅದೇ ಕೊರಗು....''

''ಪಾಲಿಗೆ ಬಂದದ್ದು ಪಂಚಾಮೃತ. ಅನೀ ನಿಮ್ಮ ಮಗ ಅಂತ ಸಾಕ್ತಾ ಇದೀರಲ್ಲ, ಒಬ್ಬ ಅನಾಥನಿಗೆ ತಂದೆ ತಾಯಿಯಾಗಿದೀರಿ. ಇದಕ್ಕಿಂತ ಪುಣ್ಯದ ಕೆಲಸ ಬೇಕಾ ?''

''ಆದರೂ, ನಮ್ಮದೇ ಅಂತ ಒಂದು ಮಗು ಇದ್ದಿದ್ದರೆ ಅಂತ ಮನಸ್ಸು ಸದಾ ಬಯಸುತ್ತೆ ಮಂದಾಕಿನಿ. ಸುಜಯಾಳ ತರಹ ಒಬ್ಬ ಬಾಡಿಗೆ ತಾಯಿ ಸಿಗ್ತಾಳೆ ಅಂತ ಗೊತ್ತಿದ್ದಿದ್ರೆ ಆಗಲೇ ಯೋಚಿಸಬಹುದಾಗಿತ್ತು. ಸುಜಯನ್ನ ಕಂಡಾಗಿನಿಂದ ನನ್ನ ಆಸೆ ಮತ್ತೆ ಕೆರಳಿದೆ. ನಮ್ಮದೇ ಆದ ಒಂದು ಹೆಣ್ಣು ಮಗು ಇದ್ದರೇ ಅಂತ ಹಂಬಲವಾಗುತ್ತೆ...''

''ಡಾಕ್ಟರ ಹತ್ರ ಹೋಗ್ಬನ್ನಿ ಅಕ್ಕಾ. ಕೆಲವರಿಗೆ ತಡವಾಗಿ ಮಗು ಹುಟ್ಟುತ್ತೆ.''

''ಇಲ್ಲ ಮಂದಾಕಿನಿ.... ನನ್ನ ಗರ್ಭಕೋಶದಲ್ಲಿ ತೊಂದರೆ ಇದೆ. ಮಗುವನ್ನು ಹೊರುವ, ಹೆರುವ ಚೈತನ್ಯ ಇಲ್ಲ, ದೇವರು ನನ್ನನ್ನು ಹೆಣ್ಣಾಗಿ ಹುಟ್ಟಿಸಿದ. ಆದರೆ ತಾಯಿ ಯಾಗುವ ಭಾಗ್ಯವನ್ನು ಕೊಡಲಿಲ್ಲ....''

''ನಿಮ್ಮ ಯಜಮಾನ್ರು ಏನಂತಾರೆ ? ಅವರಿಗೂ ಆಸೆ ಇದೆಯಾ ?...''

''ಆಸೆ ಇಲ್ಲದೇ ಇರುತ್ತಾ !... ಆದರೆ ನನಗೆ ನೋವಾಗುತ್ತೆ ಅಂತ ಒಂದು ದಿನವೂ ಬೇಸರವಾಗುವಂತೆ ಮಾತನ್ನಾಡಿಲ್ಲ, ಈಗಲೂ ಕಾಲ ಮಿಂಚಿಲ್ಲ, ನಮಗಿಬ್ಬರಿಗೂ ಯೌವನವಿದೆ. ನಮ್ಮ ಮಗುವನ್ನು ಹೆತ್ತು ಕೊಡುವ ಒಬ್ಬ ಬಾಡಿಗೆ ತಾಯಿ ಬೇಕಾಗಿದಾಳೆ. ಮಂದಾಕಿನಿಯ ಕಡೆ ನೇರವಾಗಿ ನೋಡಲು ಅನುಮಾನಿಸಿದಳು. ಆದರೂ ಓರೆಗಣ್ಣಿನಿಂದ ನೋಡಿದಳು.''

''ಸುಜಯನ್ನೇ ಕೇಳಿ ನೋಡಿ. ಒಪ್ಪಬಹುದು....''

''ಸುಜಯ ಬೇಡ. ಅವಳು ಆರು ತಿಂಗಳ ತನಕ ಮಗುವಿಗೆ ಹಾಲನ್ನು ಕುಡಿಸಬೇಕಾಗುತ್ತೆ. ಅಲ್ಲದೇ ನನ್ನ ಸ್ನೇಹಿತೆಯರಿಗೆಲ್ಲಾ ತಿಳಿದು ಬಿಡುತ್ತದೆ. ಅದು ನನಗೆ ಇಷ್ಟವಿಲ್ಲ, ಈ ವಿಷಯ ರಹಸ್ಯವಾಗಿರಬೇಕು.''

"ಯಾಕೆ ? ಗೊತ್ತಾದರೆ ಏನೀಗ ?"

"ಇಲ್ಲ ಮಂದಾಕಿನಿ... ಎಲ್ಲರಿಗೂ ತಿಳಿಯುವುದು ಬೇಡ.... ಈ ವಿಷಯವನ್ನು ಗುಟ್ಟಾಗಿಡುವಂಥ ಬಾಡಿಗೆ ತಾಯಿ ಬೇಕು... ನೀವು ಒಪ್ಪುವುದಾದರೇ.... ಹೇಳಿ."

"ಅಕ್ಕಾ.... ಏನು ಹೇಳ್ತಿದೀರಿ ನೀವು?...." ಕಣ್ಣುಗಳನ್ನರಳಿಸಿದಳು.

"ಹೌದು ಮಂದಾಕಿನಿ. ನೀವು ಒಪ್ಪಿ ನಮಗೆ ಸಹಾಯ ಮಾಡುವುದಾದರೆ, ನಾನು ನಿಮ್ಮಿಬ್ಬರಿಗೂ ಆಶ್ರಯ ಕೊಡ್ತೀನಿ. ತಕ್ಕಷ್ಟು ಹಣವನ್ನೂ ಕೊಡ್ತೀನಿ...."

"ಇಕ್ಕಟ್ಟಿಗೆ ಸಿಕ್ಕಿಸ್ತಾ ಇದೀರಲ್ಲ ಅಕ್ಕಾ... ನಾನೇನು ಹೇಳಲಿ "

" ನಾನು ಬಲವಂತ ಮಾಡುವುದಿಲ್ಲ .... ನಿಮ್ಮಿಷ್ಟ...ಆದರೆ ನಾನು ಬೇರೆ ಯಾವ ಹೆಂಗಸನ್ನೂ ಹುಡಕುವುದಿಲ್ಲ, ನನ್ನ ಆಸೆ ಹಾಗೇ ಉಳಿದು ಬಿಡುತ್ತದೆ..."

"ನನಗೆ ಯೋಚಿಸುಕ್ಕೆ ಸ್ವಲ್ಪ ಸಮಯಬೇಕು..."

"ಸರಿ. ಒಂದೆರಡು ದಿನಗಳಲ್ಲಿ ನಿಮ್ಮ ನಿರ್ಧಾರವನ್ನು ತಿಳಿಸಿ. ಆದರೆ ಬೇರೆ ಯಾರ ಸಲಹೆಯನ್ನು ಕೇಳ್ಬೇಡಿ... ನಮ್ಮಿಬ್ಬರ ನಡುವೆ ಮಾತ್ರ ಈ ವಿಷಯವಿರಬೇಕು." ಮಂದಾಕಿನಿ ಏನೂ ತೋಚದವಳಂತೆ ಸುಮ್ಮನೆ ಕುಳಿತು ಬಿಟ್ಟಳು. ರಾಜಲಕ್ಷ್ಮಿ ಎದ್ದುಹೋಗಿ, ತಿಂಡಿಕಾಫಿಯನ್ನು ತಂದಿತ್ತಳು. ಚಿದಾನಂದನಿಗೆ ಕುಡಿಯಲು ಹಾಲನ್ನು ಕೊಟ್ಟಳು. ಸ್ವಲ್ಪ ಹೊತ್ತಿನ ನಂತರ ಮಂದಾಕಿನಿ ಹೊರಟು ಬಿಟ್ಟಳು.

* * *

ಮಂದಾಕಿನಿ ಈ ಯೋಜನೆಗೆ ಒಪ್ಪಿಕೊಂಡಳು. ರಾಜಲಕ್ಷ್ಮಿ ಸಂತಸದಿಂದ ಅವಳ ಕೈಯನ್ನು ಹಿಡಿದುಕೊಂಡಳು. "ನೀವು ಎಲ್ಲಿ ಒಪ್ಪುವುದಿಲ್ಲವೋ ಅಂತ ಆತಂಕವಾಗಿತ್ತು. ನಿಮಗೆ ಎಷ್ಟು ಥ್ಯಾಂಕ್ಸ್ ಹೇಳಿದರೂ ಸಾಲದು" ಎಂದಳು.

"ನಿಮ್ಮ ಸಹಾಯದ ಋಣ ನನ್ನ ಮೇಲಿದೆ ಅಕ್ಕ.... ಈಗ ಅದನ್ನು ತೀರಿಸಲು ಒಂದು ಅವಕಾಶ ಸಿಕ್ಕಿದೆ. ನನ್ನ ಮಗನನ್ನು ಓದಿಸಿ ವಿದ್ಯಾವಂತನನ್ನಾಗಿ ಮಾಡಿ, ನನಗೆ ಅಷ್ಟು ಸಾಕು...." ಅವಳು ಇವಳ ಕೈಗಳನ್ನು ಕಣ್ಣಿಗೆ ಒತ್ತಿಕೊಂಡಳು.

"ಸರಿ.. ಇವತ್ತೇ ಡಾಕ್ಟರ ಹತ್ತಿರ ಹೋಗೋಣ... ಅವರಿಗೆ ನಿಮ್ಮನ್ನು ಪರಿಚಯ ಮಾಡಿಕೊಡ್ತೀನಿ. ಆಮೇಲೆ ಮುಂದಿನ ವಿಚಾರ. ಸುಜಯ ಕೇಳಿದ್ರೆ ಏನು ಹೇಳ್ತೀರಿ ?"

"ನಾನು ಈಗ ಗರ್ಭಿಣಿಯಾಗಿದೀನಿ ಅಂತ ಹೇಳ್ತೀನಿ..." ಸಪ್ಪಗೆ ನಕ್ಕಳು.

"ಹಾಗೇ ಮಾಡಿ. ಆದಷ್ಟು ಬೇಗ ಇಲ್ಲಿಗೇ ಬಂದು ಬಿಡಿ. ನೀವು ರೆಸ್ಟ್‌ನಲ್ಲಿರ ಬೇಕಾಗುತ್ತೋ ಏನೋ. ಡಾಕ್ಟರು ಏನು ಹೇಳ್ತಾರೆ ನೋಡ್ಣೋಣ" ರಾಜಲಕ್ಷ್ಮಿ ಮತ್ತೊಮ್ಮೆ ಸಂತಸದಿಂದ ಕೈಗಳನ್ನು ಅದುಮಿದಳು.

* * *

ಡಾಕ್ಟರ್ ಶೈಲಜಾ ಮಂದಾಕಿನಿಯ ಪೂರ್ವೋತ್ತರಗಳನ್ನೆಲ್ಲ ವಿಚಾರಿಸಿದಳು. ಮಾಡಬೇಕಾದ ಪರೀಕ್ಷೆಗಳನ್ನೆಲ್ಲ ಮಾಡಿಸಿದಳು. " ಮುಖ್ಯವಾಗಿ ಬ್ಲಡ್ ಟೆಸ್ಟ್ ಮಾಡಬೇಕು. ಒಂದೆರಡು ದಿನಗಳಲ್ಲಿ ರಿಪೋರ್ಟ್ ಬರುತ್ತೆ. ಆಮೇಲೆ ಮುಂದೆ ಏನು ಮಾಡ್ಬೇಕು ಅಂತ ಹೇಳ್ತೀನಿ" ಅಂತಂದಳು.

"ಡಾಕ್ಟರ್, ನಾನು ಈಗಾಗ್ಲೇ ಒಂದು ಮಗುವಿನ ತಾಯಿಯಾಗಿದೀನಿ. ಆದರೆ ಗಂಡ ಈಗ ನನ್ನೊಂದಿಗಿಲ್ಲ, ಏನೂ ತೊಂದರೆ ಆಗುಲ್ಲ ತಾನೇ... "

"ನಿಮ್ಮ ಗಂಡನಿಗೆ ನಿಜ ಹೇಳುವ ಧೈರ್ಯ ನಿಮಗಿದೆಯಾ?"

"ನಿಜ ಹೇಳಿದ್ರೆ ಅವರು ನಂಬುಲ್ಲ. ನಾನು ಗಂಡಸಿನ ಸಹವಾಸ ಮಾಡಿರಬಹುದು ಅಂತ ಅನ್ನಿಸದೇ ಇರುತ್ತಾ ? "

"ಅವರನ್ನು ನನ್ನ ಬಳಿಗೆ ಕರ್ಕೊಂಡು ಬನ್ನಿ. ನಾನು ಅವರಿಗೆ ಎಲ್ಲವನ್ನೂ ವಿವರವಾಗಿ ಹೇಳ್ತೀನಿ. .,.. ಒಂದ್ಮಾತು, ನಿಮಗೆ ಬೇರೆ ಯಾರಾದ್ರೂ ಗಂಡಸಿನ ಸಹವಾಸ ಇದೆಯಾ? ಇದ್ದರೆ ಈಗಲೇ ಹೇಳ್ಬಿಡಿ...." ಯಶವಂತ ಎಂದಾದ್ರೂ ನಿಮ್ಮ ಬಳಿಗೆ ಬಂದಿದ್ರಾ!... ನೀವು ಅವರ ಆಶ್ರಯದಲ್ಲೇ ಇದೀರಂತೆ...

"ಛೇ, ಛೇ, ಅವರು ತುಂಬಾ ಒಳ್ಳೆಯವರು... ಎಂದೂ ನನ್ನನ್ನು ಆ ದೃಷ್ಟಿಯಿಂದ ನೋಡೇ ಇಲ್ಲ, ಅವರು ಅವರ ಹೆಂಡತೀನ ತುಂಬಾ ಪ್ರೀತಿಸ್ತಾರೆ... ರಾಜಲಕ್ಷ್ಮಿಯವರು ಬಾಡಿಗೆ ತಾಯಿ ಆಗ್ತೀರಾ ಅಂತ ಕೇಳ್ದಾಗ ನಾನು ಹೆದರಿದ್ದೆ... ಒಂದ್ವೇಳೆ , ಒಂದು ಮಗುವಿನ ಆಸೆಗೆ, ತನ್ನ ಗಂಡನ್ನು ನನ್ನ ಬಳಿಗೆ ಕಳಿಸ್ತಿದಾರೇನೋ ಅಂತ..."

"ಛೀ.... ಯಾರಾದ್ರೂ ಪತ್ನಿ ಗಂಡನನ್ನು ಇನ್ನೊಬ್ಬ ಹೆಂಗಸಿನ ಬಳಿಗೆ ತಾನಾಗಿಯೇ ಕಳಿಸ್ತಾರಾ! ಈಗಂತೂ, ಕೃತಕ ವಿಧಾನದಿಂದ ಗರ್ಭಧರಿಸುವ ಹಲವು ಸಾಧನಗಳಿವೆ. ಪ್ರಯೋಗ ಶಾಲೆಯಲ್ಲಿ, ಯಶವಂತನವರ ವೀರ್ಯಾಣುಗಳನ್ನು, ರಾಜಲಕ್ಷ್ಮಿಯವರ ಅಂಡಾಣುವಿನೊಂದಿಗೆ ಸಂಯೋಜಿಸಿ, ಭ್ರೂಣಾವಸ್ಥೆಗೆ ಬರಿಸಿ, ಅದನ್ನು ನಿಮ್ಮ ಗರ್ಭಕೋಶಕ್ಕೆ ಇಳಿಸುತ್ತೇವೆ. ಅದನ್ನು ನಿಮ್ಮ ಗರ್ಭ ಒಪ್ಪಿಕೊಂಡು, ಶಿಶುವನ್ನಾಗಿ ಬೆಳೆಸಲು ಸಹಾಯವಾಗಬೇಕು ಅಷ್ಟೇ.... ಅದಕ್ಕೇ ಈ ಪರೀಕ್ಷೆಗಳು, ಮೇಲು ನೋಟಕ್ಕೆ ನೀವು ಆರೋಗ್ಯವಂತ ಮಹಿಳೆಯಾಗಿ ಕಾಣ್ತೀರಿ. ಎಲ್ಲಾ ಸರಿಯಾಗಿದೆ ಅಂತ ಪರೀಕ್ಷಿಸಿಯೇ ಮುಂದಿನ ಪ್ರಯೋಗವನ್ನು ನಡೆಸ್ತೀವಿ. ಯಾಕೆ ಏನಾದ್ರೂ, ಸಮಸ್ಯೇನಾ ?... ನಿಮಗೆಷ್ಟು ಹಣ ಬೇಕು ಅಂತ ಕೇಳಿ, ಮೊದಲೇ ಮಾತನಾಡಿಕೊಳ್ಳಿ...."

"ಹಣ ಅವರು ಎಷ್ಟು ಕೊಡ್ತಾರೋ ಅಷ್ಟು ಸಾಕು... ಸಧ್ಯಕ್ಕೆ ನನಗೆ ಆಶ್ರಯವನ್ನು ಕೊಟ್ಟಿದಾರೆ..... ನನ್ನ ಮಗನ ವಿದ್ಯಾಭ್ಯಾಸಕ್ಕೆ ಸಹಾಯ ಮಾಡ್ತೀನಿ ಅಂತ ಅಂದಿದಾರೆ. ನನಗೆ ಅಷ್ಟೆ ಸಾಕು..."

"ಹಾಗಾದ್ರೆ ತೊಂದರೆ ಏನು?"

"ಒಂದು ವೇಳೆ ಹೆರಿಗೆಯಾದ್ಮೇಲೆ, ಮಗು ಬೇಡ ಅಂತ ಹೇಳಿದರೇ...?"

"ಹಾಗೆಲ್ಲ ಅವರು ಮಾಡುವಂತೆಯೇ ಇಲ್ಲ... ಒಬ್ಬ ಲಾಯರ್ರ ಮುಖಾಂತರ ಕಾನೂನು

ಬದ್ಧವಾಗಿ ಒಪ್ಪಂದ ಮಾಡಿಕೊಳ್ಳಿ.... ಮುಂದೆ ಯಾವ ತೊಂದರೆಯೂ ಆಗುವುದಿಲ್ಲ."

"ಒಂದು ವೇಳೆ, ನಾನು ಹೊತ್ತು, ಹೆರುವ ಮಗು ನನಗೇ ಬೇಕು ನನಗೆ ಅಂತ ಅನ್ನಿಸಿದರೆ?"

"ಹಾಗೆ ಅನ್ನುವಂತೆಯೇ ಇಲ್ಲ.... ನೀವು ಮೋಹವನ್ನು ಬೆಳೆಸ್ಕೋಬೇಡಿ."

"ಅದ್ಹೇಗೆ ಆಗುತ್ತೆ ಡಾಕ್ಟ್ರೇ.... ನನ್ನ ಒಡಲೊಳಗೆ ಬೆಳೆಯುವ ಶಿಶುವಿಗೆ ನಾನು ಪೋಷಕಿಯಾಗ್ತೀನಿ... ಮಗು ಮಿಸುಕಾಡುವಾಗ ನನ್ನ ಮೈ ಪುಳಕಗೊಳ್ಳುತ್ತೆ.... ಹೆರಿಗೆ ನೋವನ್ನು ಅನುಭವಿಸುವವಳು ನಾನು.... ಎದೆಯ ಹಾಲನ್ನು ಕುಡಿಸುವವಳು ನಾನು..."

"ನೀವು ಹೀಗೆಲ್ಲಾ ಹಚ್ಚಿಕೊಂಡರೆ ಬಾಡಿಗೆ ತಾಯಿಯ ಕೆಲಸವನ್ನು ನಿರ್ವಹಿಸಲು ಕಷ್ಟವಾಗುತ್ತೆ. ನೀವು ಇರುವ ಬಾಡಿಗೆ ಮನೆಯನ್ನು ನೀವು ನಿಮ್ಮ ಸ್ವಂತ ಮನೆ ಅಂತ ತಿಳ್ಕೊಳ್ಳೋಕೆ ಸಾಧ್ಯನಾ ! ಹಾಗೆ ಅಂತ ಭಾವಿಸ್ಕೊಳ್ಳಿ."

"ಅಷ್ಟೇ ಅಂತ ಅಂತೀರಾ ?"

"ಹೂಂ . ಅಷ್ಟೇ... ಎಷ್ಟೋ ಜನ ಬಾಡಿಗೆ ತಾಯಂದಿರು ನನ್ನೊಡನೆ ಮಾತನ್ನಾಡಿದಾರೆ, ಆದರೆ ಯಾರೂ ಈ ತರಹದ ಪ್ರಶ್ನೆಗಳನ್ನು ಕೇಳಿರಲಿಲ್ಲ. ಸುಮ್ಮನೆ ಹೆಚ್ಚು ತಲೆ ಕೆಡಿಸ್ಕೋಬೇಡಿ... ಹೀಗೆಲ್ಲಾ ಯೋಚಿಸಿದರೆ, ಈ ಕೆಲಸ ಕಷ್ಟವಾಗುತ್ತೆ. ಮೊದಲೇ ಎಲ್ಲವನ್ನೂ ಇತ್ಯರ್ಥ ಮಾಡಿಕೊಳ್ಳಿ.... ಈ ತಿಕ್ಕಾಟವೆಲ್ಲಾ ನನಗೆ ಬೇಡ. ನನ್ನ ಕೆಲಸ ಏನಿದ್ರೂ .... ಮಗುವನ್ನು ನಿಮ್ಮ ಗರ್ಭಕೋಶದೊಳಗೆ ಬೆಳೆಸುವುದು... ಅರ್ಥ ಆಯ್ತಲ್ಲ."

"ಹೂಂ ಅರ್ಥ ಆಯ್ತು ಡಾಕ್ಟ್ರೇ.... ಬೇಸರ ಮಾಡಿದ್ರೆ ಕ್ಷಮಿಸಿ."

"ಪರವಾಗಿಲ್ಲ.... ಆದರೆ ಈ ತರಹದ ಮಾತುಗಳಿಗೆ ನನ್ನ ಹತ್ರ ಅವಕಾಶವಿಲ್ಲ. ನನಗೆ ಸಮಯವೂ ಇಲ್ಲ .. ನೀವಿನ್ನು ಹೊರಡಬಹುದು."

ಮಂದಾಕಿನಿ ಅವರಿಗೆ ಕೈ ಮುಗಿದು ಹೊರಬಂದಳು. ಅವಳಿಗೆ ಸಮಾಧಾನವಾಗಿರಲಿಲ್ಲ, ಮನಸ್ಸು ಇಬ್ಬಗೆಯಲ್ಲಿತ್ತು. ಯವುದೋ ಆಲೋಚನೆಯಲ್ಲಿರುವವಳಂತೆ, ಮೌನ ವಾಗಿದ್ದವಳನ್ನು ರಾಜಲಕ್ಷ್ಮಿ ಪ್ರಶ್ನಿಸಿದಳು.

"ಏನಂದ್ರು ಡಾಕ್ಟರು ? ಎಲ್ಲ ಸರಿಯಾಗಿದೆಯಂತಾ ? "

"ಏನೋ ಗೊತ್ತಿಲ್ಲ. ರಿಪೋರ್ಟ್ಸ್‌ಗಳು ಬಂದ ನಂತರ ಮತ್ತೆ ಬನ್ನಿ ಅಂತಂದ್ರು."

"ಮಂದಾಕಿನಿ, ನಿಮ್ಮ ಈ ಉಪಕಾರವನ್ನು ನಾನು ಈ ಜನ್ಮದಲ್ಲಿ ಮರೆಯಲ್ಲ. ನಮ್ಮ ಯಜಮಾನರು ತುಂಬಾ ಒಳ್ಳೆಯವರು. ಅವರ ರೂಪವನ್ನು ಗುಣವನ್ನು ಹೋಲುವ ಮಗುವೊಂದು ಬೇಕು ಅಂತ ಆಸೆ.... ನಮ್ಮ ರಕ್ತಮಾಂಸವನ್ನು ಹಂಚಿಕೊಂಡು ಹುಟ್ಟುವ ಮಕ್ಕಳು, ನಮ್ಮವರಾಗ್ತಾರೆ... ಹೊರಗಿನವರು ಹೊರಗಿನವರೇ..." ಮಂದಾಕಿನಿ ಅವಳ ಮಾತಿಗೆ ಮರುಮಾತಾಡಲಿಲ್ಲ.

ತನ್ನ ಗಂಡ ತನ್ನೊಂದಿಗೆ ಇದ್ದು , ತಾನು ಮತ್ತೊಂದು ಮಗುವಿಗೆ ತಾಯಿಯಾಗಿದ್ದರೆ

ಆ ಮಾತೇ ಬೇರೆಯಾಗುತ್ತಿತ್ತು. ಈಗ ಅವನಿಗೆ ತಿಳಿದರೆ ಏನನ್ನುವನೋ ಅನ್ನುವ ಸಂಶಯವೂ ಕಾಡಿತು. ಒಂದು ದಿನ ಅವಳ ಹೆಸರಿಗೆ ಬಂದ ಒಂದು ಪತ್ರವನ್ನು ಯಶವಂತ ತಂದುಕೊಟ್ಟ. ಅದರಲ್ಲಿ ಅವಳ ಗಂಡನನ್ನು ಪೋಲಿಸರು ಅರೆಸ್ಟ್ ಮಾಡಿರುವುದಾಗಿಯೂ, ಒಂದು ವರ್ಷದ ಶಿಕ್ಷೆಯನ್ನು ಅನುಭವಿಸಬೇಕಾಗಿದೆಯೆಂದು ಬರೆದಿತ್ತು. ಕಾಗದವನ್ನು ಓದಿ ಬೇಸರಗೊಂಡಳು. ಅದನ್ನು ಯಾರು ಬರೆದಿದ್ದಾರೆಂದು ತಿಳಿಯಲಿಲ್ಲ, ಯಾವ ಜೈಲಿನಲ್ಲಿದಾನೆಂದು ತಿಳಿಯುವಂತೆಯೂ ಇರಲಿಲ್ಲ. ಆದರೆ ತನ್ನ ಗಂಡ ಬಿಡುಗಡೆಯಾದ ಮೇಲೆ ತನ್ನನ್ನು ಹುಡುಕಿಕೊಂಡು ಬರುತ್ತಾನೆಂದು ತಿಳಿದಿತ್ತು. ಅದರಿಂದ ಸಂತೋಷವೂ ಆಗಲಿಲ್ಲ ವ್ಯಥೆಯೂ ಆಗಲಿಲ್ಲ. ರಾಜಲಕ್ಷ್ಮಿ ಕೆದಕಿ ಕೇಳಿದಾಗ, ವಿಷಯವನ್ನು ತಿಳಿಸಿದಳು.

"ಒಳ್ಳೇದೇ ಆಯ್ತು ಬಿಡಿ. ಒಂದು ವರ್ಷ ಸಮಯವಿರುತ್ತೆ. ನಿಮಗೆ ಯಾವ ಆಕ್ಷೇಪಣೆಯೂ ಇರುಲ್ಲ. ಅವರ ಬಿಡುಗಡೆಯಾಗುವ ವೇಳೆಗೆ ನಿಮ್ಮ ಬಾಣಂತನವೂ ಮುಗಿದಿರುತ್ತೆ. ಅವರಿಗೆ ಗೊತ್ತಾಗುವುದೇ ಇಲ್ಲ...." ಅಂತಂದಳು ಮಂದಾಕಿನಿ ಪೆಚ್ಚಾಗಿದ್ದಳು.

* * *

ಡಾಕ್ಟರ್ ಹತ್ರ ಮತ್ತೆ ರಾಜಲಕ್ಷ್ಮಿಯೊಂದಿಗೆ ಹೋಗಿದ್ದಳು. ಪ್ರಯೋಗ ಯಶಸ್ವಿಯಾಗಿತ್ತು. ಡಾಕ್ಟರ್ ಸಂತಸವನ್ನು ವ್ಯಕ್ತಪಡಿಸಿ, ಕೆಲವು ಸೂಕ್ತ ಸಲಹೆಗಳನ್ನು ನೀಡಿದ್ದಳು.

"ಒಂದು ವಾರ ನೀವು ರೆಸ್ಟ್‌ನಲ್ಲಿರಬೇಕಾಗುತ್ತೆ. ಗರ್ಭಕೋಶದ ಬಾಯಿಗೆ, ಹೊಲಿಗೆ ಹಾಕಲಾಗಿದೆ. ಹೆಚ್ಚು ಆಯಾಸವಾಗುವಂಥ ಕೆಲಸಗಳನ್ನು ನೀವು ಮಾಡುವಂತಿಲ್ಲ" ಎಂದಿದ್ದರು.

ಸುಜಯಳೊಡನೆ ತಾನು ಗರ್ಭಿಣಿಯಾಗಿರುವೆನೆಂದು ತಿಳಿಸಿ, ಮಂದಾಕಿನಿ ಇಲ್ಲಿಯೇ ಉಳಿದುಕೊಂಡಳು. ತಾನು ಚಿದಾನಂದನಿಗೆ ಗರ್ಭಿಣಿಯಾಗಿದ್ದಾಗ ಕೂಡಾ, ಇಷ್ಟು ರೆಸ್ಟ್ ತೆಗೆದುಕೊಂಡಿರಲಿಲ್ಲವೆನ್ನುವುದು ನೆನಪಿಗೆ ಬಂತು.

"ನಿಮ್ಮ ಒಂದೊಂದು ದಿನದ ಅನುಭವವನ್ನು ನನ್ನೊಂದಿಗೆ ನೀವು ಹೇಳ್ಬೇಕು ಮಂದಾಕಿನಿ.... ಆ ಅನುಭವಗಳನ್ನು ನಾನೇ ಅನುಭವಿಸ್ತಿದೀನಿ ಅಂತ ನನಗೆ ಅನ್ನಿಸಬೇಕು." ಮಂದಾಕಿನಿ ತಲೆಯಾಡಿಸಿದಳು.

ತಲೆಸುತ್ತು, ವಾಂತಿ, ಆಯಾಸ, ಬಳಲಿಕೆ, ಬಯಕೆ, ಎಲ್ಲವನ್ನೂ ಮಂದಾಕಿನಿ ಅನುಭವಿಸಿದಳು. ರಾಜಲಕ್ಷ್ಮಿ ವಿಸ್ಮಯಗೊಳ್ಳುತ್ತಿದ್ದಳು. ಈ ಸೃಷ್ಟಿ ಎಷ್ಟು ಅದ್ಭುತ ! ಮೊಳಕೆ ಒಡೆದು ಬೆಳೆಯುವಾಗ, ಇಷ್ಟೆಲ್ಲಾ ನಡೆಯುತ್ತಲ್ಲ .... ಬರಿಗಣ್ಣಿಗೆ ಗೋಚರವಾಗದಂತಿರುವ ಅಂಕುರಗೊಂಡ ಈ ಜೀವ, ದಿನಗಳೆದಂತೆ ಬೆಳೆಯುತ್ತದೆ. ದೊಡ್ಡದಾಗುತ್ತದೆ, ಮಂದಾಕಿನಿಯ ಒಡಲಿನಲ್ಲಿ ಮಗುವಾಗಿ ರೂಪುಗೊಳ್ಳುತ್ತದೆ. ಇವಳ ಒಡಲು ಬೆಳೆಯುತ್ತದೆ. ಇವಳು ಗರ್ಭಿಣಿ ಎಂದು ನೋಡಿದವರು ಗುರುತಿಸುತ್ತಾರೆ. ಎಷ್ಟು ರೋಮಾಂಚಕ!... ಆದರೆ ಅವಳ ಒಡಲಲ್ಲಿ ಬೆಳೆಯುತ್ತಿರುವುದು ನನ್ನ ಮಗು ಅಂತ ಯಾರಿಗೂ ಹೇಳುವಂತಿಲ್ಲ, ಇದು ಎಂಥಾ ವಿಪರ್ಯಾಸ ? .... ಅವಳಿಗೆ ಏನೋ ಸಂಕಟವಾಗುತ್ತಿತ್ತು ... ಸಣ್ಣಗೆ ಅಸೂಯೆಯೂ

ಆಗುತ್ತಿತ್ತು. ಬೇಗ ಈ ದಿನಗಳು ಸರಿಯಬಾರದೇ... ನವಮಾಸಗಳು ತುಂಬಿ, ಪುಟ್ಟ ಮಗು ಹೊರ ಪ್ರಪಂಚಕ್ಕೆ ಬಂದೊಡನೆ ಅದು ನನ್ನ ಮಗು.... ಅದರ ಮೇಲಿನ ಅಧಿಕಾರ ನನ್ನದು. ಆ ದಿನವನ್ನು ಕಾತುರದಿಂದ ನಿರೀಕ್ಷಿಸತೊಡಗಿದಳು. ಎಲ್ಲವನ್ನೂ ಗಂಡನಿಗೆ ವರದಿ ಒಪ್ಪಿಸುತ್ತಿದ್ದಳು.

ಹೊತ್ತು ಹೊತ್ತಿಗೆ ಮಂದಾಕಿನಿಯ ಊಟ ಉಪಚಾರಗಳನ್ನು ನೋಡಿಕೊಳ್ಳುತ್ತಿದ್ದಳು. ಸಮಯ ಸಮಯಕ್ಕೆ ಡಾಕ್ಟರ ಬಳಿಗೆ ಕರೆದುಕೊಂಡು ಹೋಗುತ್ತಿದ್ದಳು. ಚಿದಾನಂದ ಅವಳನ್ನು ಸತಾಯಿಸದಿರಲಿ ಎಂದು ಅವನನ್ನು ಸಮೀಪದಲ್ಲಿದ್ದ ಪ್ಲೇ ಹೋಂಗೆ ಸೇರಿಸಿದ್ದಳು.

"ಅಲ್ಲಾರೀ ರಾಜಲಕ್ಷ್ಮಿ, ನಿಮ್ಮ ಯಜಮಾನರ ಕಸಿನ್ ಅಂತೀರಿ... ಕೂರಿಸಿ ಉಪಚಾರ ಮಾಡ್ತೀರಲ್ಲ ... ಚೊಚ್ಚಲು ಬಸಿರಿ ಅಲ್ಲವಲ್ಲ.... ಗಂಡ ಪತ್ತೆಯಾಗಿಲ್ಲವಾ?" ವಿಜಯ ಕೇಳಿದ್ದಳು.

"ಏನ್ಮಾಡೋದು ಹೇಳಿ. ಗೊತ್ತಿದ್ದೂ ಹಾಗೇ ನೋಡ್ಕೊಂಡು ಇರೋಕೆ ಆಗುತ್ತಾ? ಹೆಣ್ಣು ಜನ್ಮ. ಹೆಂಗಸರಿಗೆ ಹೆಂಗಸರಲ್ಲದೇ ಈ ಸಮಯದಲ್ಲಿ ಬೇರೆ ಯಾರು ಆಗ್ತಾರೆ?"

"ಗಂಡನೂ ಹತ್ತಿರದಲಿಲ್ಲ ಅಂತೀರಿ... ಅಬಾರ್ಷನ್ ಮಾಡಿಸ್ಕೋ ಅಂತ ಹೇಳಿ.. ಇವರಿಗೇ ಠಿಕಾಣಿ ಇಲ್ಲ. ಎರಡೆರಡು ಮಕ್ಕಳ್ಯಾಕೆ ? ಸಾಕುಕ್ಕೆ ತಾಕತ್ತು ಬೇಡ್ವೆ?"

"ನೋಡಿ ವಿಜಯಾ. ಇದು ಅವರ ಸ್ವಂತ ವಿಷಯ. ಅವರ ಇಷ್ಟ. ಒಂದು ವೇಳೆ ಸಾಕೋಕೆ ಕಷ್ಟ ಅಂತ ಅನ್ಸಿದ್ರೆ ನಾವೇ ಸಾಕ್ತೀವಿ"

"ಓ... ಮನಸ್ನಲ್ಲಿ ಇಷ್ಟೆಲ್ಲಾ ಆಲೋಚನೆ ಮಾಡಿದ್ದಾರೆ. ಡೆಲಿವರಿಗೆ ಹೇಗೂ ಇನ್ನೂ ಸಮಯ ಇದೆಯಲ್ಲ.. ಸುಜಯಂಗೆ ಜೊತೆಯಾಗುತ್ತೆ. ಕಳಿಸಿಕೊಡಿ...."

"ಬೇಡ ವಿಜಯಾ... ನನ್ನ ಗಂಡನ ಮನೆಯವರು, ಇದನ್ನೇ ನೆವ ಮಾಡಿಕೊಂಡು ಆಕ್ಷೇಪಣೆ ಮಾಡ್ತಾರೆ.... ಬೇರೆ ಯಾರನ್ನಾದ್ರೂ ನೋಡೋಣ..."

ಈ ಮಾತುಗಳು ಮಂದಾಕಿನಿಯ ಕಿವಿಗೆ ಬಿದ್ದವು. ಎಲ್ಲರೂ ಸ್ವಾರ್ಥಿಗಳು. ಅಂತಂದುಕೊಂಡಳು. ನನಗೆ ಈ ಅಸಹಾಯಕತೆ ಒಂದಿಲ್ಲದೇ ಹೋಗಿದ್ದಿದ್ರೆ ...? ತನ್ನ ಗಂಡ ಜೈಲು ಶಿಕ್ಷೆಯನ್ನು ಅನುಭವಿಸುವಂಥ ಕೆಟ್ಟ ಕೆಲಸ ಏನು ಮಾಡಿದ್ದಾನೆಂದು ತಿಳಿಯಲಿಲ್ಲ. ಅಪರಾಧಿಯ ಹೆಂಡತಿ ಅಂತ ಅನ್ನೋ ಪಟ್ಟ ನನಗಂತೂ ಇದ್ದೇ ಇದೆ. ನನ್ನ ಮಗನಾದರೂ ಈ ಕೋಟಲೆಗಳಿಂದ ದೂರವಿರಲಿ.... ನನಗೆ ಹಣ ಬೇಡ ಕಾಸು ಬೇಡ... ಈ ಮಗುವನ್ನು ಹೆತ್ತು ಕೊಡ್ತೀನಿ. ಹಾಗೇ ಅದರ ಜೊತೆಗೆ, ಚಿದಾನಂದನನ್ನು ಇವರಿಗೇ ಕೊಟ್ಟು ಬಿಡ್ತೀನಿ ...ಎಂದು ತನ್ನಲ್ಲೇ ನಿಶ್ಚಯಿಸಿಕೊಂಡಳು.

ದಿನಗಳು ಓಡಿದವು. ಮಂದಾಕಿನಿಯ ಮುಖದಲ್ಲಿ ಹೊಳಪು ಹೆಚ್ಚಿತು. ಬಯಕೆಗಳು ಹೆಚ್ಚಿದವು. ರಾಜಲಕ್ಷ್ಮಿಯ ಅತಿ ಮುತುವರ್ಜಿ, ಒಮ್ಮೊಮ್ಮೆ ಬೇಸರವನ್ನುಂಟು ಮಾಡುತ್ತಿತ್ತು. ... "ನನಗೆ ಸಂಕೋಚ ಆಗುತ್ತೆ ಅಕ್ಕಾ.... ನನ್ನ ಚೊಚ್ಚಲು ಬಸಿರಲ್ಲೂ ನನಗೆ ಯಾರೂ ಇಷ್ಟು ಉಪಚಾರ ಮಾಡಿರ್ಲಿಲ್ಲ...." ಎನ್ನುತ್ತಿದ್ದಳು.

"ನಿಮಗೆ ಈಗ ರಾಜಯೋಗ ನಡೀತಿರಬಹುದು. ಅಷ್ಟಕ್ಕೂ ನಾನು ನನ್ನ ಮಗುವಿಗೋಸ್ಕರ

ಮಾಡ್ತಿದೀನಿ.... ಇವೆಲ್ಲಾ ಕಳೆದ್ಮೇಲೆ ಮಾಡ್ತೀನಾ ?'' ನಕ್ಕು ಬಿಡುತ್ತಿದ್ದಳು ರಾಜಲಕ್ಷ್ಮಿ.

''ಹಾಗಾದ್ರೆ ಆಮೇಲೆ ನನ್ನ ಕೈ ಬಿಟ್ಟು ಬಿಡ್ತೀರಾ ಅಕ್ಕ...''

''ಹಾಗೆಲ್ಲಿ ಅಂದೆ ನಾನು? ... ಈಗಲಿಂದ ಆ ಚಿಂತೆ ಯಾಕೆ ? ದೇವರು ಮಾಡಿಸಿದ ಹಾಗಾಗುತ್ತೆ. ನನಗೆ ನಿಮ್ಮ ಪರಿಚಯವೇ ಇರ್ಲಿಲ್ಲ . ... ನೀವಾಗಿಯೇ ನನ್ನ ಮನೆಯ ಬಾಗಿಲಿಗೆ ಬರಲಿಲ್ವೇ .... ಹಾಗೆ ಎಲ್ಲಾ ತಾನಾಗಿಯೇ ಒದಗಿ ಬರುತ್ತೆ... ಈಗ ನನ್ನ ಮಗುವಿನ ಆರೋಗ್ಯ ಮುಖ್ಯ. .... ನೀವು ಚೆನ್ನಾಗಿ ತಿಂದುಂಡು ಓಡಾಡಿಕೊಂಡಿರಿ.... ಅಷ್ಟು ಸಾಕು..''

ಈಗ ಐದನೇ ತಿಂಗಳು ನಡೀತಿದೆ ಅಲ್ವಾ ? ಹೊಟ್ಟೇಲಿ ಮಗು ಓಡಾಡುತ್ತಾ?.... ನಾನು ನಿಮ್ಮ ಹೊಟ್ಟೆಯ ಮೇಲೆ ಕೈ ಇಟ್ಟು ನೋಡ್ಲಾ ?....

''ಇಲ್ಲ, ಅಕ್ಕಾ.. ಹೆಚ್ಚಿಗೆ ಓಡಾಡುಲ್ಲ. ಇನ್ನೆರಡು ತಿಂಗಳು ಕಳೀಲಿ ... ಅಲ್ಲಿಂದ ಇಲ್ಲಿಗೆ ಓಡಾಡೋದು ಹೇಗೆ ಗೊತ್ತಾಗುತ್ತೆ ಅಂತೀರಿ....ನಾನೇ ನಿಮಗೆ ಹೇಳ್ತೀನಿ...''

''ಮಗು ಸೋಮಾರಿಯಾಗ್ಬಾರ್ದು ಮಂದಾಕಿನಿ. ನೀವೂ ಚೆನ್ನಾಗಿ ವಾಕಿಂಗ್ ಮಾಡಿ. ಆಗ ಮಗುವೂ ಓಡಾಡುತ್ತೆ. ಡಾಕ್ಟರ್ ವಾಕಿಂಗ್ ಮಾಡಿ ಅಂತ ಹೇಳಿದಾರಲ್ಲ''

''ಕಾಲುಗಳು ನೋಯುತ್ವೆ. ಸ್ವಲ್ಪ ಊದಿಕೊಂಡಿದೆ....''

''ಬನ್ನಿ ಡಾಕ್ಟರ ಹತ್ರ ಹೋಗಿ ಬರೋಣ...''

''ಬೇಡ, ಬಸಿರು ಹೆಂಗಸಿಗೆ ಇದೆಲ್ಲಾ ಮಾಮೂಲು. ನಾನು ನಿಮಗೆ ಆರೋಗ್ಯವಂತ ಮಗುವನ್ನು ಹೆತ್ತು ಕೊಡ್ತೀನಿ. ನೀವು ಚಿಂತಿಸಲೇ ಬೇಡಿ'' ಆಶ್ವಾಸನೆ ನೀಡಿದಳು.

''ಹೌದು ಮಂದಾಕಿನಿ. ಬಯಸಿ ಬಯಸಿ ಮಗುವನ್ನು ಪಡೀತಿದೀವಿ. ಮಗು ಹೆಣ್ಣಾದರೂ ಸರಿ, ಗಂಡಾದರೂ ಸರಿ.... ಆರೋಗ್ಯವಾಗಿರಬೇಕು.''

''ಆರೋಗ್ಯವಾಗಿಯೂ ಇರುತ್ತೆ. ಸುಂದರವಾಗಿಯೂ ಇರುತ್ತೆ. ಮಗೂಗೆ ಏನು ಹೆಸರನ್ನಿಡಬೇಕು ಅಂತ ಯೋಚಿಸಿದೀರಿ?....''

''ಹೆಣ್ಣು ಮಗು ಹುಟ್ಟಿದರೆ ಚೈತ್ರಾ ಅಂತ, ಗಂಡು ಮಗು ಹುಟ್ಟಿದರೆ, ವಸಂತ ಅಂತ ಇಡಬೇಕು ಅಂತ ನಾವಿಬ್ರೂ ನಿರ್ಧರಿಸಿದೀವಿ....''

ಮಂದಾಕಿನಿ ನಾಚಿದಳು. ''ನಿಮ್ಮ ಯಜಮಾನರು ಏನಂತಾರೆ? .... ಎಲ್ಲವನ್ನು ಅವರಿಗೆ ಹೇಳ್ತೀರಾ?...''

''ಹೂಂ, ಮತ್ತೆ. ನಾನೇ ಗರ್ಭಿಣಿಯಾಗಿದ್ದಿದ್ರೆ , ಪ್ರತಿಯೊಂದು ಅನುಭವಗಳನ್ನು ಹೇಳ್ತಿದ್ನೋ ಇಲ್ಲವೋ.... ಇದು ನಮ್ಮ ಮಗು.... ಆ ಮಗುವಿನ ಬಗ್ಗೆ ನನ್ನ ಗಂಡನಿಗೆ ತಿಳಿದಿರಲೇಬೇಕು ಅಲ್ವಾ?... ಇಲ್ದಿದ್ರೆ ಅವರಿಗೆ ಈ ಅನುಭವಗಳೆಲ್ಲ ಗೊತ್ತಾಗುವುದು ಯಾವಾಗ ? ಆದರೆ ನೀವ್ಯಾಕೆ ಮುಜುಗರ ಪಟ್ಕೋತೀರಿ?''

''ಮುಜುಗರ ಆಗ್ದೇ ಇರುತ್ತಾ ಅಕ್ಕಾ... ನಾಚಿಕೆಯೂ ಆಗುತ್ತೆ...''

"ನಾಚಿಕೆಯಾಕೆ ? ಅವರು ನಿಮ್ಮ ಅಣ್ಣನ ಹಾಗೆ..... ಇಲ್ಲಿದ್ರೆ ನಿಮ್ಮನ್ನ ಇದ್ದಕ್ಕಿದ್ದ ಹಾಗೆ ಕರ್ಕೊಂಡು ಬರ್ತಿದ್ರಾ ?... ಯಾವುದೋ ಜನ್ಮದಲ್ಲಿ ಒಂದೇ ಮನೆಯಲ್ಲಿ ಹುಟ್ಟಿದವರು ಇರಲೇಬೇಕು ...ಇಲ್ದಿದ್ರೆ ಹೀಗೆ ನೆಂಟಸ್ಥಿಕೆ ಎಳೆದ್ಕೊಂಡು ಬರುತ್ತಾ? "

"ಏನೋ ನಂಗೊತ್ತಿಲ್ಲ. ಆದರೆ ನಾನು ಬಂದ ಹೊಸತರಲ್ಲಿ ನಿಮಗೆ ನನ್ನ ಮೇಲೆ ಕೋಪವಿತ್ತು ಅಲ್ವಾ !... " ಆ ದಿನಗಳನ್ನು ನೆನಪಿಸಿದಳು.

"ಅದನ್ನೆಲ್ಲಾ ಮರೆತುಬಿಡಿ. ನನ್ನ ಗಂಡ ಅಪರಂಜಿ ಅಂಥವರು."

"ಆದರೆ ನನ್ನ ಗಂಡ ಅಪರಂಜಿ ಅಲ್ಲ, ಆಪಾದನೆ ಹೊತ್ತು ಜೈಲಿನಲ್ಲಿರುವ ಖೈದಿ. ಅಪರಾದಿಯ ಮಕ್ಕಳು ಅನ್ನೋ ಅಪವಾದ ನನ್ನ ಮಕ್ಕಳಿಗೆ ಬೇಡ...ಇವನನ್ನು ನಿಮ್ಮ ಬಳಿಯೇ ಬಿಟ್ಟು ಹೋಗ್ತೀನಿ. ವಿದ್ಯಾವಂತನನ್ನಾಗಿ ಮಾಡಿ.. ಪುಣ್ಯ ಬರುತ್ತೆ."

"ನನ್ನ ಬಳಿ ಈಗಾಗಲೇ ಶರತ್ ಇದಾನೆ. ಅವನನ್ನು ಬೆಳೆಸಬೇಕಲ್ಲ, ಅಲ್ಲದೇ, ನಿಮಗೆ ಒಬ್ಬ ಮಗ ಇರಲಿ... ನಿಮ್ಮ ಮಗನನ್ನು ನೀವೇ ಸಾಕಿ ಬೆಳೆಸಿ, ವಿದ್ಯಾವಂತನನ್ನಾಗಿ ಮಾಡಿ. ಸಹಾಯವನ್ನು ನಾವು ಮಾಡ್ತೀವಿ" ವಿಶ್ವಾಸದಿಂದ ಹೇಳಿದಳು.

"ನನಗೆ ಸ್ವಲ್ಪ ದುಡ್ಡು ಕೊಡಿ. ಮಂದಾಕಿನಿಗೆ ಒಂದು ಹಸಿರು ಬಣ್ಣದ ರೇಶ್ಮೆ ಸೀರೆಯನ್ನು ತರ್ತೀನಿ... ಹಾಗೇ, ನನ್ನ ಸ್ನೇಹಿತೆಯರನ್ನು ಕರೆದು ಸಮಾರಂಭವನ್ನು ಮಾಡಿ ಬೇಕಾದ ಆರತಿ ಮಾಡಿಸ್ತೀನಿ" ಗಂಡನೊಡನೆ ಹೇಳಿದಳು.

"ಇದೆಲ್ಲಾ ಅಗತ್ಯಾನಾ ರಾಜೀ...? ಯೋಚಿಸು ... ಅವಳು ಬರೀ ಬಾಡಿಗೆ ತಾಯಿ."

"ಆದರೆ, ಅವಳು ಹೊತ್ತಿರುವುದು ನಮ್ಮ ಮಗು ನೆನಪಿರಲಿ... ಆ ಮಗುವಿಗೋಸ್ಕರ ಮಾಡ್ತೀನಿ, ಮಗು ನೊಂದ್ಕೊಳ್ಳುತ್ತೆ."

"ನಿನ್ನಿಷ್ಟ ರಾಜೀ..... ನಾನು ಬೇಡ ಅದ್ನಲ್ಲ ...ಆದರೆ ನಿನ್ನ ಸೇಹಿತೆಯರಿಗೆ ಏನು ಹೇಳ್ತೀಯ ? .... ಅವರೆಲ್ಲಾ ತಮಾಷೆ ಮಾಡುಲ್ವಾ !..."

"ಏನಾದ್ರೂ ಮಾಡ್ಕೊಳ್ಳಲಿ.... ನಾನೇ ಬಸಿರಿ ಆಗಿದ್ದಿದ್ರೆ ಸಂಭ್ರಮ ಪಡ್ತಿದ್ನೋ ಇಲ್ಲವೋ....ಹಾಗೇ ಅಂತ ಅಂದ್ಕೊಳ್ತೀನಿ... " ಅವಳ ಗಂಟಲು ಕಟ್ಟಿತ್ತು.

"ಸರಿ. ನೀನು ಬೇಸರ ಮಾಡ್ಕೋಬೇಡ. ಆದರೆ ನಾನು ಮನೇಲಿರಲಿ ಅಂತ ಬಯಸ್ಬೇಡ. ... ನನಗೆ ಇದೆಲ್ಲ ಮುಜುಗರವಾಗತ್ತೆ. ನಾನು ಟೂರ್‌ಗೆ ಹೋಗಿದ್ದಾಗ ಏನು ಬೇಕಾದ್ರೂ ಮಾಡ್ಕೋ... "

"ಅವಳಿಗೆ ದಿನ ತುಂಬ್ತಿದ್ದ ಹಾಗೇ, ನೀವು ಟೂರ್ ಗೀರ್ ಅಂತ ಅಲ್ಲಿ ಇಲ್ಲಿ ಹೋಗ್ಬೇಡಿ. ಯಾವ ಗಳಿಗೇಲಿ ಏನೋ.... ನೀವು ಊರಿನಲ್ಲಿದ್ರೆ ನನಗೆ ಧೈರ್ಯ...."

"ದಿನ ಯಾವಾಗ ತುಂಬುತ್ತೆ ಅಂತ ಸರಿಯಾಗಿ ಹೇಳು. ಊರಿನಲ್ಲೇ ಇರುಕ್ಕೇ ಪ್ರಯತ್ನ ಪಡ್ತೀನಿ. ಅವಳು ಆಸ್ಪತ್ರೆಯಲ್ಲಿರುವಾಗ, ಅವಳ ಮಗನನ್ನು ಯಾರು ನೋಡ್ಕೋತಾರೆ?...."

"ಅದಕ್ಕೇ ಹೇಳಿದ್ದು... ನೀವು ಈಗಲಿಂದ ಅವನನ್ನು ಮಾತನಾಡಿಸಿ, ಆಟ ಆಡಿಸಿ... ನಿಮ್ಮ ಜೊತೆ ನಗ್ತಾನಗ್ತಾ ಇರುವಂತೆ ಮಾಡಿಟ್ಟುಕೊಳ್ಳಿ ..."

"ಬೇಬಿ ಸಿಟ್ಟಿಂಗ್ ಬೇರೆ ಮಾಡ್ಬೇಕಾ... ಶರತ್‌ಗೇ ಮಾಡ್ಲಿಲ್ಲ ನಾನು..."

"ಅವನ ವಿಷಯ ಬಿಡಿ. ಅವನು ನಮ್ಮ ಸ್ವಂತ ದವನಲ್ಲ ಅಲ್ಲದೇ ಅವನೆಂದೂ ತೊಂದರೆ ಕೊಡಲಿಲ್ಲ"

"ರಾಜೀ.... ನಾನು ಈಗಲೇ ಹೇಳ್ತಿದೀನಿ. ಶರತ್ ನಮ್ಮ ಮಗನೇ... ಅವನನ್ನು ನಿನ್ನಿಂದ ದೂರ ಮಾಡ್ಬೇಡ. ಸ್ವಂತ ಮಗನಂತೆ ಸಾಕಿದೀವಿ... ಹಾಗೇ ನೋಡಿಕೊಳ್ಳೋಣ... ಅದು ನಮ್ಮ ಕರ್ತವ್ಯ..."

"ಸರಿ.... ಈ ವಿಷಯದಲ್ಲಿ ಚರ್ಚೆಬೇಡ.... ನನಗೂ ಗೊತ್ತು" ಹೆಂಡತಿಯ ನುಡಿಗಳು ಅವನಲ್ಲಿ ಆತಂಕದ ಅಲೆಯನ್ನು ಎಬ್ಬಿಸಿದವು.

ರಾಜಲಕ್ಷ್ಮಿ ಆರತಿಯ ಸಮಾರಂಭವನ್ನಿಟ್ಟುಕೊಂಡಳು. ಮಂದಾಕಿನಿ ತಲೆಗೆ ಎಣ್ಣೆಯನ್ನು ಒತ್ತಿ ನೀರು ಹಾಕಿದಳು. ಹೊಸದಾಗಿ ತಂದಿದ್ದ ಸೀರೆಯನ್ನು ರವಿಕೆಯನ್ನು ಕೊಟ್ಟು ಉಡಲು ಹೇಳಿದಳು.

"ಈ ಸೀರೇನ ಉಟ್ಕೊಂಡು ಸಿದ್ಧರಾಗಿ. ನನ್ನ ಕೆಲವು ಸ್ನೇಹಿತೆಯರು ಬರ್ತಾರೆ."

"ಇದೆಲ್ಲಾ ಬೇಕಿತ್ತಾ ಅಕ್ಕಾ ....?"

"ಹುಂ. ನಂಗೆ ಬೇಕಾಗಿದ್ದುದರಿಂದ ಮಾಡ್ತಿದೀನಿ.... ನೀವು ಏನೂ ಹೇಳ್ಬೇಡಿ... ಫೋಟೋಗ್ರಾಫರ್ ಬರ್ತಾನೆ. ಚೆನ್ನಾಗಿ ಅಲಂಕಾರ ಮಾಡ್ಕೊಳ್ಳಿ..." ಎಂದು ಆದೇಶವಿತ್ತಳು.

ಸ್ನೇಹಿತೆಯರು ಒಬ್ಬೊಬ್ಬರಾಗಿ ಬಂದರು... "ನಿಮ್ಮದು ತುಂಬಾ ದೊಡ್ಡ ಹೃದಯ ರಾಜಲಕ್ಷ್ಮಿ. ನೀವೇ ಗರ್ಭಿಣಿಯಾಗಿರುವಷ್ಟು ಸಂಭ್ರಮ ಪಡ್ತಿದೀರಿ.... ಆಶ್ಚರ್ಯ ಆಗುತ್ತೆ."

"ಏನ್ಮಾಡೋದು ಹೇಳಿ. ಕೆಲವು ಸಾರಿ ಇಂಥ ಬಲವಂತಕ್ಕೆ ನಾವಾಗಿಯೇ ಸಿಕ್ಕಿ ಬೀಳ್ತೀವಿ... ಮಂದಾಕಿನಿ ಹೊರಕ್ಕೆ ಬನ್ನಿ" ರೂಮಿನ ಬಾಗಿಲ ಬಳಿ ನಿಂತು ಕರೆದಳು.

ಮಂದಾಕಿನಿ ಹೊರ ಬಂದಳು.ಎಲ್ಲರ ಜೋಡಿ ಕಣ್ಣುಗಳು ಅವಳ ಮೇಲೆ ಬಿದ್ದವು. "ಬಂದಾಗ ಹೇಗೆ ಹೇಗೋ ಅಬ್ಬೇಪಾರಿ ಥರ ಇದ್ಲು.... ಈಗ ನೋಡಿ ಇವಳ ವೈಭವಾನ ? ಏನೇ ಅಂದ್ರೂ , ಈ ರಾಜಲಕ್ಷ್ಮಿದು ಅತೀ ಅತಿ. ಕೆಲವೊಮ್ಮೆ ಅಟ್ಟಕ್ಕೆ ಏರಿಸಿ ಬಿಡ್ತಾರೆ. ಕೆಲವೊಮ್ಮೆ ಕೆಳಕ್ಕೆ ಬೀಳಿಸಿ ಬಿಡ್ತಾರೆ " ಒಂದಿಬ್ಬರು ಆಡಿಕೊಂಡರು ಇದ್ಯಾವುದರ ಅರಿವಿಲ್ಲದೇ ರಾಜಲಕ್ಷ್ಮಿ ಮಂದಾಕಿನಿಯನ್ನು ಸಿಂಗರಿಸಿದ್ದ ಕುರ್ಚಿಯ ಮೇಲೆ ಕುಳ್ಳಿರಿಸಿ, ಅರಿಶಿನ ಕುಂಕುಮವನ್ನು ಕೊಟ್ಟು, ಹೂ ಮುಡಿಸಿ, ಮಡಿಲನ್ನು ತುಂಬಿದಳು.

"ನನ್ನದೇ ದೃಷ್ಟಿ ತಗಲುತ್ತೆ. ಈ ಹಸಿರು ಸೀರೆ ಚೆನ್ನಾಗಿ ಒಪ್ಪುತ್ತೆ." ಮನಃಪೂರ್ವಕವಾಗಿ ಹೊಗಳಿದಳು. ಎಲ್ಲರಿಗೂ ಉಂಡೆ ಚಕ್ಕುಲಿಯನ್ನು ಕೊಟ್ಟಳು. ನಂತರ ಬಫೆ ಊಟ ಮುಗಿಯಿತು. ಸುಜಯ ಮಂದಾಕಿನಿಯ ಬಳಿಗೆ ಬಂದಳು.

"ತುಂಬಾ ಸುಂದರವಾಗಿ ಕಾಣ್ತಿದೀರಿ ಮಂದಾಕಿನಿ... ನಿಮಗೆ ಆಗೋದು ಹೆಣ್ಣು ಮಗುವೇ.... ನನಗೆ ಏನೋ ಅನುಮಾನ ಬರ್ತಿದೆ.... ರಾಜಲಕ್ಷ್ಮಿಗೆ ಯಾವ ಸ್ವಂತ ಅನುಭವವಿಲ್ಲ ಆದರೆ ಅವರ್‍ಯಾಕೆ ಇಷ್ಟು ಸಂಭ್ರಮ ಪಡ್ತಿದಾರೆ ಅಂತ?"

"ಏನೋ ನಂಗೊತ್ತಿಲ್ಲ, ನನಗೆ ಆಶ್ರಯ ಕೊಟ್ಟವರು. ಅವರ ಮನಸ್ಸಿಗೆ ಬೇಸರವಾಗದಿರಲಿ ಅಂತ ಸುಮ್ಮನಿದೀನಿ."

"ಯಶವಂತ ಇದ್ದಕ್ಕಿದ್ದ ಹಾಗೆ ಕರ್‍ಕೊಂಡು ಬಂದ್ರು ಅಂತೀರಿ. .. ಆಶ್ರಯ ಕೊಟ್ರು ಅಂತೀರಿ... ರಾಜಲಕ್ಷ್ಮಿ ಪ್ಲ್ಯಾನ್ ಮಾಡಿ, ಯಶವಂತನನ್ನು ನಿಮ್ಮ ಬಳಿಗೆ ಏನಾದ್ರೂ ಕಳ್ಸಿದ್ರಾ ..." ಅವಳು ತಮಾಷೆ ಎಂಬಂತೆ ಕೇಳಿದಾಗ, ಮಂದಾಕಿನಿ ಸಿಡಿದಳು.

"ಛೀ.... ಎಂಥಾ ಕೊಳಕು ಆಲೋಚನೆ ನಿಮ್ಮದು. ಹಾಗೆಲ್ಲ ಏನಿಲ್ಲ.. ಗಂಡನಿಂದ ದೂರವಿದೀನಿ ನಿಜ..... ಆದರೆ ಪರಗಂಡಸರ ಮೇಲೆ ನನಗೆ ಯಾವ ಆಸಕ್ತಿ ಇಲ್ಲ.. ನಿಮ್ಮನ್ನು ನಾನು ಎಂದಾದ್ರೂ ಹೀಗೆಲ್ಲಾ ಪ್ರಶ್ನಿಸಿದ್ನಾ ?"

"ನಾನು ಓಪನ್ನಾಗಿ, ಬಾಡಿಗೆ ತಾಯಿ ಅಂತ ಎಲ್ರಿಗೂ ಹೇಳಿದೀನಿ. ಅಲ್ಲಿ ಯಾವ ಮುಚ್ಚು ಮರೆಯೂ ಇಲ್ಲ, ನೀವು ನನ್ನ ಮನೇಲಿದ್ದಾಗ ಗರ್ಭಿಣಿ ಆಗಿರಲಿಲ್ಲ, ಆಮೇಲೆ ಗರ್ಭವತಿ ಆಗಿದೀರಿ. ಅದಕ್ಕೇ ಕೇಳಿದೆ. ಅನುಮಾನ ಬರುಲ್ವಾ ?..."

"ಹಾಗೆಲ್ಲ ಏನಿಲ್ಲ, ನನಗೆ ಗೊತ್ತಾದದ್ದೇ ತಡವಾಗಿ. ನನ್ನಂಥ ಅಸಹಾಯಕರನ್ನು ಕಂಡರೆ ನಿಮಗೆಲ್ಲಾ ತಾತ್ಸಾರ, ನನ್ನಿಂದ ಸಹಾಯ ಸಿಗ್ತಿಲ್ಲ ಅಂತ ನಿನಗೆ ಕೋಪ..."

"ಪರವಾಗಿಲ್ಲ ರೀ.... ರಾಜಲಕ್ಷ್ಮಿಯ ಸಪೋರ್ಟ್ ಇದೆ ಅಂತ ನೀವೂ ಅವರಂತೆಯೇ ಮಾತಾಡ್ತೀರಿ...." ಅವಳು ನಗುತ್ತಾ ಮಾತನಾಡಿದಾಗ, ಮಂದಾಕಿನಿಯ ಮುಖ ಕುಂದಿತು. ಎಂತೆಂಥ ಮಾತುಗಳನ್ನು ಕೇಳಬೇಕಾಯಿತಲ್ಲ ಅಂತ ವ್ಯಥೆ ಪಟ್ಟಳು.

* * *

ಎರಡು ದಿನಗಳ ನಂತರ ವಾಕಿಂಗ್ ಹೋಗಿ ಬರ್ತೀನಿ ಎಂದು ಹೇಳಿ ಸುಜಯಳ ಮನೆಗೆ ಬಂದಳು. ಅವಳಿಗೆ ಎಲ್ಲವನ್ನು ತಿಳಿಸಿ, ತನ್ನ ಮನಸ್ಸನ್ನು ಹಗುರ ಮಾಡಿಕೊಳ್ಳ ಬೇಕೆಂದುಕೊಂಡಳು. ಬಾಗಿಲು ಲಾಕ್ ಆಗಿತ್ತು. ಕೆಳಗಿನ ಮನೆಯಲ್ಲಿ ವಿಚಾರಿಸಿದಾಗ, ಅವಳು ಆಸ್ಪತ್ರೆಗೆ ಅಡ್ಮಿಟ್ ಆಗಿದ್ದಾಳೆಂದು ತಿಳಿಯಿತು. ಹಾಗೇ ಹಿಂತಿರುಗಿದಳು.

"ಯಾಕೆ ಡಲ್ ಆಗಿದೀರಾ ಮಂದಾಕನಿ... ಹುಶಾರಾಗಿದೀರಿ ತಾನೇ...?"

"ಯಾಕೋ ದಿನ ದಿನಕ್ಕೂ ಆತಂಕ ಹೆಚ್ಚಾಗ್ತಿದೆ. ನನಗೇನಾದ್ರೂ ಆಗಿ ಹೋದ್ರೆ ನನ್ನ ಮಗನ ಗತಿ ಏನು ? ... ನಾನು ಬಸಿರಾಗಲು ಒಪ್ಪಲೇಬಾರದಾಗಿತ್ತು ಅಂತ ಅನ್ನಿಸ್ತಿದೆ."

ರಾಜಲಕ್ಷ್ಮಿ ಪೆಚ್ಚಾದಳು. "ನೀವು ಹೀಗಿರಲಿಲ್ಲ, ಧೈರ್ಯವಾಗಿದ್ರಿ... ಯಾರೋ ಏನೋ ಹೇಳಿ ಕೊಟ್ಟಿರ್ಬೇಕು. ಸುಜಯ ಏನಾದ್ರೂ ಕೇಳಿದ್ಲಾ ? ಏನಂತ ಹೇಳಿದ್ರಿ ?"

"ಇಲ್ಲ ನಾನು ಯಾರಿಗೂ ಏನನ್ನೂ ಹೇಳಿಲ್ಲ ನನ್ನ ಮಾತನ್ನು ನಂಬಿ"ಇದ್ದಕ್ಕಿದ್ದಂತೆ ಮಂದಾಕಿನಿ ಅಳತೊಡಗಿದಳು.

"ಏನಾಯ್ತು ಅಂತ ಹೀಗೆ ಅಳ್ತಿದೀರಿ!. ನಿಮ್ಮ ಆರೋಗ್ಯಕ್ಕೆ ಒಳ್ಳೇದಲ್ಲ... ಇನ್ನೊಂದೆರಡು ತಿಂಗಳು... ಅಷ್ಟೇ. ಆಮೇಲೆ ನಿಮಗೆ ನಿಶ್ಚಿಂತೆ..."

"ನನ್ನ ಆತಂಕ ನಿಮಗೆ ಅರ್ಥವಾಗುಲ್ಲ ಅಕ್ಕಾ , ನನ್ನ ನಿರ್ಧಾರ ಸರಿಯೋ ತಪ್ಪೋ ಅಂತ ನನಗಿನ್ನೂ ಗೊತ್ತಿಲ್ಲ... ನನ್ನ ಗಂಡನಿಗೆ ನಿಜ ತಿಳಿದರೆ ಏನು ಅನಾಹುತ ವಾಗುತ್ತೋ ಅಂತ ಭಯ ಆಗುತ್ತೆ."

"ಈಗ ಹೀಗೆ ಆಂತಕಪಡ್ತೀರಲ್ಲ, ಮೊದಲೇ ಯೋಚಿಸಬೇಕಾಗಿತ್ತು. ಈಗ ನಿಮ್ಮ ಮನಸ್ನಲ್ಲಿ ಏನಿದೆ ಹೇಳಿ..." ಒತ್ತಾಯದಿಂದ ಕೇಳಿದಳು.

"ಈ ಮಗುವನ್ನು ನನಗೇ ಕೊಟ್ಟುಬಿಡಿ ಅಕ್ಕಾ... ನನ್ನ ದೇಹದೊಳಗೆ ಪುಟ್ಟ ಜೀವವಾಗಿ ಬೆಳೆದಿದೆ..... ನನ್ನ ಉಸಿರಲ್ಲಿ ಉಸಿರಾಗಿ ಬೆರೆತು ಬೆಳೆದಿದೆ... ಮಗುವಿನ ಭಾರವನ್ನು ಹೊತ್ತಿದ್ದೇನೆ... ಮಿಸುಕಾಡಿದಾಗ ಹಿತವಾಗಿ ನರಳಿದ್ದೇನೆ. ಹೆರಿಗೆ ನೋವನ್ನು ಅನುಭವಿಸಿ, ಜನ್ಮ ಕೊಡ್ತೀನಿ... ಎದೆಯ ಹಾಲನ್ನು ಕುಡಿಸ್ತೀನಿ. ಅಷ್ಟಾದರೂ, ಈ ಮಗು ನನ್ನದಾಗುವುದಿಲ್ಲ ಇದೆಲ್ಲಿಯ ನ್ಯಾಯ ?.... ಕೂಲಿ ನಾಲಿ ಮಾಡಿಯಾದ್ರೂ ಬೆಳೆಸ್ತೀನಿ... ಈ ಮಗುವನ್ನು ನನಗೇ ಕೊಟ್ಟುಬಿಡಿ..."

ಮಂದಾಕಿನಿಯ ಮಾತುಗಳಿಗೆ ರಾಜಲಕ್ಷ್ಮಿ ಬೆಚ್ಚಿದಳು. ಇದು, ಈ ಬಡ ಅಸಹಾಯಕ ಹೆಣ್ಣಿನ ಮಾತುಗಳಲ್ಲ, ಯಾರೋ ಹೇಳಿ ಕೊಟ್ಟಿರಬೇಕು... ಗೋಡೆಗೆ ಒರಗಿ ನಿಂತಳು. ಈಗ ಇವಳಿಗ್ಯಾಕೆ ಈ ಆಸೆ ಹುಟ್ಟಿಕೊಂಡಿತು? ... ಇವಳಿಗಾಗಿ ನಾನು ಖರ್ಚುಮಾಡಿದೆ. ಶ್ರಮ ಪಟ್ಟೆ. ಸಂಭ್ರಮಪಟ್ಟೆ... ಎಲ್ಲಾ ಯಾತಕ್ಕಾಗಿ... ! ನನ್ನ ಮಗುವಿಗಾಗಿ...ಈಗ ಈ ಮಗುವನ್ನು ಇವಳಿಗೆ ಬಿಟ್ಟು ಕೊಡುವುದೆಂದರೇ... ಗಂಡ ಹೇಳಿದ್ದು ನಿಜ. ನಾನು ಈ ಆಸೆಯನ್ನು ಹೊತ್ತಿಸಿಕೊಳ್ಳಬಾರದಾಗಿತ್ತು. ಹೆರಿಗೆ ಆಗುತ್ತಿದ್ದಂತೆಯೇ ಇವಳನ್ನು ಆದಷ್ಟು ಬೇಗ ನಮ್ಮ ಮನೆಯಿಂದ ಕಳಿಸಿಬಿಡಬೇಕು. ಮಗುವಿನ ಮೇಲೆ ಮಮತೆಯನ್ನು ಬೆಳೆಸಿಕೊಳ್ಳದಂತೆ ದೂರವಿಡಬೇಕು.... ಅಷ್ಟರಲ್ಲಿ ಯಶವಂತ ಟೂರ್‌ನಿಂದ ಹಿಂದಿರುಗಿದ್ದ. ಮಂದಾಕಿನಿ ತನ್ನ ರೂಮನ್ನು ಸೇರಿಕೊಂಡಳು. ರಾಜಲಕ್ಷ್ಮಿ ಗಂಡನಿಗೆ ಒರಗಿಕೊಂಡು ಅತ್ತಳು.

"ಏನಾಯ್ತು ರಾಜೀ.... ಯಾಕಳ್ತಿದೀಯ ? ...ಎಲ್ಲಾ ಹುಶಾರಾಗಿದೀರಿ ತಾನೇ... ನಿನ್ನ ಮಗುವಿನ ಬಾಡಿಗೆ ತಾಯಿ ಆರಾಮವಾಗಿದಾಳೆ ತಾನೇ?...."

"ಅವಳಿಗೆ ಏನಾಗಿದೆ ಧಾಡಿ ? ತಿಂದು ಹೆಚ್ಚಾಗಿದೆ. ಉಪಚಾರ ಜಾಸ್ತಿ ಆಯಿತು."

"ಏನಂದ್ಲು ! ... ಏನು ಬೇಕಂತೆ ?"

"ಮಗು ಅವಳಿಗೇ ಬೇಕಂತೆ...ಎಷ್ಟು ಧೈರ್ಯ ಅವಳಿಗೆ ?...."

"ನೀನೇನಂದೆ ?"

"ನನಗೆ ಏನನ್ನೂ ಆಡುಕ್ಕೆ ಆಗ್ತಿಲ್ಲ, ಅಳುಬಂದು ಬಿಡ್ತು..."

"ನೀನು ಏನನ್ನೂ ಆಡ್ಲೇ ಬೇಡ. ಸುಮ್ಮನಿದ್ದುಬಿಡು. ಏನೋ ಮೋಹ. ಎರಡು ದಿನ ಕಳೆದ್ರೆ, ಮನಸ್ಸು ಬದಲಾಗುತ್ತೆ... ಹಠ ಮಾಡಿದ್ರೆ ನಾನು ತಿಳುವಳಿಕೆ ಹೇಳ್ತೀನಿ."

"ನಿಮ್ಮಿಂದ್ಲೆ ಇಷ್ಟೆಲ್ಲಾ ಆದದ್ದು. ನನ್ನ ಪಾಡಿಗೆ ನಾನು ಹಾಯಾಗಿದ್ದೆ. ಗುರುತು ಪರಿಚಯವಿಲ್ಲದವಳನ್ನು ಮನೆಗೆ ಕರ್ಕೊಂಡು ಬಂದ್ರಿ... ಈಗ ಆಸೆ ಹೆಚ್ಚಾಗ್ತಿದೆ... ಈಗ ಮಗು ಬೇಕು ಅಂತ ಅಂದ್ಲು. ನಾಳೆ ಮಗುವಿನ ಅಪ್ಪನೂ ಬೇಕು ಅಂತ ಅಂದ್ರೆ...?"

"ರಾಜೀ... ಇದೇನ್ಮಾತು ?.... ಡಾಕ್ಟರ ಹತ್ರ ಬುದ್ಧಿ ಹೇಳಿಸಿದ್ರಾಯ್ತು... ಅವಳ ಗಂಡನಿಗೆ ವಿಷಯ ಹೀಗೆ ಅಂತ ತಿಳಿದ್ರೆ , ಮಗೂನ ಖಂಡಿತಾ ಒಪ್ಪಿಕೊಳ್ಳುವುದಿಲ್ಲ, ಆಗ ಮಗು ನಮಗೇ ಉಳಿಯುತ್ತೆ. ನೀನು ಆಂತಕಪಡಬೇಡ" ಸಮಾಧಾನ ಹೇಳಿದ. ರಾಜಲಕ್ಷ್ಮಿ ಆದಷ್ಟು ಸಮಾಧಾನದಿಂದಿರಲು ಪ್ರಯತ್ನಿಸಿದಳು. ಆದರೆ ಇನ್ನು ಒಂದು ಆತಂಕ ಕಾಡಲಾರಂಭಿಸಿತು. ಹೆಂಡತಿಯ ಮೇಲಿನ ಕೋಪಕ್ಕೆ ಅವಳನ್ನು ಇಲ್ಲಿಯೇ ಬಿಟ್ಟು ಬಿಟ್ಟರೇ ಎದೆ ಢವಗುಟ್ಟಿತು

* * *

"ಅಕ್ಕಾ.... " ಮಂದಾಕಿನಿ ಕ್ಷೀಣ ಸ್ವರದಲ್ಲಿ ಕರೆದಾಗ, ರಾಜಲಕ್ಷ್ಮಿ ತಿರುಗಿದಳು. ಅಡಿಗೆ ಮನೆಯ ಬಾಗಿಲಿಗೆ ಒರಗಿ ನಿಂತಿದ್ದಳು. ಅವಳ ಮುಖದ ಮೇಲಿನ ನೋವನ್ನು ಗಮನಿಸಿದಳು. ಒಂದು ರೀತಿಯ ಭಯ ಕಾಡಿತು. ಅವಳ ಬಳಿಗೆ ಧಾವಿಸಿದಳು.

"ಏನಾಗ್ತಿದೆ ಮಂದಾಕಿನಿ... ಹುಶಾರಾಗಿದೀರಿ ತಾನೇ"ಹಣೆಯ ಮೇಲೆ ಕೈಯನ್ನಿಟ್ಟಳು.

"ನೆನ್ನೆ ರಾತ್ರಿಯಿಂದ ಹೊಟ್ಟೆಯೊಳಗೆ ಮಗು ಮಿಸುಕಾಡಿಲ್ಲ, ನಂಗೆ ಭಯ ಆಗ್ತಿದೆ"

"ಆಂ ! ... ಈಗ ಹೇಳ್ತಿದೀರಲ್ಲ, ನಿಮಗೆ ಅಷ್ಟು ತಿಳಿಯಲ್ವಾ?.... ಮಗೂಗೆ ಏನಾದ್ರೂ ಹೆಚ್ಚು ಕಡಿಮೆ ಆಗಿದ್ರೆ ನಾನು ನಿಮ್ಮನ್ನು ಸುಮ್ಮನೆ ಬಿಡುಲ್ಲ..."

"ಡಾಕ್ಟರ ಹತ್ರ ಹೋಗೋಣ ಬರ್ತೀರಾ?..."

"ಗಂಡನೂ ಊರಿನಲ್ಲಿಲ್ಲ, ಡಾಕ್ಟರಿಗೆ ಮನೆಗೇ ಬರುವಂತೆ ಫೋನು ಮಾಡ್ತೀನಿ. ನೀವು ಒಂದ್ಕಡೆ ಕೂತ್ಕೊಳ್ಳಿ" ಎಂದು ಹೇಳಿ ಟೆಲಿಫೋನ್ ಇದ್ದೆಡೆಗೆ ಬಂದಳು. ಡಾಕ್ಟರಿಗೆ ಫೋನು ಮಾಡಿ ಮಾತನಾಡಿದಳು. ಇಪ್ಪತ್ತು ನಿಮಿಷಗಳೊಳಗೆ ಡಾಕ್ಟರ್ ಮನೆಗೆ ಬಂದಿದ್ದಳು. ಮಂದಾಕಿನಿಯನ್ನು ಪರೀಕ್ಷೆ ಮಾಡಿದಳು. ಮುಖದಲ್ಲಿ ಗಾಬರಿ ಇರಲಿಲ್ಲ, ಮಂದಹಾಸವಿತ್ತು.

"ಗಾಬರಿ ಪಡಬೇಕಾದ್ದೇನಿಲ್ಲ, ಮಗು ಆರಾಮವಾಗಿ ನಿದ್ದೆ ಮಾಡಿದೆ... ಉಸಿರಾಟ ಸ್ಪಷ್ಟವಾಗಿ ಕೇಳ್ತಿದೆ..... ಸಾಯಂಕಾಲವೋ, ನಾಳೆಯೋ ನರ್ಸಿಂಗ್ ಹೋಂಗೆ ಬನ್ನಿ. ಮತ್ತೊಮ್ಮೆ ಎಲ್ಲವನ್ನು ಪರೀಕ್ಷೆ ಮಾಡ್ತೀನಿ... ಯಾವ ಆತಂಕವೂ ಬೇಡ" ಎಂದು ಮತ್ತೊಮ್ಮೆ ಹೇಳಿದಳು.

ಆಕೆ ಅತ್ತ ಹೋದ ಕೂಡಲೇ, ರಾಜಲಕ್ಷ್ಮಿ ಮಂದಾಕಿನಿಯ ಕಡೆಗೆ ತಿರುಗಿದಳು.

"ನನ್ನ ಜೀವಾನೇ ಹೊರಟು ಹೋಗಿತ್ತಲ್ಲ ಮಂದಾಕಿನಿ. ಹೀಗಾ ಹೆದರಿಸೋದು?.."

"ನನಗೂ ಭಯ ಆಗಿತ್ತು ಅಕ್ಕಾ... ಮಗೂಗೆ ಏನಾಗಿದೆಯೋ ಅಂತ ಹೆದರಿಬಿಟ್ಟಿದ್ದೆ."

"ಏನೇನೋ ಯೋಚಿಸ್ತೀರಿ. ಅದು ಮಗುವಿನ ಮೇಲೆ ಪರಿಣಾಮ ಬೀರುತ್ತೆ.... ರಾಮಾಯಣ, ಮಹಾಭಾರತ, ಪುರಾಣ ಪುಣ್ಯಕಥೆಗಳನ್ನು ಓದಿ. ರೂಮಿನ ಗೂಡಿನಲ್ಲಿ ಬೇಕಾದಷ್ಟು ಇವೆ..."

'ಹುಂ'. ಎಂದಷ್ಟೇ ಹೇಳಿ ಮಂದಾಕಿನಿ ರೂಮಿಗೆ ಹೋಗಿ, ಮಂಚದ ಮೇಲೆ ಕುಳಿತಳು.

ಅದೇ ಸಾಯಂಕಾಲ, ರಾಜಲಕ್ಷ್ಮಿ ತನ್ನೊಂದಿಗೆ ಮಂದಾಕಿನಿಯನ್ನು ನರ್ಸಿಂಗ್ ಹೋಮಿಗೆ ಕರೆದೊಯ್ದಳು. ಅವಳನ್ನು ಮತ್ತೊಮ್ಮೆ ಪರೀಕ್ಷಿಸಿದ ಡಾಕ್ಟರು ಎಂದಳು.

"ಇನ್ನೊಂದು ವಾರದೊಳಗೆ ಡೆಲಿವರಿ ಆಗುತ್ತೆ... ಯಾವುದಕ್ಕೂ ಅವರು ಇಲ್ಲಿರುವುದೇ ಒಳ್ಳೆಯದು. ಇವತ್ತೇ ಅಡ್ಮಿಟ್ ಮಾಡ್ಕೊಳ್ತೀವಿ" ಎಂದಳು.

"ನನ್ನ ಗಂಡನೂ ಊರಿನಲ್ಲಿಲ್ಲ. ಯಾವುದನ್ನು 'ಸಿದ್ಧ ಮಾಡಿಕೊಂಡಿಲ್ಲ."

"ಪರವಾಗಿಲ್ಲ, ನಾನು ಅವರನ್ನ ಅಬ್ಸರ್ವೇಶನ್‌ನಲ್ಲಿಟ್ಟುಕೊಂಡಿರ್ತೀನಿ.... ಸ್ವಲ್ಪ ಬಿ.ಪಿ. ಹೆಚ್ಚಿರುವ ಹಾಗಿದೆ. ಏನಾದ್ರೂ ಮಾತುಕತೆ ನಡೀತಾ?"

ರಾಜಲಕ್ಷ್ಮಿ ನಡೆದಿದ್ದ ಮಾತಕತೆಗಳನ್ನು ತಿಳಿಸಿದಳು. "ನೀವೇ ಇವರಿಗೆ ತಿಳುವಳಿಕೆಯನ್ನು ಹೇಳ್ಬೇಕು. ಮಗು ಅವರದ್ದು ಹೇಗಾಗುತ್ತೆ ನೀವೇ ಹೇಳಿ..."

"ಸರಿ ನಾನು ಮಾತಾಡ್ತೀನಿ.... ನೀವು ನಿಮ್ಮ ಗಂಡನಿಗೆ ಫೋನು ಮಾಡಿ, ಆದಷ್ಟು ಬೇಗ ಬರುವಂತೆ ತಿಳಿಸಿ... ಎಂದು ಹೇಳಿ, ಮಂದಾಕಿನಿಯನ್ನು ಅಡ್ಮಿಟ್ ಮಾಡಿಕೊಂಡು, ಅವಳನ್ನು ಮನೆಗೆ ಕಳಿಸಿದಳು." ರಾಜಲಕ್ಷ್ಮಿ ಗಂಡನಿಗೆ ತಕ್ಷಣವೇ ಫೋನು ಮಾಡಿದಳು.

* * *

"ನಾಲ್ಕು ದಿನಗಳ ನಂತರ ಮಂದಾಕಿನಿಗೆ ಹೆಣ್ಣು ಮಗು ಹುಟ್ಟಿತು. ಮಗು ಬೆಳ್ಳಗೆ ಮುದ್ದಾಗಿತ್ತು. ರಾಜಲಕ್ಷ್ಮಿ ಮಗುವನ್ನು ಕಣ್ಣರಳಿಸಿ ನೋಡಿದಳು. ತನ್ನ ಮಗು ! ತನ್ನ ರಕ್ತವನ್ನು ಹಂಚಿಕೊಂಡು ಹುಟ್ಟಿರುವ ಮಗು ! ಆದರೆ ಮರುಕ್ಷಣವೇ ಮಂಕಾದಳು. ಮಗುವನ್ನು ಹೆತ್ತಿರುವವಳು ಮಂದಾಕಿನಿ... ಮುದ್ದಾಗಿರುವ ಮಗುವನ್ನು ಇವಳು ತನಗೇ ಬೇಕಂದು ಹಠ ಹಿಡಿದರೆ?..."

ಗಂಡ ಹೆಂಡತಿ ಇಬ್ಬರೂ ಡಾಕ್ಟರ ಬಳಿ ಮಾತನಾಡಿದರು. ಅವಳು ಧೈರ್ಯ ಹೇಳಿದಳು. "ನೀವು ಏನೂ ಯೋಚನೆ ಮಾಡ್ಬೇಡಿ. ನಾನು ಕೆಲವು ಲೀಗಲ್ ಪೇಪರ್ಸ್‌ಗೆ ಅವಳ ಸಹಿಯನ್ನು ಹಾಕಿಸಿಕೊಂಡಿದ್ದೇನೆ. ಅವಳ ಹತ್ರ ಮಾತನ್ನು ಆಡಿದೀನಿ. ಎಷ್ಟಾಗಲೀ ಪ್ರಸವ ವೇದನೆಯನ್ನು ಅನುಭವಿಸಿರುವ ತಾಯಿ. ಅವಳ ಮನಸ್ಸಲ್ಲಿ ಏನಿದೆಯೋ ಅದನ್ನು ಆಡಲಿ ಬಿಡಿ. ನಾಲ್ಕು ದಿನ ಕಳೆದ ನಂತರ ವಾಸ್ತವದ ಅರಿವಾಗುತ್ತದೆ. ಆಗ ಮನಸ್ಸು ಬದಲಾಗುತ್ತದೆ. ನೋಡ್ತಿರಿ... " ಡಾಕ್ಟರ ಮಾತಿನಿಂದ ರಾಜಲಕ್ಷ್ಮಿ ಸಮಾಧಾನಗೊಂಡಳು. ಇಬ್ಬರೂ ಮತ್ತೆ ವಾರ್ಡಿಗೆ ಬಂದರು. ಮಂದಾಕಿನಿ ಯಶವಂತನನ್ನು ಕಂಡು ನಾಚಿದಳು. ಅವನು ಮಗುವನ್ನು

ನೋಡಿ, ಹೊರಕ್ಕೆ ಹೊರಟು ಹೋಗಿದ್ದ. ಮಂದಾಕಿನಿ ರಾಜಲಕ್ಷ್ಮಿಯನ್ನು ಕೇಳಿದಳು.

"ಅಕ್ಕಾ ಮಗುವನ್ನು ನೋಡಿದ್ರಾ ... ಚೈತ್ರಾ ಹೇಗಿದಾಳೆ ಅಂತ ಅನ್ನಿಸ್ತು ?"

"ತುಂಬಾ ಥ್ಯಾಂಕ್ಸ್ ಮಂದಾಕಿನಿ. ನಮಗೋಸ್ಕರ ತುಂಬಾ ಶ್ರಮವನ್ನೇ ತಗೊಂಡಿರಿ. ಈ ಋಣವನ್ನು ಹೇಗೆ ತೀರಿಸ್ತೀನೋ?..."

"ಋಣದ ಮಾತೆಲ್ಲಾ ಯಾಕೆ ? ಚಿದೂ ಹೇಗಿದಾನೆ! ಅವನನ್ನು ಕರ್‍ಕೊಂಡು ಬರ್‍ಲಿಲ್ವಾ? ಅವನು ನನ್ನನ್ನ ಕೇಳಲಿಲ್ವಾ?..... ನನ್ನನ್ನ ಮರೆತೇ ಬಿಟ್ಟನೋ ಏನೋ?" ಗೊಣಗಿಕೊಂಡಳು.

"ಕೇಳ್ತಾನೆ....ಆದರೆ ಹಠ ಮಾಡುಲ್ಲ. ಒಳ್ಳೆಯ ಮಗು. ಶರತ್‌ನೇ ತುಂಟ. ಆದರೂ ಇಬ್ಬರೂ ಒಟ್ಟಾಗಿ ಆಟ ಆಡಿಕೊಂಡಿದಾರೆ.... ನಿಮಗೆ ತೊಂದರೆಯಾಗಬಾರದು ಅಂತ ಅವನನ್ನು ಕರ್‍ಕೊಂಡು ಬರ್‍ಲಿಲ್ಲ"

"ಡಿಸ್ಚಾರ್ಜ್ ಯಾವಾಗ ಮಾಡ್ತಾರೆ ಅಂತ ಕೇಳಿ. ನಾನು ಮನೆಗೆ ಬರ್ತೀನಿ. ನಾಲ್ಕೈದು ದಿನಗಳಿಂದ ಇದ್ದು ಬೇಸರವಾಗಿದೆ."

"ಆಯ್ತು ಮಾತಾಡ್ತೀನಿ."

"ನಿಮ್ಮ ಯಜಮಾನ್ರು ಮಗುವನ್ನು ಸರಿಯಾಗಿ ನೋಡಿದ್ರಾ?... ಅವರ ಹಾಗೇ ಇದಾಳೆ ಅಂತ ಡಾಕ್ಟ್ರು ಹೇಳಿದ್ರು.... ಹೌದಾ ಅಕ್ಕಾ ?"

"ಹುಂ. ಹಾಗೇ ಅನ್ನಿಸುತ್ತೆ. ಯಾಕೆ ನೀವು ನೋಡ್ಲಿಲ್ವಾ ? ಮಂದಾಕಿನಿ?"

"ಇಲ್ಲ ಸರಿಯಾಗಿ ನೋಡ್ಲಿಲ್ಲ. ನೋಡಿದ್ರೆ ಎಲ್ಲಿ ಮಮತೆ ಅಂಟಿಕೊಂಡು ಬಿಡುತ್ತೋ ಅಂತ ಹೆದರಿಬಿಟ್ಟೆ. ರಾಜಲಕ್ಷ್ಮಿ ಗಂಭೀರಳಾದಳು. ಅರೆ ನಿದ್ದೆಯಲ್ಲಿ ನನ್ನ ಗಂಡ, ನನ್ನ ಎದುರಿಗೆ ಬಂದ ಹಾಗೆ, ಬೈದ ಹಾಗೆ ಏನೇನೋ ಕನಸುಗಳು. ಅವರು ಈ ಮಗುವನ್ನು ಸ್ವೀಕರಿಸುವುದಿಲ್ಲ. ನನ್ನ ಶೀಲದ ಮೇಲೆ ಕಳಂಕ ಹೊರಿಸ್ತಾರೆ... ಈ ಮಗು ನಿಮ್ಮದು. ನನ್ನ ಕೆಲಸ ಮುಗಿಯಿತು.... ಇನ್ನು ನಾನು ಸ್ವತಂತ್ರಳು...."

"ಏನು ಹೀಗೆ ಹೇಳ್ತೀರಿ ?.... ಮಗುವಿಗೆ ಹಾಲೂಡಿಸುವುದಿಲ್ವಾ !"

"ಫೀಡಿಂಗ್ ಬಾಟಲಿ ತಂದು ಅಭ್ಯಾಸ ಮಾಡಿಸಿ...."

"ಅದು ಒಳ್ಳೆಯದಲ್ಲ, ತಾಯಿಯ ಹಾಲು ಮಗುವಿಗೆ ಬೇಕಲ್ವಾ!..."

"ನಾನು ತಾಯಿ ?.... ಬರಿ ತಾಯಿಯಲ್ಲ ಬಾಡಿಗೆ ತಾಯಿ... ಇನ್ನು ನನಗೂ ಮಗುವಿಗೂ ಯಾವ ಸಂಬಂಧವಿಲ್ಲ" ಮಂದಾಕಿನಿ ಅತ್ತಳು.

"ಅಳಬೇಡ್ರಿ .... ನಂಜಾಗುತ್ತೆ. ಹೆಚ್ಚಿಗೆ ಮಾತಾಡಿಸ್ಬೇಡಿ ಅಂತ ಡಾಕ್ಟ್ರು ಹೇಳಿದ್ದಾರೆ" ಅಂತ ನರ್ಸು ಬಂದು ಹೇಳಿದಾಗ ಮಾತು ನಿಂತಿತು. ರಾಜಲಕ್ಷ್ಮಿ ಮಂಕಾಗಿದ್ದಳು. ಮಂದಾಕಿನಿ ಮುಖವನ್ನು ಅತ್ತ ತಿರುಗಿಸಿಕೊಂಡಿದ್ದಳು. ತೊಟ್ಟಿಲಲ್ಲಿ ಮಲಗಿದ್ದ ಮಗು ಕಿರ್ ಅಂತ ಸಣ್ಣ ದನಿಯಲ್ಲಿ ಅಳತೊಡಗಿತು. ನರ್ಸ್ ಮಗುವನ್ನೆತ್ತಿ ಮಂದಾಕಿನಿಯ ಮಡಿಲಿನಲ್ಲಿ ಮಲಗಿಸಿದಳು.

ಮಂದಾಕಿನಿ, ರಾಜಲಕ್ಷ್ಮಿಯ ಕಡೆ ನೋಡಿದಳು. ಅವಳಿಗೆ ಅಲ್ಲಿಯೇ ನಿಂತಿರುವ ಮನಸ್ಸಾಗದೇ ವಾರ್ಡಿನಿಂದ ಹೊರಬಂದಳು. ಮಗುವಿನ ಅಳು ನಿಂತಿತು. ರಾಜಲಕ್ಷ್ಮಿ ನಿರಾಳವಾದ ನಿಟ್ಟುಸಿರನ್ನು ಬಿಟ್ಟಳು. ಜೊತೆಗೇ ಭಾರವಾದ ಬಿಸಿ ಉಸಿರನ್ನು ಹೊರ ಚೆಲ್ಲಿದಳು.

ಹಾಲನ್ನು ಹೀರುವ ಮಗುವಿನ ಮುಖವನ್ನೇ ಮಂದಾಕಿನಿ ತದೇಕವಾಗಿ ನೋಡಿದಳು. ತಲೆಯ ಮೇಲೆ ಮೃದುವಾಗಿ ಕೈಯಾಡಿಸಿದಳು. ಎದೆಯ ಭಾರ ಕಡಿಮೆ ಆಗಿತ್ತು. ಮಗು ನೆಮ್ಮದಿಯಿಂದ ನಿದ್ರಿಸಿತು. ನರ್ಸು ಬಂದು ಮಗುವನ್ನೆತ್ತಿಕೊಂಡು ತೊಟ್ಟಿಲಲ್ಲಿ ಮಲಗಿಸಿದಳ. ಮಂದಾಕಿನಿ ದಿಂಬಿಗೆ ತಲೆ ಕೊಟ್ಟು ಮಲಗಿದಳು. ಮತ್ತೆ ಮಂಥನ ಶುರುವಾಗಿತ್ತು.

ಮೂರು ದಿನಗಳು ಕಳೆದ ನಂತರ ಮಂದಾಕಿನಿಯನ್ನು ಮಗುವನ್ನು ಮನೆಗೆ ಕರೆತಂದರು. ರಾಜಲಕ್ಷ್ಮಿ ಸಂಭ್ರಮದಿಂದ ಮಗುವಿಗೆ ಆರತಿಯನ್ನೆತ್ತಿ ಒಳಕ್ಕೆ ಬರಮಾಡಿ ಕೊಂಡಳು.

"ಗಾಳೀಲಿ ಹೆಚ್ಚು ಹೊತ್ತು ನಿಂತ್ಕೋಬೇಡಿ.... ಶೀತ ಆಗುತ್ತೆ." ಎಂದು ಹೇಳಿ, ಅವಳಿಗಾಗಿ ಸಿದ್ದಮಾಡಿಟ್ಟಿದ್ದ ಕೋಣೆಗೆ ಕರೆದೊಯ್ದಳು. 'ಅಮ್ಮಾ' ಎನ್ನುತ್ತಾ ಓಡಿ ಬಂದ ಚಿದಾನಂದನನ್ನು ಹಿಡಿದು ನಿಲ್ಲಿಸಿದಳು.

"ಅಮ್ಮನ ಹತ್ರ ಒಂದು ಪುಟ್ಟ ಪಾಪು ಇದೆ ಅಲ್ವಾ ! ನೀನೀಗ ದೊಡ್ಡವನಾಗಿದೀಯ. ಅಮ್ಮಂಗೆ ತೊಂದರೆ ಕೊಡಬಾರ್ದು. ಚಾಕ್ಲೇಟ್ ಕೊಡ್ತೀನಿ, ಹೊರಗೆ ಆಡ್ಕೋಹೋಗು..." ಎಂದಳು.

"ಅಕ್ಕಾ, ಒಂದೇ ಒಂದು ಸಾರಿ ಚಿದೂನ ತಬ್ಬಿ ಮುದ್ದಾಡ್ತೀನಿ. ವಾರವಾಯ್ತು ಅವನನ್ನು ಮಾತನ್ನೇ ಆಡಿಸಿಲ್ಲ" ಮಂದಾಕಿನಿ ಗೋಗರೆದಳು.

"ಏನಾದ್ರೂ ಮಾಡ್ಕೊಳ್ಳಿ... ನಾನು ನಿಮ್ಮ ಒಳ್ಳೇದಕ್ಕೇ ಹೇಳಿದ್ದು" ರಾಜಲಕ್ಷ್ಮಿ ಕೋಪಿಸಿಕೊಂಡು ಹೊರಗೆ ನಡೆದಳು. ಚಿದಾನಂದ ತಾಯಿಯ ಬಳಿಗೆ ಬಂದ.

"ಕಂದಾ, ಹೇಗಿದೀಯೋ...?" ಎನ್ನುತ್ತಾ ಮುದ್ದಿಸಿದಳು. ಕಣ್ಣಿನಿಂದ ಬಳಬಳ ನೀರು ಹರಿದಿತ್ತು. ಗಂಡನ ನೆನಪಾಗಿತ್ತು.

ಮಗುವಿನ, ಬಾಣಂತಿಯ ಉಪಚಾರಗಳನ್ನು ರಾಜಲಕ್ಷ್ಮಿ ಶ್ರದ್ಧೆಯಿಂದ ನಿರ್ವಹಿಸಿದಳು. ಮಗು ದಿನದಿನಕ್ಕೆ ಬೆಳೆಯಿತು. ಮಗುವಿನ ಮುಖವನ್ನು ನೋಡುತ್ತಾ ರಾಜಲಕ್ಷ್ಮಿ ತನ್ನನ್ನು ತಾನೇ, ತಾನೆಂಥ ವಂಚಿತೆ ಎಂದು ಹಳಿದುಕೊಳ್ಳುತ್ತಿದ್ದಳು. ಆದರೂ ದುಗುಡವನ್ನು ಬದಿಗಿಟ್ಟು ಮಗುವನ್ನು ತುಂಬಾ ಹಚ್ಚಿಕೊಂಡಳು. ಮಂದಾಕಿನಿಗೆ ಇದೆಲ್ಲ ಅರ್ಥವಾಗದೇ ಏನಿರಲಿಲ್ಲ. ಇದೆಲ್ಲಾ, ಮಗುವನ್ನು ನನ್ನಿಂದ ದೂರ ಮಾಡುವ ಯೋಜನೆ ಎಂದು ಅರಿತಿತ್ತಳು. ಮಗುವಿಗೆ ತಾನು ತನ್ನ ಹಾಲನ್ನು ಕುಡಿಸುವವರೆಗೂ, ಯಾರೂ ನನ್ನಿಂದ ಈ ಮಗುವನ್ನು ದೂರ ಮಾಡಲು ಸಾಧ್ಯವಿಲ್ಲ ಎಂದುಕೊಂಡಿದ್ದಳು.

* * *

ಆಫೀಸಿಗೆ ಹೋದ ಸ್ವಲ್ಪ ಹೊತ್ತಿನಲ್ಲೇ ಯಶವಂತ ಮನೆಗೆ ಫೋನು ಮಾಡಿದ್ದ ರಾಜಲಕ್ಷ್ಮಿಯೇ ಮಾತನ್ನಾಡಿದಳು.

"ಮಂದಾಕಿನಿ ಏನು ಮಾಡ್ತಿದಾರೆ? ಅವರ ಗಂಡನ್ನ ಬಿಡುಗಡೆ ಮಾಡಿದಾರೆ.. ಅವನು ಇಲ್ಲಿಗೆ ಬಂದಿದ್ದ ಸಾಯಂಕಾಲ ಆವನು ಮನೆಗೆ ಬರ್ತಾನಂತೆ.."

"ಅವನ್ಯಾಕ್ರೀ ಬರ್ಬೇಕು?... ಜೈಲಿನಲ್ಲಿದ್ದವರಿಗೆಲ್ಲಾ ನಮ್ಮ ಮನೇಲಿ ಪ್ರವೇಶ ಇಲ್ಲ ಅಂತ ಹೇಳ್ಬೇಕಾಗಿತ್ತು... ಒಂದು ವರ್ಷದ ಅವಧಿ ಮುಗೀತಾ?"

"ಶಿಕ್ಷೆಯ ಅವಧೀನ ಕಡಿಮೆ ಮಾಡಿರಬಹುದು. ನಾನು ಕೇಳಿಲ್ಲ, ಮಂದಾಕಿನಿಗೆ ಹೇಳಿರ್ಬೇಕು ಅಲ್ವಾ ? ಅದಕ್ಕೆ ಫೋನು ಮಾಡ್ದೆ"

"ಒಳ್ಳೇದೇ ಆಯ್ತು. ಇದೇ ನೆವದಲ್ಲಿ ಈಕೆ ಮನೆಯಿಂದ ಹೋದರೆ ಸಾಕಾಗಿದೆ..."

"ಮಗು ಇನ್ನೂ ಚಿಕ್ಕದಲ್ಲ ರಾಜೀ.... ಅವಳ ಅವಶ್ಯಕತೆ ಇಲ್ವಾ?..."

"ಹಾಲು ಕುಡಿಸೋಕೆ ಅಂತ ಅವಳನ್ನು ಉಳಿಸಿಕೊಂಡ್ರೆ, ಅವನೂ ಇಲ್ಲೇ ಉಳಿದು ಬಿಡ್ತಾನೆ. ಬೇಡವೇ ಬೇಡ... ಫೀಡಿಂಗ್ ಬಾಟಲಿಯಲ್ಲಿ ಕುಡಿಸುವುದನ್ನು ಅಭ್ಯಾಸ ಮಾಡಿದೀನಿ. ಏನೂ ಕಷ್ಟವಾಗುಲ್ಲ"

"ಏನೋ ನಿನ್ನಿಷ್ಟ. ಡಾಕ್ಟರನ್ನು ಒಂದ್ಮಾತು ಕೇಳು. ಮಗು ನಮ್ಮದು ಅಂತ ಅವಳು ಅವಳ ಗಂಡನಿಗೆ ಹೇಳಲಿ. ಸುಮ್ಮನೇ ರಂಪ ಯಾಕೆ?"

"ಸರಿ, ನಾನು ಹೇಳ್ತೀನಿ." ಮಾತನ್ನು ಮುಗಿಸಿ ಮಂದಾಕಿನಿಯ ರೂಮಿಗೆ ಬಂದಳು. "ಒಂದು ಒಳ್ಳೆಯ ಸುದ್ಧಿ ನಿಮಗೆ " ಎಂದಳು ಹರ್ಷವನ್ನು ತೋರುತ್ತಾ. ಏನು ಎಂಬಂತೆ ನೋಡಿದಳು. "ನಿಮ್ಮ ಗಂಡನಿಗೆ ಜೈಲಿನಿಂದ ಬಿಡುಗಡೆಯಾಗಿದೆಯಂತೆ."

"ಹೌದಾ!.... ಬಂದಿದಾರಾ ?" ಅವಳು ಸಂಭ್ರಮದಿಂದ ಎದ್ದು ಕೂತಳು.

"ಇಲ್ಲ, ಇಲ್ಲಿಗೆ ಬಂದಿಲ್ಲ, ಆಫೀಸಿಗೆ ಬಂದಿದ್ರಂತೆ. ಒಂದು ಉಪಕಾರ ಮಾಡಿ. ಮಗುವಿನ ಬಗ್ಗೆ ಅವರಿಗೆ ತಿಳಿಸಲೇಬೇಡಿ... "

"ಅಕ್ಕ... ನಾನು ಅವರ ಪತ್ನಿ, ಅವರಿಗೆ ಅನುಮಾನ ಬರದೇ ಇರುತ್ತಾ ?..." ರಾಜಲಕ್ಷ್ಮಿಗೆ ಏನು ಹೇಳಬೇಕೆಂಬ ಉತ್ತರ ಹೊಳೆಯಲಿಲ್ಲ. "ಅಕ್ಕ ನೀವು ಹೆದರಬೇಡಿ. ನಾನು ಅವರನ್ನು ದೂರದಿಂದಲೇ ಮಾತನಾಡಿಸಿ ಕಳಿಸಿಬಿಡ್ತೀನಿ..."

"ಅಂದ್ರೆ.... ನೀವು ನಿಮ್ಮ ಗಂಡನ ಜತೇಲಿ ಹೋಗುಲ್ವೇ...."

"ನಾನು ಹೊರಟು ಹೋದ್ರೆ ಈ ಮಗು ಬೆಳೆಯೋದು ಹೇಗೆ?"

"ಹೇಗೋ ಬೆಳೆಯುತ್ತೆ. ನಾವು ನೋಡ್ಕೋತೀವಿ... ನೀವು ಹೊರಟು ಹೋಗಿ..."

"ಮತ್ತೆ ! ಈ ಚಿದಾನಂದ..."

"ನಿಮ್ಮ ಯಜಮಾನ್ರು ಬಿಟ್ಟು ಹೋಗೋಕೆ ಸಿದ್ಧವಾಗಿದ್ರೆ ಬಿಟ್ಟು ಹೋಗಿ. " ಮಂದಾಕಿನಿ ಪೆಚ್ಚಾದಳು. ಗಂಡ ಈ ದಿನ ಬಾರದಿದ್ದರೆ ಚೆನ್ನಾಗಿರುತ್ತದೆಂದೇ ಚಿಂತಿಸಿದಳು... ಅವರೆ, ಅವನು ಹೆಂಡತಿಯನ್ನು ಮಗುವನ್ನು ನೋಡುವ ಕಾತುರದಲ್ಲಿದ್ದ. ಸಾಯಂಕಾಲ ಕತ್ತಲಾಗುವ

ಸಮಯಕ್ಕೆ ಮನೆಗೆ ಬಂದ. ಯಶವಂತ ಇನ್ನು ಮನೆಗೆ ಬಂದಿರಲಿಲ್ಲ. ಅವನಿಗೆ ಬಾಗಿಲನ್ನು ತೆರೆದವಳು ರಾಜಲಕ್ಷ್ಮಿಯೇ. ಅವಳ ಕಂಕುಳಲ್ಲಿ ಶರತ್ ಇದ್ದ ಅವಳ ಕೈ ಬೆರಳು ಹಿಡದು ಚಿದಾನಂದ ನಿಂತಿದ್ದ. ಚಿದಾನಂದನಿಗೆ ಅವನ ಅಪ್ಪನ ಗುರುತು ಸಿಗಲಿಲ್ಲ.

''ಏನೋ ಚಿದು... ಹೇಗಿದಿಯೋ ... ಬಾರೋ...'' ಎನ್ನುತ್ತಾ ಬಂದ ಅಪ್ಪನಿಂದ ಅವನು ದೂರ ಸರಿದ. ''ಅಮ್ಮ ಎಲ್ಲೋ ಕರೀ ಅವಳನ್ನು...'' ಮಗನಿಗೆ ಹೇಳಿದ.

''ನೀವು ಕೂತ್ಕೊಳ್ಳಿ, ನಾನು ಮಂದಾಕಿನೀನ ಕಳಿಸ್ತೀನಿ'' ರಾಜಲಕ್ಷ್ಮಿ ಎಂದಳು.

''ನಿಮ್ಮ ಯಜಮಾನ್ರು ಇನ್ನು ಬಂದಿಲ್ವಾ ...'' ಅಷ್ಟರಲ್ಲಿ ಅವನ ಧ್ವನಿಯನ್ನು ಕೇಳಿ ಮಂದಾಕಿನಿ ಆಚೆಗೆ ಬಂದಿದ್ದಳು. ಮೈತುಂಬಾ ಸೆರಗನ್ನು ಹೊದ್ದಿದ್ದಳು. ಅವಳನ್ನು ಕಂಡು ಅವನು ಉದ್ಗಾರವೆತ್ತಿದ.

''ಇದೇನೇ ಇದು ಹೀಗೆ ಬಿಳುಚಿ ಹೋಗಿದೀಯ.. ಖಾಯಿಲೆ ಬಿದ್ದೋರ ಥರಾ?''

''ನಾನಿನ್ನು ಸತ್ತಿಲ್ಲ, ನಿಮಗೋಸ್ಕರಾನೇ ಕಾಯ್ತಿದ್ದೆ '' ಅವಳು ತಕ್ಷಣವೇ ನುಡಿದಳು.

ರಾಜಲಕ್ಷ್ಮಿ ಅವರಿಬ್ಬರನ್ನೇ ಮಾತಿಗೆ ಬಿಟ್ಟು ತಾನು ಒಳಸರಿದಳು. ''ಕೋಪ ಮಾಡ್ಕೋ ಬೇಡ್ವೆ ಮಂದಾ... ಪೋಲಿಸರು ನನ್ನನ್ನು ಹಿಡಿದು ಬಿಟ್ಟರು.''

''ಅದೇ , ಅದೇನಂಥ ಹೀನ ಕೆಲಸ ಮಾಡಿದ್ರಿ ... ಹೆಂಡತಿ, ಮಗ, ಇದಾರೆ ಅನ್ನೋ ಪರಿಜ್ಞಾನ ಬೇಡ್ವಾ?... ಬಸ್ನಲ್ಲಿ ಕೂರಿಸಿ, ನಾಪತ್ತೆಯಾಗಿ ಹೋದ್ರೆ, ನಾನು ಏನಂದುಕೊಳ್ಬೇಕು?'' ಏರುಧ್ವನಿಯಲ್ಲಿ ಕೇಳಿದಳು.

''ಅದೆಲ್ಲಾ ಮುಗೀತಲ್ಲ, ನಾನೀಗ ಬಂದಿದೀನಲ್ಲ ... ನನ್ನ ಜೊತೆ ಹೊರಡು...''

''ಇಲ್ಲ, ನಾನು ಬರುಲ್ಲ, ಮತ್ತೆ ನೀವು ನನ್ನನ್ನು ಬಿಟ್ಟು ಹೋಗುಲ್ಲ ಅಂತ ಏನು ಗ್ಯಾರಂಟಿ?....''

''ಯಾಕೆ ಬರುಲ್ಲ !... ಇಲ್ಲಿಯ ಸುಖ ಹೆಚ್ಚಾಯ್ತಾ ?''

''ಏನು ಸುಖ ? ....ಎಷ್ಟು ಹೀನಾಯವಾಗಿ ಬದುಕಿದೀನಿ ಅಂತ ನಿಮ್ಗೇನು ಗೊತ್ತು?''

''ಮತ್ತೆ ?... ಇವನ ಜೊತೆ ಇಲ್ಯಾಕೆ ಇದೀಯ?.... ನಮ್ಮಣ್ಣನ ಮನೆಗೆ ಹೋಗಬೇಕಾಗಿತ್ತು... ಮಹಿಳಾ ಆಶ್ರಮಕ್ಕೆ ಹೋಗ್ಬೇಕಾಗಿತ್ತು ?''

''ಅಣ್ಣ ಎಲ್ಲಿದಾರೋ ಯಾರಿಗ್ಗೊತ್ತು? ಅವರ ಅಡ್ರೆಸ್ ಇಲ್ಲ, ಪೋನು ನಂಬರ್ರು ಇಲ್ಲ ಮಹಿಳಾ ಆಶ್ರಮಕ್ಕೆ ಹೋಗುಕ್ಕೆ ನಾನೇನು ಅನಾಥೇನಾ?...''

''ಏನಾಗ್ತಿತ್ತು ? ಇಲ್ಲಿ ಇವನನ್ನು ಬಿಟ್ಟು ಹೋಗೋಕೆ ಮನಸ್ಸಿರಲಿಲ್ಲವೇನೋ?...''

''ನಾಲಿಗೆ ಹಿಡಿದು ಮಾತನಾಡಿ... ಅವರು ದೇವರಂಥ ಮನುಷ್ಯರು...''

''ಹುಂ, ದೇವರಂಥ ಮನುಷ್ಯ! .... ನಿನ್ನಂಥ ಪರಿಚಯವಿಲ್ಲದವರನ್ನು ತನ್ನ ಮನೇಲ್ಯಾಕೆ

ಕರೆತಂದಿಟ್ಟುಕೊಂಡ? ಇವನ ಹೆಂಡ್ತಿಗಾದ್ರೂ ತಿಳಿವಳಿಕೆ ಬೇಡ್ವಾ ?''

''ನೋಡಿ ಹೀಗೆಲ್ಲ ಮಾತನಾಡ್ಬೇಡಿ... ಇವರು ಮರ್ಯಾದಸ್ಥ ಜನ.'

''ನಾನು ಮರ್ಯಾದೆ ಕೆಟ್ಟವನು... ಆದರೆ ನೀನು ನನ್ನ ಹೆಂಡ್ತಿ... ಸುಮ್ಮನೆ ನಡಿ... ನಮಗೆ ಈ ಮರ್ಯಾದಸ್ಥ ಜನರ ಸಹವಾಸಬೇಡ...''

''ಈಗ ಇದ್ದಕ್ಕಿದ್ದಂತೆ ಎಲ್ಲಿಗೆ ಹೋಗೋದು... ಅವರು ಇನ್ನು ಮನೆಗೆ ಬಂದಿಲ್ಲ''

''ಅವನಿಗೋಸ್ಕರ ಕಾಯಬೇಕಾಗಿಲ್ಲ, ಈ ಕ್ಷಣ ಬಂದರೆ ಸರಿ, ಇಲ್ಲದಿದ್ರೆ ಎಂದಿಗೂ ನಿನ್ನ ಮುಖವನ್ನು ನೋಡುಲ್ಲ, ಬೇರೆ ಮದವೆ ಮಾಡ್ಕೋತೀನಿ...'' ಮಂದಾಕಿನಿ ಬೆಪ್ಪಾದಳು. ಇದುವರೆಗೂ, ತನ್ನ ಬಗ್ಗೆ ಯಾವುದೇ ಪರಿವೆ ಇದ್ದಂತೆ ಕಾಣಲಿಲ್ಲ, ಈಗ ಇದ್ದಕ್ಕಿದ್ದಂತೆ ಬಂದು ಹುಕುಂ ತೋರಿಸ್ತಿದಾನಲ್ಲ ಅಂತ ಅನ್ನಿಸಿತು. ತಿರಸ್ಕಾರವೂ ಉಂಟಾಯಿತು.''

''ದುಡುಕ್ಬೇಡಿ. ನಿಧಾನವಾಗಿ ಮಾತ್ನಾಡಿ... ಇಷ್ಟು ದಿನಗಳವರೆಗೂ, ನಮ್ಮಿಬ್ಬರಿಗೂ ಈ ಮನೇಲಿ ರಕ್ಷಣೆಯನ್ನು ಕೊಟ್ಟಿದ್ದಾರೆ. ಅವರ ಋಣವನ್ನು ತೀರಿಸುವುದಿರಲಿ, ಒಂದು ಮಾತ ಹೇಳ್ಬಿಟ್ಟು ಹೋಗೋವಷ್ಟಾದರೂ ಕೃತಜ್ಞತೆ ಇರಬೇಕು....''

''ನೀನು ಈ ಮುಂಚೆ ಹೀಗಿರ್ಲಿಲ್ಲ, ಇಲ್ಲಿದ್ದುಕೊಂಡು ಬಹಳ ಬದಲಾಯಿಸಿ ಹೋಗಿದೀಯ.... ಈಗೇನು ನನ್ನ ಜೊತೆ ಬರ್ತೀಯೋ ಇಲ್ವೋ?....''

''ಸರಿ.... ಅಕ್ಕಂಗೆ ಹೇಳ್ಬಿಟ್ಟು ಬರ್ತೀನಿ... ಈಗ ಎಲ್ಲಿಗೆ ಹೋಗೋದು?...''

''ನಾನು ಹೊರಗೆ ಕಾಯ್ತಾ ಇರ್ತೀನಿ. .... ಬೇಗ ಹೇಳ್ಬಿಟ್ಟು ಬಾ......'' ಅವನು ಬೀದಿಗೆ ಹೋಗಿ ನಿಂತ. ಇವಳು ಒಳಕ್ಕೆ ಬಂದಳು. ಒಳ ಬಾಗಿಲಲ್ಲಿ ನಿಂತಿದ್ದ ರಾಜಲಕ್ಷ್ಮಿ ಮಾತುಗಳನ್ನು ಕೇಳಿಸಿಕೊಂಡಿದ್ದಳು. ರಾಜಲಕ್ಷ್ಮಿ ಸುಮ್ಮನೆ ನಿಂತಳು.

''ಅಕ್ಕಾ ... ಅವರ ಪರವಾಗಿ ಕ್ಷಮೆ ಕೇಳ್ತೀನಿ.... ದಯವಿಟ್ಟು ಕ್ಷಮಿಸಿ'' ಕೈಮುಗಿದಳು.

''ಪರವಾಗಿಲ್ಲ ಬಿಡಿ. ಅವರಿಗೆ ಏನೋ ಅಸಹಾಯಕತೆ, ಏನೋ ಅಸಹನೆ... ನಾವು ಏನು ಅಂತ ನಮಗೂ ಗೊತ್ತು. ನಿಮಗೂ ಗೊತ್ತು. ಸದ್ಯ ಈ ಮಾತುಗಳು ನನ್ನ ಗಂಡನ ಕಿವಿಗೆ ಬೀಳಲಿಲ್ಲವಲ್ಲ, ಅವರು ಮನೆಗೆ ಬರುವಷ್ಟರಲ್ಲಿ ನೀವು ಹೊರಟು ಬಿಡಿ....''

''ಹಾಗಾದ್ರೆ ನೀವೂ ಕಳಿಸಿ ಬಿಡ್ತೀರಾ ? ಒಂದ್ಮಾತೂ ಹೇಳುಲ್ವಾ !''

''ಏನಾದ್ರೂ ಹೇಳೋದನ್ನ ಕೇಳುವ ಸ್ಥಿತೀಲಿದ್ರೆ ಹೇಳಿ.... ಪ್ರಯತ್ನ ಪಡ್ತೀನಿ... ಈಗ ನೀವು ಅವರೊಂದಿಗೆ ಹೋಗೋದೇ ಸರಿ.... ನಿಧಾನವಾಗಿ ಮಾತನಾಡಿ ಮತ್ತೆ ಬನ್ನಿ....''

''ಮತ್ತೆ.....ಮಗು.....!''

''ಏನಿಲ್ಲದೇನೇ ಅಪವಾದ .... ಮಗುವಿನ ಬಗ್ಗೆ ಹೇಳಿದರೆ, ನಿಮ್ಮನ್ನು ಇಲ್ಲೇ ಬಿಟ್ಟು ಹೋಗಬಹುದು. ಅದೂ ಬೇಕು ಅಂತ ಅಂತೀರಾ ?''

''ಮತ್ತೆ ಚಿದು ? ...'' ಅವನನ್ನು ಬಿಟ್ಟು ಹೋಗ್ಲಾ ?

"ನಿಮ್ಮವರಿಗೆ ಒಪ್ಪಿಗೆ ಇದ್ದರೆ ಬಿಟ್ಟು ಹೋಗಿ. ಕಷ್ಟವೋ ಸುಖವೋ ಸಾಕ್ತೀವಿ..." ಒಂದ್ನಿಮಿಷ ತಡೀರಿ ಈಗ ಬಂದೆ ಎಂದು ಹೇಳಿ ತನ್ನ ರೂಮಿಗೆ ಹೋಗಿ, ಗಂಡ ತಂದಿಟ್ಟಿದ್ದ ಎರಡೂವರೆ ಸಾವಿರ ರೂಪಾಯಿಗಳನ್ನು ತಂದು ಅವಳ ಕೈಗಿತ್ತಳು. ಈ ಹಣವನ್ನು ಸದ್ಯಕ್ಕೆ ಇಟ್ಟುಕ್ಕೊಂಡಿರಿ.... ನೀವು ಇರುವ ಅಡ್ರೆಸ್‌ನ್ನು ತಿಳಿಸಿದರೆ, ಮತ್ತಷ್ಟು ಹಣವನ್ನು ಕಳಿಸ್ತೀವಿ ಎಂದಷ್ಟೇ ಹೇಳಿ, ಅರಿಶಿನ ಕುಂಕುಮವನ್ನು ರವಿಕೆ ಖಣವನ್ನು ಇಟ್ಟುಕೊಟ್ಟಳು

ಮಂದಾಕಿನಿ, ತನ್ನ ರೂಮಿಗೆ ಹೋಗಿ, ಮಗುವನ್ನು ಮುದ್ದಿಸಿ, ಲೊಚಲೊಚ ಮುತ್ತಿಟ್ಟು ಕಣ್ಣುಗಳನ್ನು ಒರೆಸಿಕೊಳ್ಳುತ್ತಾ ಕಿಟ್‌ಬ್ಯಾಗ್ ಹಿಡಿದು ಹೊರಬಂದಳು. ಅಸಹನೆಯಿಂದ ಕಾಯುತ್ತಾ ನಿಂತಿದ್ದ ಗಂಡನ ಕಡೆಗೆ ಮಗನನ್ನು ಎಳೆದುಕೊಂಡು ನಡೆದಳು. ರಾಜಲಕ್ಷ್ಮಿ ಒಳಬಾಗಿಲಲ್ಲೇ ನಿಂತಳು. ಮಂದಾಕಿನಿ ಒಮ್ಮೆ ಹಿಂತಿರುಗಿ ನೋಡಿ, ತಲೆ ತಗ್ಗಿಸಿ ಅವನೊಡನೆ ನಡೆದಳು. ರಾಜಲಕ್ಷ್ಮಿ ಭಾರವಾದ ಉಸಿರನ್ನು ಬಿಟ್ಟು ಮುಂಬಾಗಿಲನ್ನು ಭದ್ರಪಡಿಸಿ, ಒಳಕ್ಕೆ ನಡೆದಳು.

ಅವರುಗಳು ಹೊರಟುಹೋದ ಸ್ವಲ್ಪ ಹೊತ್ತಿನಲ್ಲೇ ಯಶವಂತ ಮನೆಗೆ ಬಂದ. ಮನೆ ನಿಶ್ಯಬ್ಧವಾಗಿದ್ದುದನ್ನು ಗಮನಿಸಿದ.... "ರಾಜೀ... ಚಿದೂ ಎಲ್ಲ ಕಾಣ್ತಿಲ್ಲ..?" ವಿಚಾರಿಸಿದ.

"ಅವರಪ್ಪ ಬಂದಿದ್ದ. ಹೆಂಡ್ತೀನ ಮಗನ್ನ ಬಲವಂತವಾಗಿ ಕರೆದುಕೊಂಡು ಹೋದ."

"ಹೌದಾ ! ನಾನು ಬರೋವರ್‍ಗೂ ಕಾಯಬಹುದಾಗಿತ್ತಲ್ಲ. ಅವಸರವೇನಿತ್ತು?"

"ನೀವು ಬರದೆ ಇದ್ದುದು ಒಳ್ಳೇದೇ ಆಯ್ತು. ಎಂತೆಂಥಾ ಮಾತಾಡಿದ...ಗೊತ್ತೆ?"

"ಮತ್ತೆ ಮಗು ?" ಆತಂಕದಿಂದ ಕೇಳಿದ.

"ಮಗುವಾಗಿದೆ ಅಂತ ತಿಳಿಸಿದ್ದಿದ್ರೆ ಅವಳನ್ನು ಇಲ್ಲಿಯೇ ಬಿಟ್ಟು ಹೋಗ್ತಿದ್ದ. ಅದಕ್ಕೆ ಹೆದರಿ, ಅವಳು ಮಗು ಹುಟ್ಟಿದೆ ಅಂತ ಹೇಳ್ಲೇ ಇಲ್ಲ"

"ಹೀಗಾಗ್ಬಾರ್ದಿತ್ತು. ಅವನಿಗೇನಾಗಿತ್ತು ಅಂತ?"

"ಏನಾಗಿತ್ತೋ.... ಯಾರಿಗ್ಗೊತ್ತು? ಅವನ ಪದಾರ್ಥಗಳನ್ನು ಅವನು ಒಯ್ದು ನಮ್ಮ ಪದಾರ್ಥವನ್ನು ನಮಗೆ ಬಿಟ್ಬಿಟ್ಟು ಹೋದ್ರು ಅಷ್ಟು ಸಾಕು."

"ಆದ್ರೂ ಹೀಗಾಗಬಾರ್ದಾಗಿತ್ತು ರಾಜಿ..." ಅವಳಿಗೂ ಸ್ವಲ್ಪ ಬೇಸರವಾಗಿತ್ತು.

* * *

"ಚೈತ್ರಾ... ಚೈತ್ರಾ" ಎಂದು ಕರೆಯುತ್ತಾ ಶರತ್ ಮೆಟ್ಟಿಲುಗಳನನ್ನಿಳಿದು ಬಂದ. ಕೈಯಲ್ಲಿ ಪುಸ್ತಕ ಹಿಡಿದು ಕುಳಿತಿದ್ದ ಚೈತ್ರಾ ಅವನ ಕಡೆ ತಿರುಗಲಿಲ್ಲ, ಅವನು ಬಂದು ಎದುರಿಗೆ ನಿಂತರೂ, ಅವಳ ಗಮನ ಪುಸ್ತಕದ ಮೇಲೆಯೇ ಇತ್ತು. ಅವನು ಬಂದು ಪುಸ್ತಕವನ್ನು ಕಿತ್ತುಕೊಂಡ. ಅವಳು ಬಿರುಗಣ್ಣುಗಳನ್ನು ಬಿಟ್ಟಳು.

"ನಾನು ನಿನ್ನ ಕರೀತಾನೇ ಇದೀನಿ. ಉತ್ತರ ಕೊಡೋಕೆ ಆಗುಲ್ವಾ ?" ರೇಗಿದ.

"ಅದೇನು ಹೇಳ್ಬೇಕೋ ಅದನ್ನ ಒದರಿ ಹೋಗು. ನಂಗೆ ಕೇಳಿಸ್ತಾ ಇದೆ."

"ಒದರುಕ್ಕೆ ನಾನು ಕತ್ತೆ ಅಲ್ಲ, ನಾನು ನಿನ್ನ ಹತ್ರ ಸ್ವಲ್ಪ ಮುಖ್ಯವಾದ ವಿಷಯವನ್ನು ಮಾತಾಡ್ಬೇಕು..." ಎತ್ತರದ ಧ್ವನಿಯಲ್ಲಿ ನುಡಿದ.

"ಅದ್ಯಾಕೆ ಹಾಗೆ ಕಿರುಚ್ಕೋತಾ ಇದೀಯ ? ಮುಖ್ಯವಾದ ವಿಷಯ ಅದೇನು ಅಂತ ಹೇಳಿದ್ರೆ ತಾನೇ ನಂಗೆ ಗೊತ್ತಾಗೋದು ?" ಅವಳು ಒರಟಾಗಿ ಹೇಳಿದಳು.

ಅವಳ ಉದ್ಧಟತನಕ್ಕೆ ಅವನ ಸಹನೆ ಮೀರಿದರೂ ತುಟಿ ಕಚ್ಚಿ ಸಮಾಧಾನದಿಂದ ನುಡಿದ. "ಇಲ್ಲಿ ಬೇಡ, ಹೊರಗೆ ಎಲ್ಲಾದ್ರೂ ಹೋಗಿ ಮಾತನಾಡೋಣ.. ಏಳು ನಡೀ.."

"ಯಾಕೆ ? ಅಂಥಾ ಸೀಕ್ರೆಟ್ಟಾ ಏನದು ?' ಜೋರಾಗಿ ಕೇಳಿದಳು.

"ನೋಡು ಚೈತ್ರಾ ನಾನು ಸೀರಿಯಸ್ಸಾಗಿ ಹೇಳ್ತಿದೀನಿ... ಎಲ್ಲರ್ರಿಗೂ ಕೇಳಿಸುವ ಹಾಗೆ ಚರ್ಚೆ ಬೇಡ... ಪ್ಲೀಸ್... ಹೊರಗೆ ಹೋಗಿ ಮಾತಾಡೋಣ ನಡೀ...."

"ಎಂದೂ ಇಲ್ಲದ ಅಂಥಾ ಸೀಕ್ರೆಟ್ ಏನದು ?... ಸೀರಿಯಸ್ ವಿಷಯ ಆದರೆ ಏನಂತೆ ?ಇಲ್ಲಿ ಹೊರಗಿನವರು ಯಾರಿದಾರೆ? ... ನಾವು ನಾವೇ ತಾನೇ ? ಇಲ್ಲೇ ಹೇಳು. ನಂಗೆ ಈಗ ಟೈಂ ಇಲ್ಲ"

"ಸುಮ್ಮನೇ ಹಠ ಮಾಡಿ, ನನ್ನ ಟೈಂ ವೇಸ್ಟ್ ಮಾಡ್ಬೇಡ. ಅನ್ನಪೂರ್ಣಮ್ಮ, ಆನಂದ ಇಬ್ಬರೂ ಹೊರಗಿನವರೇ. ನಮ್ಮವರು ಹೇಗಾಗ್ತಾರೆ ? ಏಳು..." ಕೈ ಹಿಡಿದೆಳೆದ.

ಅವಳು ಕೈ ಬಿಡಿಸಿಕೊಂಡಳು. "ನಾನು ಓದ್ಕೋಬೇಕು."

"ಮಹಾ ನೀನು ಓದೋದು.... ಟಿ.ವಿ. ನೋಡ್ಕೊಂಡು ಟೈಂ ವೇಸ್ಟ್ ಮಾಡುಲ್ವಾ! ಅರ್ಧ ಗಂಟೆಯೊಳಗೆ ವಾಪಸ್ಸು ಬಂದು ಬಿಡೋಣ...."

"ಒಳ್ಳೇ ಐಸ್‌ಕ್ರೀಂ ಕೊಡಿಸೋದಾದ್ರೆ ಬರ್ತೀನಿ...." ಪೆನ್ನನ್ನು ತಿರುಗಿಸುತ್ತಾ ನುಡಿದಳು. ಅವನು ಅವಳ ತಲೆಯ ಕೂದಲನ್ನು ಎಳೆದ.

"ಐಸ್ ಕ್ರೀಂನೂ ಕೊಡಿಸ್ತೀನಿ. ಪಾಪ್‌ಕಾರ್ನ್‌ನೂ ಕೊಡಿಸ್ತೀನಿ. ಹೊರಡು ಮತ್ತೆ."

"ಹತ್ತು ನಿಮಿಷ ಟೈಂ ಕೊಡು ಮಾರಾಯಾ. ಡ್ರೆಸ್ ಚೇಂಜ್ ಮಾಡ್ಕೊಂಡು ರೆಡಿ ಆಗಿ ಬಂದು ಬಿಡ್ತೀನಿ."

"ಡ್ರೆಸ್ಸು, ಅಲಂಕಾರ, ಎಲ್ಲ ಸರಿಯಾಗಿಯೇ ಇದೆ. ಅಲ್ಲಿ ನಿನ್ನನ್ನು ಯಾರೂ ನೋಡುಲ್ಲ..." ಮತ್ತೆ ಕಟ್ಟಿದ್ದ ಕೂದಲನ್ನು ಎಳೆದ.

"ಬಿಡು ನನ್ನ ಕೂದಲನ್ನ, ಕೆದರಬೇಡ... ನೀನು ಹೀಗೆಲ್ಲಾ ಆಡಿದರೆ ನಾನು ಬರುಲ್ಲ ಅಷ್ಟೇ... " ಅವಳೂ ನಖರಾ ತೋರಿದಳು.

"ಸುಮ್ನೆ ಬಾರೇ.... ಅದೆಷ್ಟು ಸತಾಯಿಸ್ತೀಯ" ಎನ್ನುತ್ತ ಮುಂಬಾಗಿಲಿಗೆ ಹೋದ.

"ಅನ್ನ ಪೂರ್ಣಮ್ಮ ಬಾಗಿಲನ್ನು ಹಾಕ್ಕೊಳ್ಳಿ... ನಾವು ಹೊರಗೆ ಹೋಗಿ ಬರ್ತೀವಿ" ಎಂದು

ಅಡಿಗೆ ಮನೆಯ ಬಾಗಿಲಲ್ಲಿ ನಿಂತು ಹೇಳಿದಳು. ತಾನೂ ಹೊರಕ್ಕೆ ನಡೆದಳು.

* * *

'ಪೈ' ರೆಸ್ಟೋರೆಂಟ್‌ನಲ್ಲಿ ಫ್ಯಾಮಿಲಿ ರೂಂನಲ್ಲಿ ಇಬ್ಬರೂ ಎದುರು ಬದುರು ಕುಳಿತರು. ವೈಟರ್ ಬಂದು ಆರ್ಡರ್ ತೆಗೆದುಕೊಂಡ. ಶರತ್ ಮಾತನ್ನು ಹೇಗೆ ಪ್ರಾರಂಭಿಸುವುದೆಂದು ತಡವರಿಸುತ್ತಿದ್ದ. ಚೈತ್ರಾ ಆಕಳಿಸಿದಳು. ಕೆರಳಿಸುವಂತೆ ಮುಖ ಮಾಡಿದಳು.

"ಏನೋ ಮಾತಾಡ್ಬೇಕು ಸೀಕ್ರೆಟ್ ಅಂತ ಇಲ್ಲಿಗೆ ಕರ್‍ಕೊಂಡು ಬಂದೆ. ತುಂಬಾ ನರ್ವಸ್ ಆಗಿರುವಂತೆ ಕಾಣ್ತಿದೆ. ಏನು ತಪ್ಪು ಮಾಡಿದೀಯಾ ?"ಅವಳೇ ಕೇಳಿದಳು.

"ನಾನು ತಪ್ಪನ್ನು ಮಾಡಿಲ್ಲ" ಸ್ವಲ್ಪ ಜೋರಾಗಿ ಹೇಳಿದ.

"ಶ್.... ಮೆಲ್ಲಗೆ, ಇದು ಹೋಟೆಲ್ಲು ... ಸುತ್ತ ಇರೋರು ನೋಡ್ತಿದಾರೆ."

"ಸಾರಿ.... ನಾನು ಏನೂ ತಪ್ಪನ್ನು ಮಾಡಿಲ್ಲ ಚೈತ್ರಾ. ಆದರೆ ಮೋಸ ಹೋಗಿ ಬಿಟ್ಟಿದೀನಿ. ಮುಳುಗುವ ಸ್ಥಿತಿ ಬಂದಿದೆ. ನಿಂಗೆ ಹೇಗೆ ಹೇಳಲಿ? " ಕೆಟ್ಟ ಮುಖ ಮಾಡಿದ.

"ಬಿಸಿನೆಸ್ ವಿಷಯ ತಾನೇ? ಐ ಆಮ್ ಸಾರೀ.... ಇವೆಲ್ಲ ನನಗೆ ಅರ್ಥವೂ ಆಗುಲ್ಲ , ಆಸಕ್ತೀನೂ ಇಲ್ಲ" ಕೈಕಟ್ಟಿ ನುಡಿದಳು.

"ಆಸಕ್ತಿ ಇಲ್ಲ ಅಂದ್ರೆ ಹೇಗೆ ? ಅರ್ಥವಾಗುವ ಹಾಗೆ ವಿವರಿಸಿ ಹೇಳ್ತೀನಿ." ಈಗ ನೀನು ನಂಗೆ ಹೆಲ್ಪ್ ಮಾಡ್ಬೇಕು. ನಿನ್ನ ಸಹಕಾರ ಬೇಕು" ಮೆಲುವಾಗಿ ಹೇಳಿದ.

ಅವಳು ಕೆಟ್ಟದಾಗಿ ನಕ್ಕಳು. "ನಾನೇನು ಹೆಲ್ಪ್ ಮಾಡುಕ್ಕೆ ಆಗುತ್ತೆ? ನನಗೆ ತಲೆ ಬುಡ ಒಂದೂ ಗೊತ್ತಿಲ್ಲ ಪರೀಕ್ಷೆ ಹತ್ತಿರವಾಗ್ತಿದೆ. ಓದ್ಕೋಬೇಕು. ಬೇಗ ಇಲ್ಲಿಂದ ಹೋಗೋಣ." ಅತ್ತಿತ್ತ ನೋಡಿದಳು.

"ತಡೀ ಕಟ್ಲೆಟ್ , ಜಾಮೂನ್, ಬರುತ್ತೆ. ತಿಂದು ಹೋಗೋಣ. ಆರ್ಡರ್ ಕೊಟ್ಟಿದ್ದಾಗಿದೆ. ದಂಡ ಆಗುತ್ತೆ." ಇಬ್ಬರೂ ಮೌನವಾಗಿ ಕುಳಿತರು. ಚೈತ್ರಾ ಆಗಾಗ್ಗೆ ಅವನ ಕಡೆ ನೋಡುತ್ತಿದ್ದಳು. ಅವನ ಚಡಪಡಿಕೆ ತಮಾಷೆಯಾಗಿ ಕಂಡಿತ್ತು ಅವಳಿಗೆ. ನಗುಬಂದಿತ್ತು.

"ಎಂದೂ ನಿನ್ನನ್ನ ಈ ರೀತಿ ಹೆಲ್ಪ್‌ಲೆಸ್ ಸ್ಥಿತೀಲಿ ನೋಡಿರ್‍ಲಿಲ್ಲ, ಏನಾಗಿದೆ. ನಿಂಗೆ? ಏನು ಪ್ರಾಬ್ಲಂ ? ಮೋಸ ಹೋದೆ ಅಂತ ಅಂದೆ... ಯಾರು ಮೋಸ ಮಾಡಿದ್ರು ?"

"ಡ್ಯಾಡಿ ಸರಿಯಾಗಿದಿದ್ದರೆ ಖಂಡಿತಾ ಹೀಗಾಗ್ತಿರ್‍ಲಿಲ್ಲ, ನಾನು ರಾಜೀವನ್ನ ನಂಬಿ ಕೆಟ್ಟೆ. ನನ್ನನ್ನು ಪಾಪರ್ ಮಾಡಿ , ತಾನು ಮಜಾ ಮಾಡ್ತಿದಾನೆ...." ಹಲ್ಲು ಕಡಿದ.

"ಯಾವ ರಾಜೀವ....? ಅದೇ ನಿನ್ನ ಕ್ಲಾಸ್‌ಮೇಟ್ ಆಗಿದ್ನಲ್ಲ ಅವನೇ ತಾನೇ... ಅವನನ್ನು ನೀನು ಸೇರಿಸ್ಕೊಳ್ಳಲೇ ಬಾರದಾಗಿತ್ತು... ಅವನು ಮೋಸ ಮಾಡಿದಾನೆ ಅಂತ ಗೊತ್ತಾಗಿದೆಯಲ್ಲ, ಪೊಲೀಸ್ ಕಂಪ್ಲೆಂಟ್ ಕೊಡು. ಕೇಸ್ ಹಾಕು. ಜೈಲಿಗೆ ಕಳಿಸು."

"ಅದೆಲ್ಲಾ ಅಷ್ಟು ಸುಲಭವಲ್ಲ .. ಚೈತ್ರಾ... ನನ್ನ ಹತ್ರ ಈಗ ಸಾಕಷ್ಟು ಹಣ ಇಲ್ಲ

ಕೋರ್ಟು, ಕೇಸು ಅಂತಾದ್ರೆ ಸಿಕ್ಕಾಬಟ್ಟೆ ಖರ್ಚಾಗುತ್ತೆ. ಅಲ್ಲದೇ ಅವನು ಹಣವನ್ನು ಎಲ್ಲಿ ಮುಚ್ಚಿಟ್ಟಿದ್ದಾನೋ.... ಉಪಾಯವಾಗಿ ಅದನ್ನು ವಸೂಲು ಮಾಡ್ಬೇಕು.''

''ಸರಿ ಉಪಾಯವಾಗಿ ಮಾತನಾಡಿ ಕೇಳು. ಕೊಡಬಹುದು.''

''ಇಲ್ಲ... ಅವನು ಕೊಡುಲ್ಲ ಸಾಲಿಡ್ ಆಗಿ ಗಂಟು ಮಾಡ್ಕೊಂಡಿದಾನೆ. ಅವನು ನಂಗೆ ಮೋಸ ಮಾಡಿದಾನೆ. ನಾನೂ ಮೋಸದಿಂದ ವಸೂಲು ಮಾಡ್ತೀನಿ... ಅದೇ ಸರಿ..... ಈಗ ನೀನು ಈ ವಿಷಯದಲ್ಲಿ ನಂಗೆ ಸಹಾಯ ಮಾಡ್ಬೇಕು. ಅವನೂ ಪಾಪರ್ ಆಗ್ಬೇಕು.''

''ನನಗೆ ಅವನ ಪರಿಚಯವೇ ಇಲ್ಲ, ಅಲ್ಲದೇ ನಾನು ಹಣಾನ ಹೇಗೆ ಕೇಳ್ಲಿ?''

''ಮೊದಲು ಅವನ ಪರಿಚಯ ಮಾಡ್ಕೋ... ಸ್ನೇಹ ಬೆಳೆಸ್ಕೋ.. ಪ್ರೀತಿಸುವ ನಾಟಕವನ್ನಾಡು. ಅವನನ್ನು ಮದುವೆಯಾಗು... ಅಷ್ಟರಲ್ಲಿ ಒಂದೊಂದಾಗಿ ನಿಂಗೇ ಅರ್ಥವಾಗುತ್ತೆ.''

''ನಾನ್ಸೆನ್ಸ್..... ಇದೆಲ್ಲಾ ನನ್ನಿಂದ ಆಗುಲ್ಲ''

''ಆಗ್ದೇ ಇದ್ರೆ, ನಾವು ಪೆನ್ನಿಲೆಸ್‌ಆಗಿ ಬಿಡ್ತೀವಿ. ಅಪ್ಪ ತಾವು ಗಳಿಸಿದ್ದನ್ನು ಬಿಸಿನೆಸ್‌ಗೆ ಅಂತ ಕೊಟ್ರು.... ಮನೆ ಮೇಲೆ ಸಾಲ ತಗೊಂಡಿದೀನಿ... ಈಗ ಅದನ್ನೆಲ್ಲಾ ಅವನು ತನ್ನ ಹೆಸರಿಗೆ ಮಾಡ್ಕೊಂಡುಬಿಟ್ಟಿದಾನೆ. ನಾವು ಬೀದಿಗೆ ಬಂದು ಬಿಡ್ತೀವಿ ಕಣೇ.''

''ಇಷ್ಟೆಲ್ಲಾ ಆಗೋಕ್ಮುಂಚೆ ಎಚ್ಚರದಿಂದ ಇರ್ಬೇಕಾಗಿತ್ತು. ಅವನನ್ನು ಯಾಕೆ ನಿನ್ನ ಪಾರ್ಟನರ್ ಮಾಡ್ಕೊಂಡೆ. ಈಗ ಅನುಭವಿಸು.'' ನಿರ್ದಾಕ್ಷಿಣ್ಯವಾಗಿತ್ತು ಅವಳ ಮಾತು.

''ಸರಿ, ಈಗ ನೀನು ಹೆಲ್ಪ್ ಮಾಡ್ದೇ ಇದ್ದರೆ ನಾನು ಏನು ಮಾಡ್ತೀನಿ ಅಂತ ನಂಗೇ ಗೊತ್ತಿಲ್ಲ, ಡ್ಯಾಡಿಯ ಸ್ಥಿತಿ ನಿಂಗೆ ಗೊತ್ತೇ ಇದೆ. ನಾನು ಜೈಲಿಗೆ ಹೋದ್ರೆ, ನೀನು ಅನಾಥಳಾಗಿ ಬಿಡ್ತೀಯ... ನಿನ್ನನ್ನ , ಡ್ಯಾಡೀನ್ನ ಯಾರು ನೋಡ್ಕೋತಾರೆ ?''

ಅವಳು ಮಂಕಾದಳು. ತಂದೆಯ ಅಸಹಾಯಕತೆಯ ಸ್ಥಿತಿಯನ್ನು ಯೋಚಿಸಿ ಅವಳ ಕಣ್ಣುಗಳು ತುಂಬಿದವು. ಗಲ್ಲ ಅದುರಿತು.... ಗಲ್ಲಕ್ಕೆ ಕೈಗಳನ್ನೂರಿ ಕುಳಿತಳು.

''ನನ್ನ ಮಾತಿನ ಮೇಲೆ ನಿಂಗೆ ನಂಬಿಕೆ ಇಲ್ವಾ ಚೈತ್ರಾ. ನಾನು ನಿನ್ನ ಅಣ್ಣ ಕಣೇ. ನಿನ್ನನ್ನು ಸುಖವಾಗಿಟ್ಟುಕೊಳ್ಬೇಕು ಅಂತ ನಂಗೂ ಆಸೆ.''

''ಆ ಮೋಸಗಾರನ್ನ ಮದುವೆಯಾಗು ಅಂತ ಹೇಳ್ತಿದೀಯಲ್ಲ, ನಿನಗೆ ನನ್ನ ಮೇಲೆ ಪ್ರೀತಿ ಇದೆ ಅಂತ ಹೇಳಲಿ ? ... ನೀನು ನಿಜವನ್ನೇ ಹೇಳ್ತಿದೀಯ ಅಂತ ನಾನ್ಹೇಗೆ ನಂಬಲಿ ?....ಯಾರಾದ್ರೂ ತಂಗಿ ಹತ್ರ ಹೀಗೆ ಮಾತಾಡ್ತಾರಾ?''

''ನನ್ನ ಮಾತನ್ನು ನೀನು ಪೂರ್ತಿ ಕೇಳಿಸ್ಕೊಳ್ಳಲೇ ಇಲ್ಲ, ಮದುವೆಯಾಗುತ್ತಿದ್ದ ಹಾಗೇ, ಕಂಡೀಷನ್ ಹಾಕಿ, ಅವನ ಅಕೌಂಟ್‌ನಲ್ಲಿರುವ ಹಣವನ್ನು ನಿನ್ನ ಅಕೌಂಟಿಗೆ ಹಾಕಿಸ್ಕೋ... ಆಮೇಲೆ ಡೈವೋರ್ಸ್ ಕೊಟ್ಬಿಡು...''

''ನೀನೆಂಥಾ ಅಣ್ಣನೋ ...? ವಿವೇಕ ಇದೆಯಾ ನಿನಗೆ ? ಮದುವೆ ಅಂತ ಅಂದ್ರೆ

ಏನೂಂತ ಗೊತ್ತಿಲ್ವಾ?.... ನಾವಿಬ್ರೂ ಗಂಡ ಹೆಂಡತಿ ಆಗ್ತೀವಿ... ಅವನ ಜೊತೆ ರಿಲೇಷನ್‌ಷಿಪ್ ಇಟ್ಕೋಬೇಕಾಗುತ್ತೆ...... ಅವನು ಡೈವೋರ್ಸ್ ಕೊಡ್ದೇ ಇದ್ರೇ ?''

''ಡೈವೋರ್ಸ್ ಕೊಡೋ ತರಹ ಸಿಚುಯೇಷನ್‌ನ ಕ್ರಿಯೇಟ್ ಮಾಡು. ಅವನ ಹತ್ರ ಯಾವ ಸಂಬಂಧವನ್ನು ಇಟ್ಕೋ ಬೇಡ.... ಸಿಂಪಲ್...''

''ಏನು ಸಿಂಪಲ್ ? ಇದೆಲ್ಲಾ ನೀನು ಹೇಳುವಷ್ಟು ಸುಲಭವಲ್ಲ, ರಿಸ್ಕ್ ಇದೆ.''

''ಹೌದು ರಿಸ್ಕ್ ಇದೆ. ಆದರೆ ನಂಗೆ ಹೊಳೆದ ಉಪಾಯ ಇದೊಂದೇ. ಲೀಗಲ್ ಆಗಿ ಹೋದ್ರೆ ಈ ಕೆಲಸ ಬೇಗ ಆಗುಲ್ಲ. ಇದಾದರೆ, ಎರಡು ಮೂರು ತಿಂಗಳೊಳಗೆ ಅಬ್ಬಬ್ಬಾ ಅಂತ ಅಂದ್ರೆ, ಆರುತಿಂಗಳ ಒಳಗೆ ಮುಗಿದು ಹೋಗುತ್ತೆ.''

''ಒಂದು ವೇಳೆ ನಿನಗೆ ತಂಗೀನೇ ಇಲ್ಲದಿದ್ರೆ ಏನ್ಮಾಡ್ತಿದ್ದೆ ?''

''ಡ್ಯಾಡೀನ ಯಾವ್ದಾದ್ರೂ ಹೋಂಗೆ ಸೇರಿಸಿ, ಅವನನ್ನು ಕೊಂದು, ನಾನು ಜೈಲಿಗೆ ಹೋಗ್ತಿದ್ದೆ''

''ಎಷ್ಟು ಸುಲಭವಾಗಿ ಹೇಳ್ತಿಯಲ್ಲೋ ... ಶರತ್ ''

''ಮತ್ತಿನ್ನೇನು ಮಾಡ್ಲಿ ?''

''ತಂಗಿ ಅಂತ ಪ್ರೀತಿಯಿಂದ ಮಾತನ್ನೇ ಆಡಿಸುಲ್ಲ ನೀನು. ಈಗ ನಿನ್ನ ಕೆಲಸಕ್ಕೆ ನಾನು ಬೇಕಾದೆ ಅಲ್ವಾ?''

''ಸಾರಿ, ಚೈತ್ರಾ. ನಾನೀಗ ಕಷ್ಟದಲ್ಲಿದ್ದೀನಿ. ನೀನು ಹೆಲ್ಪ್ ಮಾಡುವುದು ನಿನ್ನ ಧರ್ಮ. ಆದರೆ ಸಹಾಯ ಮಾಡೋದು, ಬಿಡೋದು ನಿನ್ನ ಇಷ್ಟ. ಬಲವಂತ ಮಾಡುಲ್ಲ. ಸರಿ ಹೊರಡೋಣ ಏಳು.''

''ಜಾಮೂನು, ಕಟ್ಲೇಟ್‌ನ ತಿನ್ನೋಣ. ವೇಸ್ಟ್ ಆಗುಲ್ವಾ ?''

''ನಂಗೆ ತಿನ್ನುವ ಮೂಡ್ ಇಲ್ಲ.''

''ಸರಿ. ನಿನ್ನಿಷ್ಟ. ನಾನು ಬಲವಂತ ಮಾಡುಲ್ಲ. ನಿಧಾನವಾಗಿ ತಿನ್ತಾ ತಿನ್ತಾ ಯೋಚ್ನೆ ಮಾಡ್ತೀನಿ. ನೀನು ನೋಡ್ತಾ ಇರು '' ಎನ್ನುತ್ತಾ ಪ್ಲೇಟ್‌ಗಳನ್ನು ಎಳೆದುಕೊಂಡಳು . ಅವನು ಸರ್ರನೆ ಒಂದು ಪ್ಲೇಟನ್ನು ತನ್ನೆಡೆಗೆ ಎಳೆದುಕೊಂಡು ಅವಳ ಕಡೆ ನೋಡಿ ನಕ್ಕಂತೆ ಮಾಡಿದ. ಅವಳೂ ಕಿರುನಗೆ ನಕ್ಕಳು. ''ನಂಗೆ ಯೋಚಿಸುಕ್ಕೆ ಸ್ವಲ್ಪ ಟೈಂ ಬೇಕು'' ಎಂದಳು.

''ಓ...ಕೇ... ಸ್ವಲ್ಪ ಟೈಂ ತಗೋ.... ಆದರೆ ಬೇಗ ತೀರ್ಮಾನವನ್ನು ತಗೋ. ಈಗಾಗ್ಲೇ ಸಾಕಷ್ಟು ಲಾಸ್ ಆಗಿದೆ'' ಎಂದ. ಅವಳು ನಿಧಾನವಾಗಿ ಕಟ್ಲೆಟ್‌ನ್ನು ಮುಗಿಸಿ, ಜಾಮೂನಿನ ಕಪ್‌ಗಳನ್ನು ಎಳೆದುಕೊಂಡಳು. ಅವನು ಕಾಫಿಯನ್ನು ತರಿಸಿಕೊಂಡು ಕುಡಿದ.

* * *

"ಶರತ್ ಅವಳನ್ನು ಮನೆಯ ಬಳಿ ಇಳಿಸಿ, ತಾನು ಮತ್ತೆಲ್ಲೋ ಹೊರಟು ಹೋದ. ಒಳ ಬಂದ ಚೈತ್ರಾ ತಾಯಿಯ ಫೋಟೋ ಕಡೆ ನೋಡುತ್ತಾ ನಿಂತಳು. ಅನ್ನಪೂರ್ಣಮ್ಮ ಅವಳ ಕಂದಿದ ಮುಖವನ್ನೇ ನೋಡಿ ಕೇಳಿದಳು."

"ಯಾಕಮ್ಮಾ ಸಪ್ಪಗಿದೀಯ ? ಶರತ್ ಏನಾದ್ರೂ ಅಂದ್ನಾ?... ಅವನೆಲ್ಲಿ ?"

"ಏನಿಲ್ಲ ಆಂಟಿ. ನನ್ನನ್ನ ಮನೆ ಹತ್ರ ಬಿಟ್ಟು ಎಲ್ಲಿಗೋ ಹೋದ. ಅಮ್ಮನ ನೆನಪು ಬಂತು " ಎಂದು ಹೇಳಿ, ಮಹಡಿಯ ಮೆಟ್ಟಿಲುಗಳನ್ನೇರಿದಳು. ತಂದೆಯ ರೂಮಿನ ಬಾಗಿಲ ಬಳಿ ನಿಂತು ನೋಡಿದಳು. ಗಾಲಿ ಕುರ್ಚಿಯ ಮೇಲೆ ಕುಳಿತಿದ್ದ ತಂದೆ ಎಂದಿನಂತೆ ಮೌನಿ. ಶೂನ್ಯವನ್ನು ದಿಟ್ಟಿಸುತ್ತಾ ಕುಳಿತವರನ್ನು ಕಂಡು ದುಃಖ ಉಮ್ಮಳಿಸಿತು. ಬಿಕ್ಕಿದಳು ಅವಳಿಗೆ ಬೆನ್ನು ಮಾಡಿ ಕುಳಿತಿದ್ದ ಆನಂದ ಸರ್‍ರನೆ ತಿರುಗಿ, ಅವಳನ್ನು ಕಂಡು ಎದ್ದು ನಿಂತ.

"ಏನಾದ್ರೂ ಹೇಳೋದಿತ್ತಾ?" ಕೇಳಿದ.

"ಡ್ಯಾಡಿಯ ಊಟ ಆಯ್ತಾ ಆನಂದ್?"

"ಹೂಂ ಆಗ್ಲೇ ಆಯ್ತು. ಡಾಕ್ಟ್ರು ಬಂದಿದ್ರು.... ನೀವೂ ಇರ್ಲಿಲ್ಲ, ಶರತ್ ಸಹ ಬರ್ಲಿಲ್ಲ, ಮೊಬೈಲ್ ಸ್ವಿಚ್ ಆಫ್ ಆಗಿತ್ತು..."

"ಹೂಂ. ನಾವಿಬ್ರೂ ಹೊರಗೆ ಹೋಗಿದ್ವಿ.. ಅವನು ಮತ್ತೆ ಹೊರಗೆ ಹೋದ.... ನಾನು ಸ್ವಲ್ಪ ಹೊತ್ತು ಡ್ಯಾಡಿಯ ಪಕ್ಕ ಕೂತಿರ್ತೀನಿ..." ಅವನು ಎದ್ದ, ಇವಳು ಕುಳಿತಳು.

"ಯಾಕೋ ಬೇಸರವಾಗಿರುವ ಹಾಗಿದೆ.. ನಾನು ಹೊರಗೆ ಇರ್ತೀನಿ... ಏನಾದ್ರೂ ಬೇಕಾಗಿದ್ರೆ ಕರೀರಿ..."ಅತ್ತ ಹೊರಟವನ ಕೈ ಹಿಡಿದು ತಡೆದಳು.

"ಪರವಾಗಿಲ್ಲ, ನೀವೂ ಇಲ್ಲೇ ಇರಬಹುದು. ಅಪ್ಪ ಹೇಗೂ ಮಾತನಾಡುಲ್ಲ, ನನ್ನನ್ನು ಗುರುತಿಸುಲ್ಲ.. ಆದರೂ ಐಲವ್ ಮೈ ಡಾಡ್" ಎನ್ನುತ್ತಾ ತಂದೆಯ ಭುಜದ ಮೇಲೆ ತಲೆಯನ್ನು ಆಡಿಸಿದಳು. ಅಷ್ಟರಲ್ಲಿ ಫೋನು ರಿಂಗಾಗಿತ್ತು. ಅವನು ಅವಳ ಕೈಯನ್ನು ಬಿಡಿಸಿಕೊಂಡು ಫೋನನ್ನೆತ್ತಿಕೊಂಡು "ಇಲ್ಲ, ಅವರು ಇಲ್ಲಿ ಇಲ್ಲ" ಅವನು ಹೇಳಿದ್ದನ್ನು ಕೇಳಿ ಕತ್ತೆತ್ತಿದಳು.

"ಶರತ್ ಮಾತಾಡಿದ್ದು, ನೀವು ಇದೀರಾ ಅಂತ ಕೇಳಿದ್ರು ...."

"ಥ್ಯಾಂಕ್ಸ್ ಆನಂದ್... ನನಗೆ ಈಗ ಅವನೊಡನೆ ಮಾತನಾಡುವ ಮೂಡ್ ಇರ್ಲಿಲ್ಲ, "

"ನಾನು ಸುಳ್ಳು ಹೇಳಿದೆ ಅಂತ ಗೊತ್ತಾದ್ರೆ...?"

"ಹೇಗೆ ಗೊತ್ತಾಗುತ್ತೆ ?.... ಹೆದರ್‍ಬೇಡಿ. ನೀವು ಒಳ್ಳೆಯ ಕೆಲಸವನ್ನೇ ಮಾಡಿದ್ರಿ."

"ಯಾಕೋ ನಿಮ್ಮನ್ನು ನೋಡಿದ್ರೆ ಅಪ್ಸೆಟ್ ಆಗಿದೀರಿ ಅಂತ ಅನ್ನಿಸ್ತು. ನಿಮ್ಮಿಬ್ಬರ ಮಧ್ಯೆ ಏನಾದ್ರೂ ಮಾತು ಕತೆ ನಡೀತಾ ?"

"ಹೂಂ ಸ್ವಲ್ಪ ಆಯ್ತು. .. ಅದು ನನ್ನ ಪ್ರಾಬ್ಲಂ ಬಿಡಿ."

"ನಾನೇನಾದ್ರೂ ಹೆಲ್ಪ್ ಮಾಡಬೇಕಾಗಿದ್ರೆ ಹೇಳಿ ಮಾಡ್ತೀನಿ." ಅವನು ಅವಳ ಭುಜದ ಮೇಲೆ ಕೈಯನ್ನಿಟ್ಟ.

"ಖಂಡಿತಾ ಹೇಳ್ತೀನಿ ಆನಂದ್... ನಿಮಗಲ್ಲದೇ ಇನ್ಯಾರಿಗೆ ಹೇಳಲಿ ? ...ಈಗ ನನ್ನ ಆಪ್ತರು ನೀವೊಬ್ರೇ... ನಿಮ್ಮ ಊಟ ಆಯ್ತಾ ಆನಂದ್ ?"

"ಇಲ್ಲ, ನಿಮ್ಮ ಊಟ ಆಯ್ತಾ ?"

"ನನಗೆ ಈಗ ಹಸಿವಿಲ್ಲ, ಶರತ್ ತಿಂಡಿ ಕೊಡಿಸಿದ. ನೀವು ಹೋಗಿ ಊಟ ಮಾಡ್ಕೊಂಡು ಬನ್ನಿ. ನಾನು ಇಲ್ಲಿ ಕೂತಿರ್ತೀನಿ." ಎನ್ನುತ್ತಾ ಅಲ್ಲಿಯೇ ಟೇಪಾಯ್ ಮೇಲಿದ್ದ ಕಾದಂಬರಿಯನ್ನು ಕೈಗೆತ್ತಿಕೊಂಡಳು. ಹೆಸರನ್ನು ಓದಿಕೊಂಡು ಮೆಲುವಾಗಿ ನಕ್ಕಳು. ಕತೆ ಚೆನ್ನಾಗಿದೆಯಾ? ಕೇಳಿದಳು.

"ಹೂಂ. ಒಂಥರಾ ಚೆನ್ನಾಗಿದೆ... ಪತ್ತೇದಾರಿ ಕಾದಂಬರಿ."

"ಪತ್ತೇದಾರಿ ಕಾದಂಬರಿಗಳನ್ನು ಓದೋರನ್ನು ನಂಬೋದು ಕಷ್ಟ" ಎಂದಳು.

"ಹಾಗಾದ್ರೆ ನನ್ನ ಮೇಲಿನ ನಂಬಿಕೆ ಹೊರಟು ಹೋಯ್ತು ಅನ್ನಿ." ಅವನೂ ನಕ್ಕ.

"ಸುಮ್ಮನೇ ತಮಾಷೆ ಮಾಡ್ದೆ, ಸೀರಿಯಸ್ ಆಗಿ ಯೋಚಿಸ್ಬೇಡಿ... ಹೋಗಿ, ಮೊದಲು ಊಟ ಮಾಡ್ಕೊಂಡು ಬನ್ನಿ" ಎಂದು ಅವನನ್ನು ಕಳಿಸಿದಳು. ಅವನು ಹತ್ತು ನಿಮಿಷಗಳೊಳಗೆ ವಾಪಸ್ಸಾಗಿದ್ದ. ಕಣ್ಣುಗಳನ್ನು ಮುಚ್ಚಿ ಕುಳಿತಿದ್ದಳು ಹೆಜ್ಜೆಯ ಸದ್ದುಗಳನ್ನು ಕೇಳಿ ಕಣ್ಣುಗಳನ್ನು ಬಿಟ್ಟಳು. ಅವನು ಅವಳನ್ನೇ ದಿಟ್ಟಿಸಿ ನೋಡುತ್ತಿದ್ದ, ಅವಳು ನಾಚಿದ್ದಳು.... "ಹಾಗೇ ನಿದ್ದೆ ಬಂದು ಬಿಡ್ತು..." ಎನ್ನುತ್ತಾ ಸರಿಯಾಗಿ ಕುಳಿತಳು.

"ಮೆಲ್ಲಗೆ ಗೊರಕೆಯ ಸದ್ದು ಕೇಳಿಸುತ್ತಿತ್ತು. ತುಂಬಾ ನಿದ್ದೆ ಬರ್ತಿದ್ರೆ ಹೋಗಿ ಮಲಕ್ಕೊಳ್ಳಿ, ... ನಿಮ್ಮ ತಂದೇನ್ನ ಹಾಸಿಗೆಯ ಮೇಲೆ ಮಲಗಸ್ತೀನಿ.." ಎನ್ನುತ್ತಾ, ಗಾಲಿ ಕುರ್ಚಿಯ ಮೇಲೆ ಕುಳಿತಿದ್ದವರನ್ನು ನಿಧಾನವಾಗಿ ಎತ್ತಿ ಮಂಚದ ಮೇಲೆ ಮಲಗಿಸಿ, ಹೊದಿಕೆಯನ್ನು ಹೊದ್ದಿಸಿದ.

"ಥ್ಯಾಂಕ್ ಯೂ ಆನಂದ್, ಡ್ಯಾಡೀನ ತುಂಬಾ ಚೆನ್ನಾಗಿ ನೋಡ್ಕೋತಿದೀರಿ." ಹೊಗಳಿದಳು.

"ನನ್ನ ಕೆಲಸವೇ ಅದು ಅಲ್ವಾ ?.... "ಅವನೂ ಹೇಳಿದ.

"ಗುಡ್ ನೈಟ್ ಡ್ಯಾಡೀ..." ಎದು ಹೇಳಿ ತಂದೆಯ ಹಣೆಗೆ ಮೆಲ್ಲನೆ ಮುತ್ತಿಟ್ಟು, ಅವನಿಗೂ ಗುಡ್ ನೈಟ್ ಹೇಳಿ ಕೆಳಗಿಳಿದು ಬಂದಳು. ಓದುವ ಮನಸ್ಸಿರಲಿಲ್ಲ, ಟಿವಿಯನ್ನು ಹಾಕಿಕೊಂಡು ಕೈಯಲ್ಲಿ ರಿಮೋಟ್ ಹಿಡಿದು ಚಾನೆಲ್‌ಗಳನ್ನು ಬದಲಾಯಿಸುತ್ತಾ ಕುಳಿತಳು.

ಸ್ವಲ್ಪ ಹೊತ್ನಲ್ಲೇ ಶರತ್ ಮನೆಗೆ ಬಂದ. ಅನ್ನಪೂರ್ಣಮ್ಮ ಇಬ್ಬರನ್ನು ಕೂರಿಸಿ ಊಟವನ್ನು ಬಡಿಸಿದಳು. ಶರತ್ ಬೇಗ ಬೇಗ ಊಟವನ್ನು ಮುಗಿಸಿ ತನ್ನ ರೂಮಿಗೆ ಹೋಗಿ, ಬಾಗಿಲನ್ನು ಹಾಕಿಕೊಂಡ. ತನ್ನ ರೂಮಿಗೆ ಬಂದು ಮಲಗಿದ ಚೈತ್ರಾಳಿಗೆ ನಿದ್ದೆ ಹತ್ತಲಿಲ್ಲ, ಹೊರಳಾಡಿ ಬೇಸರವೆನಿಸಿತು. ಅನ್ನಪೂರ್ಣಮ್ಮ ಅಡಿಗೆ ಮನೆಯ ಕೆಲಸಗಳನ್ನು ಮುಗಿಸಿ ಮಲಗುವ ಸಿದ್ಧತೆಯಲ್ಲಿದ್ದಳು. ಚೈತ್ರಾ, ರೂಮಿನ ದೀಪವನ್ನು ಆರಿಸಿ, ಬಾಗಿಲನ್ನು ಮುಂದಕ್ಕೆ

ಎಳೆದುಕೊಂಡು ಮಹಡಿಯ ಮೆಟ್ಟಿಲುಗಳನ್ನೇರಿದಳು.''

ಮಂದವಾದ ಬೆಳಕಿನಲ್ಲಿ ಬಾಗಿಲ ಬಳಿ ನಿಂತಿದ್ದ ಚೈತ್ರಾಳನ್ನು ಕಂಡು ಆನಂದ ಗಾಬರಿಯಿಂದ 'ಯಾರದು?' ಎಂದ.

''ನಾನು ಚೈತ್ರಾ'' ಎಂದಳು. ಅವನು ಎದ್ದು ಕುಳಿತು ಸ್ವಿಚ್ಚಿನ ಕಡೆ ಕೈ ಚಾಚಿದ. ' ''ದೀಪ ಹಾಕ್ಬೇಡಿ ಆನಂದ್. ನಾನು ಇಲ್ಲಿ ಕೂತ್ಕೋತೀನಿ'' ಎನ್ನುತ್ತಾ ಕುರ್ಚಿಯ ಮೇಲೆ ಕುಳಿತಳು.

''ನೀವು ಇಷ್ಟು ಹೊತ್ನಲ್ಲಿ ಇಲ್ಲಿಗ್ಯಾಕೆ ಬಂದ್ರಿ ?...'' ನಿದ್ದೆ ಬರ್ಲಿಲ್ವಾ ?

''ಇಲ್ಲ, ನಿದ್ದೆ ಬರ್ಲಿಲ್ಲ ''

''ಹಾಗಾದ್ರೆ, ನೀವು ಇಲ್ಲಿ ಮಲಕ್ಕೊಳ್ಳಿ. ನಾನು ಕೆಳಗಡೆ ಹೋಗಿ ಮಲಕ್ಕೋತೀನಿ. ಏನಾದ್ರೂ ಬೇಕಾಗಿದ್ರೆ ಕರೀರಿ ಬರ್ತೀನಿ.'' ಮಂಚದಿಂದ ಇಳಿದು ನಿಂತ.

''ನಾನು ನಿಮ್ಮ ಹತ್ರ ಮಾತಾಡ್ಬೇಕು... ಅದಕ್ಕೇ ಬಂದೆ... ''

''ಬೆಳಿಗ್ಗೆ ಆಡಿದ್ರೆ ಆಗುಲ್ವಾ ? ... ಶರತ್ ಏನಂದುಕೊಳ್ತಾರೆ ?''

''ಅವನು ತನ್ನ ರೂಮಿಗೆ ಹೋದ. ಇನ್ನು ಅವನು ಎದ್ದು ಬರೋದು ಬೆಳಿಗ್ಗೇನೇ... ನನ್ನ ಹೃದಯ ಭಾರವಾಗಿದೆ. ಮಾತನಾಡಿ ಹಗುರ ಮಾಡ್ಕೊಳ್ಳಬೇಕು... ಡ್ಯಾಡಿ ಸರಿಯಾಗಿದ್ದಿದ್ರೆ ಅವರ ಹತ್ರವೇ ಮಾತಾಡ್ತಿದ್ದೆ... ಈಗ ನಂಗೆ ಯಾರೂ ಇಲ್ಲ, ಆನಂದ್...'' ಅವಳು ಇದ್ದಕ್ಕಿದ್ದಂತೆ ಅಳತೊಡಗಿದಾಗ ಅವನು ಗಾಬರಿಗೊಂಡ.

''ಅಳುವಂಥದ್ದು ಏನಾಯ್ತು ಚೈತ್ರಾ.... ನಿಮ್ಮ ಡ್ಯಾಡಿ ಹುಶಾರಾಗಿದಾರೆ. ಡಾಕ್ಟರ್ರು ಬಂದು ನೋಡಿ, ಎಲ್ಲಾ ಸರಿಯಾಗಿದೆ ಅಂತ ಹೇಳಿದಾರೆ.... ಭಯ ಪಡುವಂಥಾದ್ದು ಏನಿಲ್ಲ.''

''ಸುಮ್ಮನೇ ಹೀಗೆ ಅಲುಗಾಡದೇ ಮಲಗಿರುವವರು ಹೇಗಿದ್ದರೇನು ಆನಂದ್? ಅವರ ಮಕ್ಕಳು ಎಂಥಾ ಪ್ರಾಬ್ಲಂನಲ್ಲಿ ಸಿಕ್ಕಿ ಬಿದ್ದಿದಾರೆ ಅಂತ ಅವರಿಗೇನು ಗೊತ್ತು?''

''ಏನು ಪ್ರಾಬ್ಲಂ ಚೈತ್ರಾ !''ಅವನು ಅವಳ ಗಲ್ಲವನ್ನೆತ್ತಿ ಕೇಳಿದ.

ಅವಳು ಅವನ ಕೈಗೆ ತನ್ನ ಕೆನ್ನೆಯನ್ನು ಒತ್ತಿಕೊಂಡು ನಿಶ್ಶಬ್ಧವಾಗಿ ಅತ್ತಳು. ಅವನ ಇನ್ನೊಂದು ಕೈ ಅವಳ ತಲೆಯನ್ನು ನೇವರಿಸಿತು. ಅವಳು ಅತ್ತು ಸಮಾಧಾನ ಗೊಂಡಳು. ''ಸಾರೀ ಆನಂದ್, ಯಾಕೋ ದುಃಖವನ್ನು ತಡೆದುಕೊಳ್ಳುಕ್ಕೆ ಆಗ್ಲಿಲ್ಲ'' ಅಂತ ಹೇಳಿ ನಕ್ಕಳು.

''ಪರವಾಗಿಲ್ಲ, ಈಗ ಸಮಾಧಾನ ಆಯ್ತಲ್ಲ, ಈಗ ಹೋಗಿ ಮಲಕ್ಕೊಳ್ಳಿ, ಬೆಳಿಗ್ಗೆ ಮಾತಾಡೋಣ''

''ಇಲ್ಲ, ಆನಂದ್..... ನಾನು ಈಗಲೇ ಹೇಳ್ಬೇಕು...''ಎನ್ನುತ್ತಾ ಗಂಟಲನ್ನು ಸರಿ ಮಾಡಿಕೊಂಡಳು. ಅವನು ಹಿಂದೆ ಸರಿದು ಮಂಚದ ಮೇಲೆ ಕುಳಿತ. ಅವಳು ಶರತ್ ತನಗೆ ಹೇಳಿದುದನ್ನೆಲ್ಲಾ ವಿವರವಾಗಿ ಅವನಿಗೆ ತಿಳಿಸಿದಳು. ''ಅಣ್ಣ ಆದೋನು ತಂಗಿಗೆ

ಹೇಳೋ ಮಾತಾ ಇದು ?'' ಕೇಳಿದಳು.

''ಸಮಾಧಾನ ಮಾಡ್ಕೊಳ್ಳಿ ಚೈತ್ರಾ, .......ಈ ಬಿಸಿನೆಸ್ ಸಮಸ್ಯೆ ನನಗೆ ತಿಳಿಯದ್ದು. ಆದರೆ, ನನ್ನ ನಿಮ್ಮ ಸ್ನೇಹ ಐದಾರು ತಿಂಗಳಿಂದ ಇದೆ......ನಾನು ನಿಮ್ಮ ಹತ್ರ ಸಲುಗೆಯಿಂದ ಮಾತಾಡ್ತೀನಿ.........ಆದರೂ ಈ ಬಗ್ಗೆ ನಾನೇನು ಹೇಳ್ಲಿ!''

''ಈ ಮನೇಲಿ ನೀವೊಬ್ರೇ ನನಗೆ ಆಪ್ತರು ಅಂತ ನಿಮ್ಮೊಡನೆ ಎಲ್ಲವನ್ನೂ ಹೇಳಿದೆ, ಅಷ್ಟೊಂದು ಪತ್ತೇದಾರಿ ಕಾದಂಬರಿಗಳನ್ನು ಓದ್ತೀರಲ್ಲಾ.......ಏನಾದ್ರೂ ಉಪಾಯ ಹೇಳಿ ಆನಂದ್, ಇಲ್ದಿದ್ರೆ ನಾನು ಹಾಳಾಗಿ ಹೋಗ್ತೀನಿ.''

''ಸರಿ, ನಂಗೆ ಸ್ವಲ್ಪ ಸಮಯ ಕೊಡಿ. ಯೋಚಿಸ್ಬಿಟ್ಟು, ಏನಾದ್ರೂ ಉಪಾಯ ಇದೆಯಾ ಅಂತ ಕಂಡು ಹಿಡೀತೀನಿ. ಆಮೇಲೆ, ನಾನು ಶರತ್ ಹತ್ರ ಮಾತಾಡ್ತೀನಿ.''

''ನೋ.. ಅವನಿಗೆ, ನಾನು ನಿಮಗೆ ಈ ವಿಷಯ ಹೇಳಿದೀನಿ ಅಂತ ಗೊತ್ತಾಗ್ಲೇ ಬಾರದು.. ನಾನೇ ಸುಲಭವಾಗಿ ಮಾಡುವಂಥ ಉಪಾಯ ತಿಳಿಸಿ..''

''ಸರಿ, ಹೇಳ್ತೀನಿ, ನೀವು ಧೈರ್ಯವಾಗಿರಿ.''

''ಏನು ಧೈರ್ಯ ಬರುತ್ತೆ ನೀವೇ ಹೇಳಿ, ಡ್ಯಾಡಿ ಹೀಗೆ ಮಲಗಿ ಬಿಟ್ಟಿದಾರೆ. ಅವನು ಹಾಗೆ ಮೋಸ ಹೋಗಿದಾನೆ. ಮುಂದೇನು ಗತಿ?.. ನನ್ನ ಬಗ್ಗೆ ಯಾರಿಗೂ ಆತಂಕವೇ ಇಲ್ಲ,'' ಎನ್ನುತ್ತಾ ಮತ್ತೆ ಅಳತೊಡಗಿದಳು.

''ಶ್.... ನಾನು ಇಲ್ವಾ? ಅಳ್ಬೇಡಿ......ಈಗ ನೀವು ಹೋಗಿ. ಶರತ್ ಏನಾದ್ರೂ ಎದ್ದು ಬಂದರೆ ಅಪಾರ್ಥ ಮಾಡ್ಕೋತಾರೆ.''

''ಮಾಡ್ಕೊಳ್ಳಲಿ ಬಿಡಿ, ನಾನು ನಿಮ್ಮನ್ನು ಪ್ರೀತಿಸುತ್ತಿರುವ ವಿಷಯವನ್ನು ನಾನು ಇವತ್ತೇ ತಿಳಿಸಿ ಬಿಡ್ತೀನಿ...ಅಷ್ಟೆ..''

''ಹಾಗೆ ದುಡುಕಬೇಡಿ. ಅದನ್ನು ತಿಳಿಸುವ ಸಮಯವೂ ಬರುತ್ತೆ... ಈಗ ನೀವು ಹೋಗಿ'' ಅವನು ಬಲವಂತವಾಗಿ ಅವಳನ್ನು ಕೆಳಕ್ಕೆ ಕಳಿಸಿದ. ಹಾಸಿಗೆಯ ಮೇಲೆ ಉರುಳಿಕೊಂಡವನು, ಅವಳು ಹೇಳಿದ ವಿಷಯಗಳ ಬಗ್ಗೆ ಚಿಂತಿಸಿದ.

ಶರತ್ ಬಿಸಿನೆಸ್ ಬಗ್ಗೆ ಇವನಿಗೆ ಏನೂ ಹೆಚ್ಚಿಗೆ ತಿಳಿದಿರಲಿಲ್ಲ. ತಿಳಿದುಕೊಳ್ಳುವ ಆಸಕ್ತಿಯೂ ಇರಲಿಲ್ಲ. ಆರು ತಿಂಗಳ ಹಿಂದೆ ಈ ಮನೆಗೆ ಚೈತ್ರಾಳ ತಂದೆಯನ್ನು ನೋಡಿಕೊಳ್ಳಲು ಸಹಾಯಕನಾಗಿ ಬಂದು ಸೇರಿಕೊಂಡಿದ್ದ.

ಪೇಪರ್ರಿನಲ್ಲಿ ಬಂದಿದ್ದ ಪ್ರಕಟಣೆಯನ್ನು ಓದಿ ತಾಯಿಯ ಅಭಿಪ್ರಾಯವನ್ನು ಕೇಳಿದ್ದ. ವಯಸ್ಸಾದವರೊಬ್ಬರು, ಆಲ್ಜಿಮೇರ್ ಖಾಯಿಲೆಯಿಂದ ನರಳುತ್ತಿದಾರೆ. ಅವರನ್ನು ನೋಡಿಕೊಳ್ಳಲು ಸಹಾಯಕನಾಗಿ ನಾನು ಹೋಗಿ ಸೇರಿಕೊಳ್ತೀನಿ'' ಅಂತ ತಿಳಿಸಿದ್ದ.

''ನಿನಗೆ ಯಾವ ಅನುಭವವಿದೆ ಹೇಳು..ಅಲ್ಲದೇ ಬೆಂಗಳೂರಿನಂಥ ಊರಿನಲ್ಲಿ ಇರೋದು ಕಷ್ಟ.. ಬೇಡ'' ಅಂತ ಹೇಳಿದ್ದಳು ತಾಯಿ.

"ಫಿಸಿಯೋಥೆರಪಿಯಲ್ಲಿ ಟ್ರೈನಿಂಗ್ ಮಾಡ್ಕೊಂಡು, ಸರಿಯಾದ ಕೆಲಸ ಸಿಗದೇ ಈ ಹಳ್ಳೀಲಿ ಓಡಾಡೋ ದನಕರುಗಳ ಮಧ್ಯೆ ತಿರುಗಾಡ್ಕೊಂಡಿದೀನಿ..ನನಗೂ ದೊಡ್ಡ ಶಹರಿನಲ್ಲಿ ಇರ್ಬೇಕು ಅಂತ ಆಸೆ. ನನ್ನನ್ನು ಕಳಿಸ್ಕೊಡು", ಕೇಳಿಕೊಂಡಿದ್ದ.

"ನಿನ್ನನ್ನು ಕಳಿಸ್ಬಿಟ್ಟು, ನಾನು ಒಬ್ಬಳೇ ಹೇಗಿರ್ಲೋ......"

"ನೀನೂ ನನ್ನ ಜೊತೆಗೆ ಬಂದ್ಬಿಡು, ಇಲ್ಲಿ ಅಜ್ಜನ ಆಸ್ತಿ ಏನಿದೆ?"

"ಬೇಡಪ್ಪಾ....ನನಗೆ ಈ ಹಳ್ಳಿಯೇ ಒಗ್ಗಿ ಹೋಗಿದೆ. ಬೆಂಗಳೂರಿನಂಥ ದೊಡ್ಡ ಊರ್ನಲ್ಲಿ ನಾವು ಕಳೆದು ಹೋಗ್ತೀವಿ" ಅಂತ ಹೇಳಿದ್ದಳು.

ಇವನು ಮತ್ತೆ ಮತ್ತೆ ಬಲವಂತ ಮಾಡಿದಾಗ, ಯಾರು ಏನು ಎತ್ತ ಅಂತ ವಿಚಾರಿಸಿದ್ದಳು. ಹೆಸರು, ವಿಳಾಸ ತಿಳಿದಾಗ ಮುಖದ ಬಣ್ಣ ಬದಲಾಗಿತ್ತು. ದೀರ್ಘವಾಗಿ ಯೋಚಿಸಿ ಕಡೆಗೆ ಅವನಿಗೆ ಒಪ್ಪಿಗೆಯನ್ನು ಕೊಟ್ಟಿದ್ದಳು.

"ಸರಿ, ಹಾಗಾದ್ರೆ...ನಾನೂ ನಿನ್ನ ಜೊತೆಗೆ ಬರ್ತೀನಿ. ನಿನ್ನನ್ನು ಒಬ್ಬನನ್ನೇ ಕಳಿಸೋಕೆ ಇಷ್ಟವಿಲ್ಲ" ಅಂತ ಹೇಳಿದಾಗ ನಕ್ಕಿದ್ದ.

"ಯಾಕಮ್ಮ ಭಯಾನ?.....ನಾನೇನು ಚಿಕ್ಕ ಮಗುವೇ? ಕಳೆದು ಹೋಗ್ತೀನಾ?"

"ಹಾಗಲ್ಲಪ್ಪಾ.....ನನ್ನ ಆತಂಕ ನನಗೇ ಗೊತ್ತು. ನಿನ್ನ ಅಪ್ಪ ಬದುಕಿದ್ದಿದ್ರೆ ನನಗೆ ಈ ಆತಂಕ ಇರ್ತಿರ್ಲಿಲ್ಲ."

"ಬಿಡಮ್ಮ....ಅಪ್ಪ ನನಗೋಸ್ಕರ ಮಾಡಿದ್ದು ಅಷ್ಟರಲ್ಲೇ ಇದೆ. ನೀನೇ ಅವರಿವರ ಮನೆ ಕೆಲಸ ಮಾಡಿ ಸಂಪಾದಿಸ್ತಾ ಇದ್ದ ವಿಷಯ ನಂಗೆ ಗೊತ್ತಿಲ್ವಾ?... ಇವರ್‍ಯಾರೋ ಅನುಕೂಲಸ್ಥರ ಮನೆಯವರು ಅಂತ ಕಾಣ್ಸುತ್ತೆ...ನೀನೂ ಅಲ್ಲೇ ಕೆಲ್ಸಕ್ಕೆ ಸೇರ್ಕೋ ಇಬ್ಬರೂ ಒಂದೇ ಕಡೆ ಇದ್ದರಾಯ್ತು...."

"ನೋಡೋಣ ಯೋಚಿಸ್ತೀನಿ. ಈಗ ಅವರಿಗೆ ತಕ್ಷಣಕ್ಕೆ ಸಹಾಯಕರು ಬೇಕಾಗಿದ್ದಾರೆ. ನಾವು ಆದಷ್ಟು ಬೇಗ ಹೊರಡೋಣ. ನಾನು ನಿನ್ನನ್ನು ಬಿಟ್ಟು, ಅಲ್ಲಿಯ ಅನುಕೂಲ, ಅನಾನುಕೂಲಗಳನ್ನು ನೋಡಿ, ಆಮೇಲೆ ವಾಪಸ್ಸು ಬರ್ತೀನಿ...."

"ಹಾಗಾದ್ರೆ ಇವತ್ತು ರಾತ್ರಿಯ ಬಸ್ಸಿಗೇ ಹೊರಟು ಬಿಡೋಣ" ಅವನು ಉತ್ಸಾಹದಿಂದ ಹೇಳಿದಾಗ ಅವಳು ತಲೆಯಾಡಿಸಿದ್ದಳು.

* * *

ಕೈಯಲ್ಲಿ ವಿಳಾಸವನ್ನು ಹಿಡಿದು, ಇಬ್ಬರೂ ಆಟೋದಿಂದ ಇಳಿದರು. ಅದೇ ರಸ್ತೆ, ಅದೇ ಮನೆ. ಮಂದಾಕಿನಿ ಕಾಂಪೌಂಡನ್ನು ಗುರುತಿಸಿದಳು. ಕಾಲುಗಳು ಸಣ್ಣಗೆ ನಡುಗಿದವು. ಚಲನೆ ನಿಂತಿತು.

''ಯಾಕಮ್ಮ.. ನಿಂತ್ಬಿಟ್ಟೆ? ಕಾಲು ನೋಯ್ತಿದೆಯಾ?'' ಕೇಳಿದ್ದ.

''ಹೂಂ, ಒಂದೇ ಸಮನೆ ಕೂತಿದ್ದು, ಕಾಲುಗಳು ಹಿಡಕೊಂಡಿವೆ.... ನಾನು ಬರ್ತೀನಿ. ನೀನು ಮುಂದೆ ಹೋಗು.'' ಅವನ ಹಿಂದೆ, ನಡೆದಳು. ತನ್ನನ್ನು ಗುರುತಿಸುವ ಕಣ್ಣುಗಳು, ಮುಖಗಳು ಕಂಡು ಬರಬಹುದೇನೋ ಎಂದು ಕಸಿವಿಸಿಯಿಂದ ಅತ್ತ ಇತ್ತ ನೋಡುತ್ತಾ ಮುಂಬಾಗಿಲ ಬಳಿಗೆ ಬಂದಿದ್ದಳು. ಅಷ್ಟರಲ್ಲಿ ಚಿದಾನಂದ ಬಾಗಿಲನ್ನು ಸಮೀಪಿಸಿ ಕರೆಗಂಟೆಯನ್ನು ಒತ್ತಿದ್ದ.....ಮಂದಾಕಿನಿ ಅವನ ಹಿಂದೆ ನಿಂತಿದ್ದಳು.

ಬಾಗಿಲನ್ನು ತೆರೆದವರು ಅಡಿಗೆಯ ಅನ್ನಪೂರ್ಣಮ್ಮ..'' ಶರತ್ ಅನ್ನೋರು ಇದಾರಾ.. ನಾನು ಅವರನ್ನು ನೋಡ್ಬೇಕಾಗಿತ್ತು'' ಅಂತಂದ.

''ಇಲ್ಲ, ಅವರಿಲ್ಲ. ಅವರ ತಂಗಿ ಇದಾರೆ.. ಕರೀತೀನಿ.. ಒಳಗ್ಬನ್ನಿ'' ಆಕೆ ಕರೆದಾಗ, ಮಂದಾಕಿನಿ ಉಸಿರನ್ನು ಬಿಗಿ ಹಿಡಿದು ನಿಂತಳು. ಆಕೆ ಒಳಗೆ ಹೋಗಿದ್ದಳು.

''ಯಾರು ನೀವು? ಯಾರು ಬೇಕಾಗಿತ್ತು?..'' ಎಂದು ಇನಿದನಿಯಲ್ಲಿ ಕೇಳಿದವಳನ್ನು ಮಂದಾಕಿನಿ, ಮಗನ ಬೆನ್ನ ಮರೆಯಿಂದ ಇಣುಕಿ ನೋಡಿದಳು. ಸೊಗಸಾಗಿ ಬೆಳೆದು ನಿಂತಿರುವ ಯುವತಿಯನ್ನು ಕಂಡು ಅವಳ ಕಣ್ಣುಗಳು ಅರಳಿದವು. ಮುಂದೆ ಬಂದಳು. ಅಷ್ಟರಲ್ಲಿ ಚಿದಾನಂದ ಮಾತನಾಡಿದ್ದ.

ನಾವು ಶೃಂಗೇರಿಯಿಂದ ಬಂದಿದೀವಿ.....ಪೇಪರ್ರಿನಲ್ಲಿ ಈ ಪ್ರಕಟಣೆ ಬಂದಿತ್ತು... ಶರತ್ ಅನ್ನೋರು ಕೊಟ್ಟಿದಾರೆ.........

''ಹೌದಾ!.....ಒಳಗೆ ಬನ್ನಿ...ಅಣ್ಣ ಮನೇಲಿಲ್ಲ. ವಾಕಿಂಗ್ ಹೋಗಿದಾನೆ. ಬಂದು ಬಿಡ್ತಾನೆ. ಕೂತ್ಕೊಳ್ಳಿ'' ಎಂದು ಹೇಳಿ ಅವರನ್ನು ಒಳಗೆ ಕುಳ್ಳಿರಿಸಿ, ತನ್ನ ಪಾಡಿಗೆ ತಾನು ಒಳಕ್ಕೆ ಹೊರಟು ಹೋದಳು. ಅಡಿಗೆಯ ಅನ್ನಪೂರ್ಣಮ್ಮ ಎರಡು ಕಪ್‌ಗಳಲ್ಲಿ ಬಿಸಿಯಾಗಿ ಹೊಗೆಯಾಡುತ್ತಿದ್ದ ಕಾಫಿಯನ್ನು ತಂದು ಅವರ ಮುಂದಿತ್ತಳು. ಮಂದಾಕಿನಿ ಕುಳಿತಲ್ಲಿಂದಲೇ ಮನೆಯ ಮೇಲೆ ಕೆಳಗೆ, ಅಕ್ಕ ಪಕ್ಕ ನೋಟವನ್ನು ಹರಿಸಿದಳು. ಎಲ್ಲಾ ಹಾಗೆಯೇ ಇದೆ. ಏನೂ ಬದಲಾಗಿಲ್ಲ ಅಂತಂದುಕೊಂಡಳು. ಅಷ್ಟರಲ್ಲಿ ಚೈತ್ರಾ ಮತ್ತೆ ಹೊರಕ್ಕೆ ಬಂದಿದ್ದಳು. ಹೆಗಲ ಮೇಲೆ ಹ್ಯಾಂಡ್‌ಬ್ಯಾಗ್ ಇತ್ತು. ಕೈಯಲ್ಲಿ ಕೆಲವು ಪುಸ್ತಕಗಳಿದ್ದವು. ಯಾರಿಗೂ ಏನನ್ನೂ ಹೇಳದೇ ಚಪ್ಪಲಿ ಮೆಟ್ಟಿ ಹೊರಟೇ ಬಿಟ್ಟಳು.

ಅನ್ನಪೂರ್ಣಮ್ಮ ಅಡಿಗೆ ಮನೆಯ ಬಾಗಿಲಲ್ಲಿ ನಿಂತಳು. ಮಂದಾಕಿನಿಗೆ ಸಂಕೋಚವೆನಿಸಿತ್ತು. ''ಇನ್ಯಾರೂ ಇಲ್ವಾ ಮನೇಲಿ!'' ಅನುಮಾನಿಸುತ್ತಾ ಕೇಳಿದಳು.

''ಇಲ್ಲ, ಯಾರೂ ಇಲ್ಲ....''

''ಯಾರಿಗೆ ಹುಶಾರಿಲ್ಲ? ಅವರು ಎಲ್ಲಿದಾರೆ! ಏನಾಗಿದೆ ಅವರಿಗೆ!''

''ಮನೆಯ ಯಜಮಾನರಿಗೆ.. ಅದೇನೋ ಹೆಸರು ಹೇಳ್ತಾರೆ.. ಐದಾರು ವರ್ಷಗಳಿಂದ ಅವರಿಗೆ ಹುಶಾರಿಲ್ಲ. ಕೂತಕಡೆಯೇ ಕೂತಿರ್ತಾರೆ. ಮಲಗಿಸಿದ್ರೆ ಮಲಗಿರ್ತಾರೆ. ಮಾತಿಲ್ಲ,

ಕತೆಯಿಲ್ಲ. ಯಾರನ್ನು ಗುರುತಿಸೊಲ್ಲ."

"ಅಯ್ಯೋ ದೇವ್ರೇ...ಡಾಕ್ಟರಿಗೆ ತೋರಿಸಿಲ್ವೇ.." ಮಂದಾಕಿನಿ ಪ್ರಶ್ನಿಸಿದಳು.

"ತೋರಿಸ್ದೇ ಇರ್ತಾರೇನಮ್ಮ? ನೀನು ಏನೇನೋ ಕೇಳ್ಬೇಡ.." ಮಗ ಗದರಿದ.

"ಹಾಗಲ್ಲ ಕಣೋ ಚಿದೂ...." ಅಷ್ಟರಲ್ಲಿ ಶರತ್ ಒಳಕ್ಕೆ ಬಂದಿದ್ದ. ಸೋಫಾದ ಮೇಲೆ ಕುಳಿತವರನ್ನು ಓರೆಗಣ್ಣಿನಿಂದ ನೋಡಿದ.

"ನಾವು ಶೃಂಗೇರಿಯಿಂದ ಬಂದಿದೀವಿ...ಪೇಪರ್ನಲ್ಲಿ ಪ್ರಕಟಣೆ ನೋಡಿದೆವು.."

"ಸರಿ, ಮೇಲ್ಗಡೆ ನಮ್ಮ ತಂದೆ ಇದಾರೆ. ನೋಡೋರಂತೆ ಬನ್ನಿ. ಅಲ್ಲೇ ಮಾತನಾಡೋಣ." ಶರತ್ ಮೆಟ್ಟಿಲುಗಳನ್ನು ಹತ್ತಿದ. ಚಿದಾನಂದ ಅವನನ್ನು ಹಿಂಬಾಲಿಸಿದ. ಮಂದಾಕಿನಿ ಕೆಳಗೇ ಉಳಿದಳು.

"ಮನೇ ಯಜಮಾನಿತಿ! ಊರಲ್ಲಿಲ್ವಾ!.." ಮಂದಾಕಿನಿ ಕೇಳಿದಳು.

"ಇಲ್ಲಮ್ಮಾ.. ಅವರು ಬದುಕಿಲ್ಲ.. ಹೋಗಿ ಆರು ವರ್ಷಗಳ ಮೇಲಾಯ್ತು." ಮಂದಾಕಿನಿಯ ಗಂಟಲಲ್ಲಿ ಉಸಿರು ಸಿಕ್ಕಿಕೊಂಡಂತಾಯಿತು. ದೃಷ್ಟಿ ನೆಟ್ಟಗಾಯಿತು. "ರಾಜಲಕ್ಷ್ಮಿ ಬದುಕಿಲ್ಲ. ಯಶವಂತರಾಯರಿಗೆ ಆರೋಗ್ಯ ಸರಿ ಇಲ್ಲ," ಮನಸ್ಸು ಕಳವಳಗೊಂಡಿತು.

ಅಷ್ಟರಲ್ಲಿ ಅವರಿಬ್ಬರೂ ಕೆಳಗಿಳಿದು ಬಂದರು. ಶರತ್ ಸ್ನಾನ ಮಾಡಲೆಂದು ಹೊರಟಿದ್ದ. "ನೀವು ನೀವು ಮಾತನಾಡ್ಕೊಂಡು ನಿರ್ಧರಿಸಿ.. ಸ್ನಾನ ಮಾಡಿ, ತಿಂಡಿ ತಿಂದು ಹೊರಗೆ ಸುತ್ತಾಡಿ ಬನ್ನಿ" ಚಿದಾನಂದ ತಲೆಯಾಡಿಸಿದ. ಶರತ್ ಅಲ್ಲಿಂದ ಸರಿದಿದ್ದ.

"ನೋಡಿದ್ಯೇನೋ ಅವರನ್ನ.. ಹೇಗಿದಾರೆ?" ವ್ಯಥೆಯಿಂದ ಕೇಳಿದಳು.

"ಏನೂ ಉಪಯೋಗವಿಲ್ಲಮ್ಮ.. ಎಲ್ಲಾ ಮಾಡಿಸ್ಬೇಕು. ನನ್ನೈಲಿ ಆಗುತ್ತೋ ಇಲ್ವೋ ಅಂತ ಆತಂಕವಾಗುತ್ತೆ"....ನಾನೇನು ಮಾಡ್ಲಿ ನೀನೇ ಹೇಳು." ತಾಯಿಯ ಸಲಹೆ ಬೇಕಾಗಿತ್ತು.

"ಒಪ್ಕೋ.. ಸಧ್ಯಕ್ಕೆ ಇಲ್ಲಿರು. ಬೇಡ ಅಂತ ಅನ್ನಿಸಿದ್ರೆ ಬಿಟ್ಟರಾಯ್ತು. ಪಾಪ ಕಷ್ಟದಲ್ಲಿದಾರೆ. ಅವರಿಗೆ ಸಹಾಯ ಮಾಡುವುದು ನಮ್ಮ ಧರ್ಮ."

"ಮತ್ತೆ ನೀನು? ಅಲ್ಲಿ ಒಬ್ಬಳೇ ಹೇಗಮ್ಮ ಇರ್ತೀಯ?"

"ಅಕ್ಕನ ಮನೆಗೆ ಕೆಲವು ದಿನ ಹೋಗಿರ್ತೀನಿ. ಬೇಡ ಅಂತ ಅನ್ನಿಸಿದ್ರೆ ವಾಪಸ್ಸು ಬರ್ತೀನಿ. ಹೇಗೋ ಆಗುತ್ತೆ. ನೀನು ಮಾತ್ರ ಉದಾಸೀನ ಮಾಡದೇ ಅವರ ಸೇವೆ ಮಾಡು. ಬಾಳಿ ಬದುಕಿದೋರು..." ಅವಳ ಕಣ್ಣುಗಳಲ್ಲಿ ನೀರಾಡಿತು.

"ಅದೇನಮ್ಮ ಇದ್ದಕ್ಕಿದ್ದ ಹಾಗೆ, ಹೀಗೆ ಬೇಸರಗೊಂಡಿದೀಯಲ್ಲ ಏನಾಯ್ತು?"

"ಆತಂಗೆ ಹೆಂಡತಿ ಇಲ್ಲ, ತೀರಿ ಹೋಗಿದಾಳೆ....ಮಕ್ಕಳು ಅನಾಥರಾಗಿದಾರೆ.. ಬೇರೆ ಯಾರೂ ವಿಚಾರಿಸುತ್ತಿಲ್ಲವಂತೆ.. ಪಾಪ ಅಂತ ಅನ್ನಿಸ್ತು.." ಕಣ್ಣೀರನ್ನು ಒರೆಸಿಕೊಂಡಳು.

"ನೀನೂ ಇಲ್ಲೇ ಇದ್ದಿದ್ರೆ ಚೆನ್ನಾಗಿತ್ತು."

“ಬೇಡ ಚಿದೂ.. ನಾನು ಇಲ್ಲಿ ಇರುವುದಿಲ್ಲ. ನಿನ್ನನ್ನು ನೋಡ್ಬೇಕು ಅಂತ ಅನ್ನಿಸಿದಾಗ ಬರ್ತೀನಿ.. ನನ್ನನ್ನ ಬಸ್ಸಿಗೆ ಹತ್ತಿಸಿ ಬಿಡು. ಸಾಯಂಕಾಲದ ಹೊತ್ತಿಗೆ ಊರನ್ನು ಸೇರ್ಕೋತೀನಿ..”

“ನಾನು ಶರತ್ ಹತ್ರ ಮಾತಾಡ್ತೀನಿ. ಒಂದೆರಡು ದಿನವಾದ್ರೂ ಇರು.. ಸಂಬಳ ನಾಲ್ಕು ಸಾವಿರ ರೂಪಾಯಿ ಕೊಡ್ತಾರಂತೆ.. ಸಾಕಾಗುತ್ತೇನಮ್ಮ..?”

“ಬೇಕಾದಷ್ಟು ಆಯಿತು. ಇಲ್ಲಿ ನಿನಗೆ ಬೇರೆ ಏನು ಖರ್ಚಿರುತ್ತೆ ಹೇಳು?” ಅಷ್ಟರಲ್ಲಿ ಶರತ್‌ನನ್ನು ಕಂಡು ಮಾತನ್ನು ನಿಲ್ಲಿಸಿದಳು.

“ಸರಿ, ಏನು ನಿರ್ಧಾರ ಮಾಡಿದ್ರಿ?.. ಇರೋದಾದ್ರೆ, ಇಲ್ಲಿ ಮಹಡಿ ಮೆಟ್ಟಿಲ ಕೆಳಗೆ ಒಂದು ಸಣ್ಣ ರೂಮಿದೆ. ಸಧ್ಯಕ್ಕೆ ಅಲ್ಲಿರಬಹುದು. ನೀವು ಮಾತ್ರ ಡ್ಯಾಡಿಯ ಜೊತೆಯೇ ಸದಾಕಾಲವೂ ಇರಬೇಕಾಗುತ್ತೆ..” ಮಂದಾಕಿನಿ ಮಗನ ಕಡೆ ನೋಡಿದಳು.

“ಇಲ್ಲ, ನಾನು ಇಲ್ಲಿ ಇರೋದಿಲ್ಲ. ಇವತ್ತು ರಾತ್ರೀನೇ ವಾಪಸ್ಸು ಹೊರಟು ಬಿಡ್ತೀನಿ.”

“ನಿಮ್ಮಿಷ್ಟ” ಎಂದು ಹೇಳಿ ಶರತ್ ಅಲ್ಲಿಂದ ಕದಲಿದ್ದ. ಚಿದಾನಂದನಿಗೆ ವ್ಯಥೆಯಾಗಿತ್ತು. ಅಮ್ಮನನ್ನು ತನ್ನ ಜೊತೆಯಲ್ಲಿ ಇರಿಸಿಕೊಳ್ಳುವ ಆಸೆ ಇತ್ತು. ಆದರೆ ಇಲ್ಲಿ ಮನೆ ಯಜಮಾನಿತಿ ಇಲ್ಲ. ಯಜಮಾನರಿಗೆ ಆರೋಗ್ಯ ಸರಿ ಇಲ್ಲ. ಶರತ್ ಕೈಲಿ ಎಲ್ಲ ಅಧಿಕಾರವಿದೆ. ಸ್ವಭಾವ ಒರಟು ಅಂತನ್ನಿಸುತ್ತೆ. ಅಡಿಗೆಯವರು ತಮ್ಮ ದರ್ಬಾರನ್ನು ನಡೆಸಬಹುದು. ಇಲ್ಲಿಯೂ ಅಮ್ಮ ಕೆಲಸದವಳಂತೆ ಇರುವುದು ಬೇಡವೇ ಬೇಡ ಅಂತೆನ್ನಿಸಿತ್ತು.. ಸುಮ್ಮನಾದ.

ಸ್ನಾನ ಮಾಡಿ, ತಿಂಡಿಯ ನಂತರ, ಚಿದಾನಂದ ತಾಯಿಯನ್ನು ಹೊರಡಿಸಿದ. “ಹಾಗೇ ಸುತ್ತಾಡಿ ಬರೋಣ. ಹಾಗೇ ನಿನಗೇನಾದ್ರೂ ಬೇಕಾಗಿದ್ರೆ ಕೊಂಡ್ಕೊಳ್ಳೋಣ.”

“ಏನು ತಗೋಳ್ಳೋದು? ಅಲ್ದೇ ಅನಗತ್ಯ ವಸ್ತುಗಳಿಗೆ ದುಡ್ಡನ್ಯಾಕೆ ಖರ್ಚು ಮಾಡ್ಬೇಕು..? ಅಲ್ದೇ ಹಣ ತಾನೇ ಎಲ್ಲಿದೆ?”

“ಹಾಗೆನ್ಬೇಡ. ಇನ್ಮೇಲೆ ನಿನ್ನ ಮಗನೂ ಸಂಪಾದಿಸ್ತಾನೆ. ಇದುವರೆಗೆ ನೀನು ದುಡಿದಿದ್ದಾಯ್ತು. ಇನ್ನು ಮುಂದೆ ಆರಾಮವಾಗಿರು.” ತಾಯಿಯ ಕೈಗಳನ್ನ ಪ್ರೀತಿಯಿಂದ ಹಿಡಿದ. ಅವಳ ಕಣ್ಣುಗಳು ತುಂಬಿದವು.

“ನೀನು ಇಷ್ಟು ಹೇಳಿದ್ಯಲ್ಲಾ ಅಷ್ಟೇ ಸಾಕು. ಬೆಂಗಳೂರು ದೊಡ್ಡ ಊರು. ಖರ್ಚು ಜಾಸ್ತಿ.. ಸುಮ್ಮನೇ ಹೊರಗೆ ತಿರುಗಾಡಿ ಖರ್ಚು ಮಾಡ್ಬೇಡ. ಒಂದಿಷ್ಟನ್ನು ಉಳಿಸಿಟ್ಟು ಬ್ಯಾಂಕ್‌ನಲ್ಲಿಡು. ಬಡ್ಡಿ ಹಣವೂ ಸೇರುತ್ತೆ.. ಉಳಿತಾಯ, ನಿನಗೇ ಒಳ್ಳೇದು.”

“ಸರಿಯಮ್ಮ.. ನಾನು ಮೊದಲ್ನೇ ಸಲ ಈ ಊರಿಗೆ ಬಂದಿದೀನಿ. ಇಲ್ಲೇ ಹತ್ತಿರ ಸುತ್ತಾಡಿಕೊಂಡು ಬರ್ತೀನಿ. ನೀನು ರೆಸ್ಟ್ ತಗೋ.. ರಾತ್ರಿಯ ಪ್ರಯಾಣ ಬೇರೆ ಇದೆ. “ಅವನು ಹೊರಟಾಗ ಅವಳು ಬೇಡ ಎನ್ನಲಿಲ್ಲ. ಅಡಿಗೆ ಮನೆಯ ಬಾಗಿಲಿಗೆ ಬಂದಳು.

“ನಾನೇನಾದ್ರೂ ಸಹಾಯ ಮಾಡ್ಲೇ..ಅನ್ನಪೂರ್ಣಮ್ಮ?”

“ಏನೂ ಬೇಡಿ, ನೀವು ಹೊಸಬರು.. ಎಷ್ಟು ದಿನ ಇಲ್ಲಿರ್ತೀರಿ?”

"ಇವತ್ತು ರಾತ್ರಿ ಹೊರಟು ಬಿಡ್ತೀನಿ. ಚೈತ್ರಾ ಎಷ್ಟು ಹೊತ್ತಿಗೆ ಬರ್ತಾಳೆ? ಏನು ಓದ್ತಿದಾಳೆ?"

"ಕಡೇ ವರ್ಷದ ಬಿ.ಕಾಂ. ಓದ್ತಿದಾಳೆ.....ಮಧ್ಯಾಹ್ನದ ಹೊತ್ತಿಗೆ ಬಂದು ಬಿಡ್ತಾಳೆ."

"ಪಾಪ....ಅಣ್ಣ ತಂಗಿ ಹೇಗಿದಾರೆ?... ತಂದೆಗೆ ಅನಾರೋಗ್ಯ?"

"ಅವನು ತನ್ನ ಪಾಡಿಗೆ ತಾನಿದಾನೆ. ಇವಳು ತನ್ನ ಪಾಡಿಗೆ ತಾನಾಯಿತು. ತನ್ನ ಓದು ಅಂತ ಇದಾಳೆ.... ತಾಯಿಯಿಲ್ಲದ ಹುಡುಗಿ ಅಂತ, ನಾನೂ ಏನನ್ನೂ ಹೇಳುಕ್ಕೆ ಹೋಗುಲ್ಲ. ಆದರೆ ಒಂದೊಂದು ಸಾರಿ, ಫ್ರೆಂಡ್ ಮನೇಲೇ ಎರಡು ಮೂರು ದಿನ ಇದ್ದು ಬಿಡ್ತಾಳೆ..."

"ಹೌದಾ!.. ನೀವು ಕೇಳುಲ್ವಾ!"

"ನಾನು ಕೇಳಿದರೆ ಹೇಗೋ ಏನೋ ಅಂತ ಸುಮ್ಮನಿದೀನಿ.. ಎರಡು ವರ್ಷದಿಂದ ಈ ಮನೇಲಿ ಅಡಿಗೆಯವಳಾಗಿದೀನಿ.. ನನ್ನ ಕೆಲಸ ಏನಿದ್ರೂ ಅಡಿಗೆ ಮನೇದು ಮಾತ್ರ.. ಎಲ್ಲಾ ಕಾರುಬಾರೂ ಶರತ್‌ದೇ....ನೀವು ಅಷ್ಟು ದೂರದ ಊರ್ನಿಂದ ಬಂದಿದೀರಿ.. ಯಾಕೆ?"

"ಏನ್ಮಾಡೋದು! ಹೊಟ್ಟೆ ಪಾಡು. ಹೆಚ್ಚಿಗೆ ಓದ್ಲಿಲ್ಲ. ಒಳ್ಳೆಯ ಕೆಲಸವಿಲ್ಲ.. ಬೆಳೆದು ನಿಂತಿದಾನೆ. ಒಳ್ಳೆಯ ಹುಡುಗ.. ತಂದೆ ಇಲ್ಲ. ಏನ್ಮಾಡೋದು?.. ನೀವು ಸ್ವಲ್ಪ ನನ್ನ ಮಗನ ಕಡೆ ಗಮನ ಇಟ್ಟುಕೊಂಡಿರಿ.. ನನ್ನಿಂದ ದೂರ ಇದ್ದು ಅಭ್ಯಾಸವಿಲ್ಲ ಇವನಿಗೆ.."

"ಆಯ್ತು, ಊಟ ತಿಂಡಿಗೆ ಏನೂ ಕೊರತೆ ಇಲ್ಲ. ನನಗೂ ಯಾರಿಲ್ಲ. ಅವನನ್ನು ಮಗನಂತೆ ನೋಡಿಕೊಳ್ತೀನಿ. ನೀವು ಚಿಂತಿಸ್ಬೇಡಿ."

"ಅವನೇನಾದ್ರೂ ತಪ್ಪು ಮಾಡಿದ್ರೆ ತಿಳುವಳಿಕೆ ಹೇಳಿ.....ಮುಜುಗರ ಬೇಡ."

"ಆಯ್ತು.. ನೀವೂ ಆಗಾಗ್ಗೆ ಆದಾಗ ಬರ್ತಾ ಇರಿ.."

"ನನಗೀಗ ಧೈರ್ಯ ಬಂತು ಅನ್ನಪೂರ್ಣಮ್ಮ..ಮನೇಲಿ ಹಿರೇದಿಕ್ಕು ಅಂತ ನೀವಾದ್ರೂ ಇದೀರಿ..ಇಲ್ದಿದ್ರೆ ಮಕ್ಕಳ ರಾಜ್ಯ.. ಹೇಗಿರ್ತಿತ್ತೋ ಏನೋ?.. ಶರತ್ ತಂದೇನ ಚೆನ್ನಾಗಿ ನೋಡ್ಕೊಳ್ತಾ ಇದಾನಲ್ಲ. ಅದೇ ಸಂತೋಷ."

"ಮಕ್ಕಳು, ಅಷ್ಟೂ ಮಾಡದಿದ್ರೆ ಹೇಗೆ?.....

"ಈಗ ಪರವಾಗಿಲ್ಲ. ಮುಂದೆ ಹೀಗೇ ಇರುತ್ತಾ?.. ಅವನು ಮದುವೆ ಆದ್ಮೇಲೆ ಬದಲಾಗ್ದೇ ಇರುತ್ತಾ?... ಸೊಸೆಯಾಗಿ ಬರೋಳು ಎಷ್ಟಾಗಲೀ ಪರರ ಮನೆಯವಳು."

"ನೀವು ಹೇಳೋದೂ ನಿಜ.. ಆದರೆ ನನಗ್ಯಾಕೆ?.. ನಾನೇನು ಇಲ್ಲೇ ಶಾಶ್ವತವಾಗಿ ಇರ್ಬೇಕಾ!... ನಾನು ನನ್ನ ಕೈಲಾದಷ್ಟು ವರ್ಷ ನಿಸ್ವಾರ್ಥವಾಗಿ ಮಾಡ್ತೀನಿ.. ಅಷ್ಟೇ.." ಅವಳು ಮಾತು ಸಾಕು ಎಂಬಂತೆ ಕೆಲಸವನ್ನು ಮುಂದುವರಿಸಿದಳು. ಮಂದಾಕಿನಿ ಅಡಿಗೆ ಮನೆಯ ಬಾಗಿಲ ಬಳಿ ಕುಳಿತಳು.

* * *

"ಆಂಟೀ.. ತುಂಬಾ ಹೊಟ್ಟೆ ಹಸೀತಿದೆ, ಬೇಗ ತಟ್ಟೆ ಹಾಕಿ ಬಡಿಸಿ. ನಾನು ಮತ್ತೆ ಕಾಲೇಜಿಗೆ ಹೋಗ್ಬೇಕು." ಚೈತ್ರಾ ಅಡಿಗೆಯಾಕೆಗೆ ಕೂಗಿ ಹೇಳಿ ತನ್ನ ರೂಮಿಗೆ ನಡೆದಳು. ಮಂದಾಕಿನಿ ಎದ್ದಳು.

"ತಟ್ಟೆ ಎಲ್ಲಿದೆ ಹೇಳಿ. ನಾನು ಅವಳಿಗೆ ಬಡಿಸ್ತೀನಿ." ಎನ್ನುತ್ತಾ ಮಂದಾಕಿನಿ ತಟ್ಟೆ ಲೋಟಗಳನ್ನಿಟ್ಟು ಬಡಿಸಲು ಸಿದ್ಧಳಾದಳು. ಎದುರಿಗೆ ನಿಂತವಳ ಕಡೆ ನೋಡದೇ ಚೈತ್ರಾ ಕುಳಿತಳು.. ಮಂದಾಕಿನಿ ಕಡೆ ಕೈ ಅಡ್ಡ ಹಿಡಿದಳು.

"ಆಂಟೀ, ನೀವೇ ಬಡಿಸಿ, ಅದು ನಿಮ್ಮ ಕೆಲಸ ತಾನೆ?"

"ನಾನು ಇವತ್ತೊಂದು ದಿನ ಬಡಿಸ್ತೀನಿ.. ಸುಮ್ಮನೇ ಕೆಲಸವಿಲ್ಲದೇ ಕೂತಿದ್ದೆ."

"ಏನೂ ಬೇಡ.. ನೀವು ಯಾರು ಅಂತ?.. ಇವತ್ತೋ ನಾಳೆಯೋ ವಾಪಸ್ಸು ಹೋಗೋರು ತಾನೇ......"

"ಪರವಾಗಿಲ್ಲಮ್ಮ.. ನೀನೂ ನನಗೆ ಮಗಳಿದ್ದ ಹಾಗೇ.. ಒಂದು ಹೊತ್ತು ಬಡಿಸಿದರೆ ಏನೂ ಆಗುಲ್ಲ."

"ಅದೇ ನಂಗೆ ಇಷ್ಟವಿಲ್ಲ.. ಅನ್ನಪೂರ್ಣಮ್ಮ ಇದಾರೆ ಬಡಿಸ್ತಾರೆ. ಅವರ ಕೈಲಿ ಆಗದಿದ್ರೆ ಹೇಳಲಿ. ನಾನೇ ಬಡಿಸ್ಕೊಳ್ತೀನಿ." ಚೈತ್ರಾ ಒರಟಾಗಿ ಹೇಳಿದಾಗ, ಮಂದಾಕಿನಿಗೆ ಅವಮಾನವಾದಂತಾಗಿತ್ತು. ಮುಖ ಕೆಂಪಾಗಿತ್ತು. ಕಣ್ಣೀರ ಹನಿ ಕೆಳಗೆ ಉರುಳುವ ಮೊದಲೇ, ಅಡಿಗೆ ಮನೆಯಿಂದ ಹೊರಕ್ಕೆ ಬಂದಳು. ಅನ್ನಪೂರ್ಣಮ್ಮ ಬಡಿಸಲು ನಿಂತಳು. ಚೈತ್ರಾ ಅವಸವಸರವಾಗಿ ಊಟ ಮಾಡಿ, ಸಿಂಕ್‌ನಲ್ಲಿ ಕೈ ತೊಳೆದು, ಮತ್ತೆ ಮನೆಯಿಂದಾಚೆ ಹೊರಟೇ ಬಿಟ್ಟಳು. ಅನ್ನಪೂರ್ಣಮ್ಮನ ಮುಖ ಚಿಕ್ಕದಾಗಿತ್ತು.

"ನೀವು ಬೇಸರ ಮಾಡ್ಕೋಬೇಡಿ.. ಈಗಿನ ಕಾಲದ ಹುಡುಗಿಯರೇ ಹೀಗೆ. ಬೇಕು ಅಂದ್ರೆ ಬೇಕು, ಬೇಡ ಅಂದ್ರೆ ಬೇಡವೇ ಬೇಡ.. ನನ್ನ ಹತ್ರವೂ ಹೀಗೇ ಒರಟೊರಟಾಗಿ ಮಾತಾಡ್ತಾಳೆ. ಏನ್ಮಾಡೋದು ಹೇಳಿ.. ನಮ್ಮ ಹಣೇ ಬರಹ.."

"ನಮ್ಮ ಚಿದೂಗೆ ಇದೆಲ್ಲ ಅಭ್ಯಾಸವಿಲ್ಲ. ಅವನಿಗೆ ಬೇಸರವಾಗುವ ಹಾಗೆ ಮಾತಾಡಿದ್ರೆ, ನಾನು ಹೇಗೆ ಸಹಿಸ್ಲೀ!"

"ಹಾಗೆಲ್ಲ ಏನೂ ಆಗುಲ್ಲ ಬಿಡಿ. ಅವನು ಗಂಡು ಹುಡುಗ. ಅಲ್ಲದೇ ಅವನು ಯಜಮಾನರ ರೂಂನಲ್ಲೇ ಇರ್ತಾನೆ. ಮಾತು ಕತೆ ತಾನೇ ಏನಿರುತ್ತೆ.... ಸ್ವಲ್ಪ ಎಚ್ಚರಿಕೆಯಿಂದ ಇರು ಅಂತ ನೀವು ಸೂಕ್ಷ್ಮವಾಗಿ ಹೇಳಿ. ಅಣ್ಣ ತಂಗಿ, ದಿನದಲ್ಲಿ ಹೆಚ್ಚು ಹೊತ್ತು ಮನೆಯಲ್ಲಿ ಇರೋದೇ ಇಲ್ಲ. ಏನಿದ್ರೂ ರಾತ್ರಿಯ ಹೊತ್ತು. ಅವರವರ ಪಾಡಿಗೆ ಅವರವರ ಊಟ, ಅವರವರ ರೂಮನ್ನು ಸೇರಿದರೆ, ನಿದ್ದೆ.. ದಿನಚರಿ ಮುಗೀತು.." ಆದರೂ ಮಂದಾಕಿನಿಗೆ ಪಿಚ್ ಎನಿಸಿತ್ತು. ಏನನ್ನೋ ಕಳೆದುಕೊಂಡವಳಂತೆ ಚಡಪಡಿಸಿದಳು. ಗುಣ, ಸ್ವಭಾವವೆಲ್ಲಾ ಅವಳ ಸ್ವಂತ ಅಮ್ಮನಂತೆಯೇ.... ಬಾಡಿಗೆ ತಾಯಿಯಂತೆ ಆಗಲು ಸಾಧ್ಯವೇ?.. ಒಡಲಲ್ಲಿ ಹೊತ್ತು ನೋವನ್ನುಂಡು ಹೆತ್ತವಳ ಕರ್ತವ್ಯ ಮುಗಿದಿತ್ತು. ಈಗ ಬಾಕಿ ಏನು ಉಳಿದಿದೆ?.. ನಿಟ್ಟುಸಿರು ಬಿಟ್ಟು, ಮುಂಬಾಗಿಲಿಗೆ

ಬಂದು ನಿಂತಳು. ಚಿದಾನಂದ ಗೇಟನ್ನು ದಾಟಿ ಬರುತ್ತಿದ್ದ. ಅವನಿಗೆ ಎಲ್ಲವನ್ನು ತಿಳಿಸಿ, ಅವನೊಂದಿಗೆ ಊರಿಗೆ ವಾಪಸ್ಸು ಹೊರಟು ಹೋದರೇ...ಹೇಗೆ? ಆದರೆ ಮರುಕ್ಷಣವೇ ಮನಸ್ಸು ಬೇಡ ಎಂದಿತು.

ಯಶವಂತರಾಯರು, ತನಗೆ ಆಶ್ರಯವನ್ನಿತ್ತು.. ತನಗೆ ಸಹಾಯ ಮಾಡಿದ್ದರು. ಈಗ ಅವರು ಅಸಹಾಯಕರಾಗಿ ಅಲ್ಲಾಡದೇ ಮಲಗಿದ್ದಾರೆ. ಅವರಿಗೆ ಒಬ್ಬ ಸಹಾಯಕನ ಅಗತ್ಯವಿದೆ. ತಾನೀಗ ಅದನ್ನು ಕಸಿದುಕೊಳ್ಳಬಾರದು ಅಂತ ಯೋಚಿಸಿದಳು.

"ಯಾಕಮ್ಮ ಬಾಗಿಲಲ್ಲಿ ನಿಂತಿದೀಯ! ನನಗೋಸ್ಕರ ಕಾಯ್ತಿದ್ಯಾ?" ಎಚ್ಚರಿಸಿದ.

"ಹೂಂ, ಕಣೋ.. ಹೋಗಿ ಎಷ್ಟು ಹೊತ್ತಾಯ್ತು.. ಊಟದ ಸಮಯವಾಗಿದೆ."

"ನಾನು ರಾತ್ರಿಯ ಬಸ್ಸಿಗೆ ಬುಕ್ ಮಾಡಿಸ್ಕೊಂಡು ಬಂದೆ.. ನಿಂದು ಊಟ ಆಯ್ತೇನಮ್ಮ?.."

"ಇಲ್ಲ.." ಎಂದಳು ಇಬ್ಬರೂ ಒಳಕ್ಕೆ ಬಂದರು. ಅನ್ನಪೂರ್ಣಮ್ಮ ಒಂದು ತಟ್ಟೆಯಲ್ಲಿ, ಅನ್ನಗಳನ್ನು ಕಲೆಸಿಟ್ಟಿದ್ದ ಕಪ್‌ಗಳನ್ನೂ ಚಮಚವನ್ನೂ ಇಟ್ಟಿದ್ದಳು. "ಇದು ಯಜಮಾನ್ರಿಗೆ.. ನಿಧಾನವಾಗಿ ತಿನ್ನಿಸ್ಬೇಕು" ಎಂದು ಹೇಳಿದಳು. ಕುಡಿಯಲು ಬೆಚ್ಚಗಿದ್ದ ನೀರನ್ನಿಟ್ಟಿದ್ದಳು. ಚಿದಾನಂದ ತಟ್ಟೆಯನ್ನು ಕೈಗೆತ್ತಿಕೊಂಡು, ತಾಯಿಯ ಕಡೆ ನೋಡಿದ. ಇಬ್ಬರೂ ಮಹಡಿಯನ್ನೇರಿದರು. ಮಂದಾಕಿನಿ, ರೂಮಿನ ಬಾಗಿಲಲ್ಲೇ ನಿಂತು, ಶೂನ್ಯವನ್ನು ದಿಟ್ಟಿಸುತ್ತಾ ಮಲಗಿದ್ದ ವ್ಯಕ್ತಿಯ ಕಡೆ ನೋಡಿದಳು. ಮನಸ್ಸು ಕಲಕಿತು. ಹಿಂದೊಮ್ಮೆ ಚಟುವಟಿಕೆಯಿಂದ ಕೂಡಿದ್ದ ವ್ಯಕ್ತಿ ಎಂದು ಹೇಗೆ ಹೇಳುವುದು! ಉಗುಳನ್ನು ನುಂಗಿ, ಅವರ ಎದುರಿಗೆ ಬಂದು ನಿಂತಳು. ಆತ ಇವಳನ್ನು ಗುರುತಿಸಿದಂತೆ ಅನ್ನಿಸಲಿಲ್ಲ. ಇವಳ ಎದೆ ಭಾರವಾಯಿತು.

ಚಿದಾನಂದ ಅವರನ್ನು ಎಬ್ಬಿಸಿ ಕೂರಿಸಿ, ದಿಂಬುಗಳಿಗೆ ಅವರ ಬೆನ್ನನ್ನು ಒರಗಿಸಿದ. ಚಮಚದಲ್ಲಿ ಸ್ವಲ್ಪ ಸ್ವಲ್ಪವೇ ತಿನ್ನಿಸಲಾರಂಭಿಸಿದ. ಮಂದಾಕಿನಿಗೆ, ಇನ್ನು ಅಲ್ಲಿ ನಿಂತಿರುವುದು ಕಷ್ಟವೆನಿಸಿತು. ಕೆಳಗಿಳಿದು ಬಂದಳು.

ಚಿದಾನಂದ ಅವರಿಗೆ ತಿನ್ನಿಸಿ, ಬಾಯನ್ನು ಒರಿಸಿ, ಆತನನ್ನು ಮತ್ತೆ ಮಲಗಿಸಿ ಕೆಳಗಿಳಿದು ಬಂದ. ಅನ್ನಪೂರ್ಣಮ್ಮ ತಾಯಿ ಮಗನನ್ನು ಕೂರಿಸಿ ಬಡಿಸಿದಳು. ತಾನೂ ಊಟವನ್ನು ಮುಗಿಸಿ, ಕೈ ಚೀಲಗಳನ್ನು ಹಿಡಿದು ಹೊರಟಳು.

"ನಾನು ಮಾರ್ಕೆಟ್ಟಿಗೆ ಹೋಗಿ ಬರ್ತೀನಿ.. ತರಕಾರಿ ಮುಗಿದು ಹೋಗಿದೆ." ಎಂದಳು.

"ಚಿದಾನಂದ ಹೋಗಿ ತರ್ತಾನೆ, ಏನು ತರ್ಬೇಕು ಅಂತ ಹೇಳಿ.."

"ಪರವಾಗಿಲ್ಲ, ಇವತ್ತು ನಾನೇ ತರ್ತೀನಿ.. ತಾಯಿ ಮಗ ಒಟ್ಟಿಗೇ ಕೂತು ಸ್ವಲ್ಪ ಹೊತ್ತು ಮಾತಾಡಿ. ರಾತ್ರಿ ವಾಪಸ್ಸು ಹೊರಟು ಬಿಡ್ತೀರಲ್ಲ. ಇನ್ನು ಬರೋದು ಎಷ್ಟು ದಿನಕ್ಕೋ.." ಆಕೆ ಹೊರಟು ಹೋದಳು.

"ಈಕೆ ಒಳ್ಳೆಯವಳ ಥರ ಕಾಣ್ತಾಳೆ. ಎರಡು ಮೂರು ವರ್ಷಗಳಿಂದ ಇಲ್ಲೇ ಇದಾಳಂತೆ.. ಈಕೆಗೂ ಸಹಾಯ ಮಾಡು.." ಚಿದಾನಂದ ಮುಗುಳ್ನಕ್ಕ.

"ನೀನು ಹೇಳ್ದಿದ್ರೂ ನಾನು ಮಾಡ್ತಿದ್ದೆ. ನನಗೆ ಇವರನ್ನು ಬಿಟ್ಟರೆ ಬೇರೆ ಯಾರಿದಾರೆ?"

"ಶರತ್ ಯಜಮಾನ.. ಚೈತ್ರಾ ಹುಡುಗಿ.. ನೀನು ನಿನ್ನ ಕೆಲಸ ಎಷ್ಟೋ ಅಷ್ಟೇ ಅಂತ ಇರು.. ಬೇರೆ ಏನೂ ಬೇಡ."

"ಯಾಕಮ್ಮ ಹೀಗೆಲ್ಲ ಹೇಳ್ತೀಯ... ನನ್ನ ಸ್ವಭಾವ ಏನೂಂತ ಗೊತ್ತಿಲ್ವಾ!"

"ಮನುಷ್ಯನ ಸ್ವಭಾವ ಬದಲಾಗೋದು ಎಷ್ಟು ಹೊತ್ತಲ್ಲಿದೆ ಹೇಳು.. ಶರತ್ ಆಗಲಿ, ಚೈತ್ರ ಆಗಲಿ ನಿನಗೆ ಸ್ವಂತದವರಾಗಲು ಸಾಧ್ಯವಿಲ್ಲ.."

"ಹೌದಮ್ಮ.. ಅವರಿಗೂ, ನಮಗೂ ಅಂತರವಿದೆ. ಅದು ಸದಾ ನೆನಪಿನಲ್ಲಿರುತ್ತೆ. ನೀನು ಆತಂಕ ಪಡ್ಬೇಡ. ನಾನು ನಿನಗೆ ಕೆಟ್ಟ ಹೆಸರನ್ನು ತರುವುದಿಲ್ಲ" ಎಂದು ವಿಶ್ವಾಸದಿಂದ ನುಡಿದಾಗ, ಅವಳು ಮಗನ ತಲೆಯನ್ನು ನೇವರಿಸಿದಳು.

* * *

ಚಿದಾನಂದನಿಗೆ ತಾಯಿಯ ಮಾತುಗಳು ನೆನಪಿಗೆ ಬಂದವು. ತಾಯಿಯನ್ನು ಬಸ್ಸಿಗೆ ಹತ್ತಿಸಿ, ವಾಪಸ್ಸು ಮನೆಗೆ ಬಂದವನಿಗೆ, ಮನಸ್ಸು ಖಾಲಿಯಾಗಿದೆ ಎಂದೆನಿಸಿತ್ತು. ಸೀದಾ ಮಹಡಿಯನ್ನೇರಿ, ತನಗೆಂದು ಹಾಕಿದ್ದ ಮಂಚದ ಮೇಲೆ ಕುಳಿತು, ತನ್ನ ಎದುರಿಗೆ ಮಲಗಿದ್ದ ವ್ಯಕ್ತಿಯನ್ನೇ ನೋಡಿದ. ಇಂಥವರ ಜೊತೆ ಜೊತೆಯಲ್ಲೇ ಇದ್ದರೆ, ಕೆಲವು ದಿನಗಳಲ್ಲಿ ತಾನು ಮೂಕನಾಗಿ ಬಿಡುತ್ತೇನೇನೋ ಎಂಬ ಭಯವೂ ಆವರಿಸಿಕೊಂಡಿತ್ತು ಹಾಸಿಗೆಯನ್ನು ಸರಿಯಾಗಿ ಹಾಸಿಕೊಂಡು ಮಲಗಿದ. ಶರತ್, ಹೇಳಿದ್ದುದನ್ನೆಲ್ಲಾ ಮನದಲ್ಲೇ ಟಿಪ್ಪಣಿ ಹಾಕಿಕೊಂಡ. ನಾಳೆಯಿಂದ ತನ್ನ ದಿನಚರಿ ಬದಲಾಗುತ್ತದೆ ಎಂದುಕೊಂಡು ನಿದ್ರಿಸಲು ಯತ್ನಿಸಿದ.

ಬೆಳಿಗ್ಗೆ ಎಚ್ಚರಗೊಂಡು, ಮುಖ ತೊಳೆದು ಕೆಳಗಿಳಿದು ಬಂದ. ಚೈತ್ರಾ ಕಾಲೇಜಿಗೆ ಹೊರಡಲು ಸಿದ್ಧಳಾಗಿದ್ದಳು. ಶರತ್ ವಾಕಿಂಗ್ ಹೋಗಿದ್ದ. ಅನ್ನಪೂರ್ಣಮ್ಮ ಬೆರೆಸಿದ್ದ ಹಾರ್ಲಿಕ್ಸ್‌ನ್ನು ಅವನ ಕೈಗಿತ್ತಳು. ಇದು ಯಜಮಾನ್ರಿಗೆ.." ಎಂದು ಹೇಳಿ, ಅವನ ಕೈಗೆ ಕಾಫಿಯ ಕಪ್‌ನ್ನಿತ್ತಳು. ಚೈತ್ರಾ ನಕ್ಕಳು.

"ಅಪ್ಪಂಗೆ ಕಾಫಿ ಕೊಡ್ತಿದೀರಾ.. ಆಂಟೀ..?" ಆಕೆ ತಬ್ಬಿಬ್ಬಾದಳು. "ಡ್ಯಾಡಿಗೆ ಹಾರ್ಲಿಕ್ಸ್.. ನಿಮಗೆ ಕಾಫಿ ಅಂತ ಸರ್ಯಾಗಿ ಹೇಳಿ.."

"ನಂಗೆ ಅರ್ಥವಾಗುತ್ತೆ.." ಚಿದಾನಂದ ಕಷ್ಟಪಟ್ಟು ನುಡಿದ.

"ಸರಿ, ಬನ್ನಿ... ಮೊದಲನೇ ದಿನ, ಡ್ಯಾಡಿಯ ಸೇವೆ ಹೇಗೆ ಮಾಡ್ತೀರಿ ಅಂತ ನಾನು ನೋಡ್ಬೇಕು" ಅಂತ ಅವನ ಹಿಂದೆಯೇ ಬಂದಳು. ಅವನು ಆತನನ್ನು ಸರಿಯಾಗಿ ಕೂರಿಸಿದ. ಇವಳು ತಂದೆಯ ಕೆನ್ನೆಯನ್ನು ಮೃದುವಾಗಿ ಮುಟ್ಟಿ, "ಗುಡ್ ಮಾರ್ನಿಂಗ್ ಡ್ಯಾಡಿ" ಎಂದಳು. ಆತ ಸುಮ್ಮನೇ ನೋಡಿದರು. ಚಿದಾನಂದ ಚಮಚದಲ್ಲಿ ಹಾರ್ಲಿಕ್ಸ್‌ನ್ನ ಕುಡಿಸಿ, ತುಟಿಗಳನ್ನು ಒರೆಸಿದ.

"ಗುಡ್.. ಸರಿಯಾಗಿ ಕುಡಿಸಿದ್ರಿ! ಈ ಮುಂಚೆ ಎಲ್ಲಾದ್ರೂ ಪೇಶೆಂಟ್‌ಗಳನ್ನು

ನೋಡಿಕೊಂಡಿರುವ ಅನುಭವ ಇದೆಯಾ?''

"ಹುಂ, ಸ್ವಲ್ಪ ಇದೆ. ಟ್ರೈನಿಂಗ್ ಸಮಯದಲ್ಲಿ....."

"ವೆರಿಗುಡ್......ಡ್ಯಾಡಿ ಆದಷ್ಟು ಬೇಗ ರಿಕವರ್ ಆಗುವ ಹಾಗೆ ನೀವು ಪ್ರಯತ್ನ ಮಾಡ್ಬೇಕು. ವಾರದಲ್ಲಿ ಎರಡು ಸಾರಿ ಡಾಕ್ಟರ್ಸ್ ಬರ್ತಾರೆ. ಅವರ ಹತ್ರ ನೀವೇ ಮಾತಾಡ್ಬೇಕು."

"ಸರಿ, ಇದನ್ನೆಲ್ಲ ಶರತ್ ಹೇಳಿದಾರೆ.."

"ಯಾಕ್ರೀ.. ಇನ್ನೊಂದ್ಸಾರಿ ನಾನೂ ಹೇಳಿದ್ರೆ ಕೇಳಿಸ್ಕೊಳ್ಳೋಕೆ ಬೇಜಾರಾ?"

"ಹಾಗೇನಿಲ್ಲ, ಹುಂ, ಹೇಳಿ...."

"ನಂಗೆ ಕಾಲೇಜ್ಗೆ ಹೊತ್ತಾಯ್ತು.. ಬಂದ್ಮೇಲೆ ವಿಚಾರಿಸಿಕೊಳ್ತೀನಿ.." ಎಂದು ಹೇಳಿ ಹೊರಟವಳು, ರೂಮಿನ ಬಾಗಿಲ ಬಳಿ ನಿಂತು ತಿರುಗಿ ನೋಡಿದಳು. ಅವನು ಕಾಫಿಯನ್ನು ಕುಡಿಯುತ್ತಿದ್ದ.

"ಹೇಗಿದೆ ನಮ್ಮ ಮನೆಯ ಕಾಫೀ?"

"ತಣ್ಣಗಿದೆ" ಎಂದು ಹೇಳಿ ಕಾಫಿಯನ್ನು ಮುಗಿಸಿ, ಕಪ್‌ನ ಪಕ್ಕಕ್ಕಿಟ್ಟ.. ಕುಡಿದ ಕಪ್‌ಗಳನ್ನು ಜೋಡಿಸಿಟ್ಟುಕೊಂಡು ಕೆಳಗಿಳಿದು ಬಂದ. ಅನ್ನಪೂರ್ಣಮ್ಮ ಅವನ ಕೈಗೆ ಬಿಸಿಯಾಗಿ ಹೊಗೆಯಾಡುತ್ತಿದ್ದ ಕಾಫಿಯ ಕಪ್‌ನ್ನು ಕೊಟ್ಟಳು.

"ಕಾಫಿ ತಣ್ಣಗಾಯ್ತೇನೋ...,...ಆರುಕ್ಕೆ ಮೊದಲೇ ಕುಡಿಯಬೇಕಾಗಿತ್ತು.."

"ಪರವಾಗಿಲ್ಲ ಬಿಡಿ.. ಅಭ್ಯಾಸವಾಗುತ್ತೆ.."

"ಹಾಗೇ ಅಭ್ಯಾಸ ಮಾಡ್ಕೋಬೇಕು ಅಂತೇನಿಲ್ಲ. ಇನ್ನು ಮುಂದೆ, ನೀನೂ ಈ ಮನೆಯಲ್ಲಿ ಒಬ್ಬ ಸದಸ್ಯನೇ.. ನಿನಗೇನು ಬೇಕೋ ನನ್ನನ್ನು ಕೇಳು. ಇಲ್ಲಿ ತಿನ್ನುಕ್ಕೆ ಉಣ್ಣುಕ್ಕೆ ಏನೂ ಕೊರತೆ ಇಲ್ಲ. ನೀನು ಇನ್ನೂ ಯುವಕ. ಚೆನ್ನಾಗಿ ತಿಂದು ಉಂಡು ಮಾಡುವ ವಯಸ್ಸು..ಸಂಕೋಚಪಟ್ಕೋಬೇಡ.."

"ಆಯ್ತು, ಸಂಕೋಚ ಏನಿಲ್ಲ. ಕೇಳ್ತೀನಿ." ಎನ್ನುತ್ತಾ ಕಾಫಿಯನ್ನು ಮುಗಿಸಿದ. ಬಹುಶಃ ಚೈತ್ರಾ ಕಾಫಿ ತಣ್ಣಗಾಗಿತ್ತು ಎಂದು ಹೇಳಿರಬಹುದು ಅಂತಂದುಕೊಂಡ. ಮನಸ್ಸು ಮುಗುಳ್ನಕ್ಕಿತ್ತು.

ಮಧ್ಯಾಹ್ನ ಊಟದ ಸಮಯದಲ್ಲಿ ಮನೆಗೆ ಬಂದ ಚೈತ್ರಾ, ಊಟ ಮಾಡಿ ಕೈ ತೊಳೆದು ಮಹಡಿಯ ಮೇಲಿನ ರೂಮಿಗೆ ಬಂದಳು. ಕೈಯಲ್ಲೊಂದು ಪುಸ್ತಕವನ್ನು ಹಿಡಿದು ಕೂತಿದ್ದವನು ಹೆಜ್ಜೆಯ ಸಪ್ಪಳ ಕೇಳಿ ನೆಟ್ಟಗೆ ಕೂತ...

"ಡ್ಯಾಡಿ ಏನಂತಾರೆ? ನೀವು ಅಡ್ಜಸ್ಟ್ ಆದ್ರಾ ಅವರಿಗೆ?"

"ಏನೋ ನಂಗೊತ್ತಿಲ್ಲ.. ಹೇಗೆ ಹೇಳ್ಲಿ?"

"ಅವರನ್ನ ಅಬ್ಸರ್ವ್ ಮಾಡ್ಬೇಕ್ರೀ.. ಬೈದಿ ಬೈ.. ನಿಮ್ಮ ಹೆಸರು ಚಿದಾನಂದ ಅಂತ ಆಂಟಿ ಹೇಳಿದ್ರು.. ನಾನು ಆನಂದ್ ಅಂತ ಕರೀತೀನಿ.. ಡ್ಯಾಡಿಯ ಮೂಡ್‌ಗೆ ಸೂಟ್ ಆಗುತ್ತೆ."

"ಹೇಗೆ ಬೇಕಾದ್ರೂ ಕರೀರಿ.. ಅಮ್ಮ ಚಿದೂ ಅಂತ ಕರೀತಾಳೆ."

"ನೀವು ಅಮ್ಮನ ಮುದ್ದಿನ ಮಗ ಅಂತ ಗೊತ್ತು.. ಅಮ್ಮನ್ನ ಬಿಟ್ಟು ಇಲ್ಲಿ ಹೇಗೆ ಇರ್ತೀರಾ?" ಕಿಲಕಿಲನೆ ನಕ್ಕಳು. ಅವನು ಅವಳ ಮುಖವನ್ನೇ ನೋಡಿದ, "ಯಾಕ್ರೀ ಹಾಗೆ ನೋಡ್ತಿದೀರಿ?"

"ನಿಮಗೂ ನಗುಕ್ಕೆ ಬರುತ್ತಾ ಅಂತ ನೋಡ್ತಿದ್ದೆ" ನಿಜವನ್ನೇ ಹೇಳಿದ.

"ಹೂಂ, ಡ್ಯಾಡಿಯ ರೂಮಿಗೆ ಬಂದಾಗ, ಡ್ಯಾಡಿಗೆ ಬೇಸರವಾಗದಿರಲಿ ಅಂತ ನಗ್ತೀನಿ.. ಏನೋ ಪುಸ್ತಕ ಓದ್ತಿದ್ರಿ.. ಏನದು! ಓದುವ ಅಭ್ಯಾಸ ಹೆಚ್ಚಾಗಿದೆಯಾ?" ಎನ್ನುತ್ತಾ ಅವನು ಮಡಿಸಿಟ್ಟಿದ್ದ ಪುಸ್ತಕವನ್ನು ಕೈಗೆತ್ತಿಕೊಂಡಳು.

"ಸ್ವಲ್ಪ ಓದ್ತೀನಿ.. ಇಲ್ಲಿ ಷೆಲ್‌ಫ್‌ನಲ್ಲಿ ಸಿಕ್ತು. ಪತ್ತೇದಾರಿ ಕಾದಂಬರಿ.. ಸಸ್ಪೆನ್ಸ್ ಇದೆ.

"ಹೆಚ್ಚು ಪತ್ತೇದಾರಿ ಪುಸ್ತಕ ಓದೋದು ಒಳ್ಳೆಯದಲ್ಲ. ಕೆಟ್ಟ ಬುದ್ಧಿ ಬಂದು ಬಿಡುತ್ತೆ."

"ಹಾಗಂತ ಯಾರು ಹೇಳಿದ್ರು?.. ಪುಸ್ತಕಗಳನ್ನು ಓದಿ ಬುದ್ಧಿ ಕೆಡಿಸಿಕೊಳ್ಳುವವನಲ್ಲ ನಾನು. ಸಮಯ ಹೋಗುಲ್ಲ ಅಂತ ಓದ್ತೀನಿ ಅಷ್ಟೆ." ಒರಟಾಗಿ ನುಡಿದ.

"ನೋಡಿದ್ರಾ? ಕೋಪ ಬಂತು. ಕೋಪ ಒಳ್ಳೆಯ ಗುಣಾನಾ?"

"ಮತ್ತೆ ಹೀಗೆಲ್ಲಾ ಮಾತಾಡಿದ್ರೆ? ನಾನು ಕೆಟ್ಟವನಲ್ಲ.."

"ಸರಿ, ಕೆಟ್ಟೋರೋ ಒಳ್ಳೋರೋ ಅಂತ ಗೊತ್ತಾಗ್ದೇ ಇರುತ್ತಾ!.. ಡ್ಯಾಡಿಯ ಊಟ ಆಯ್ತಾ?.. ಇವತ್ತು ಸಾಯಂಕಾಲ ಡಾಕ್ಟರು ಬರ್ತಾರೆ.. ಇಲ್ಲೇ ಇದ್ದು ಅವರು ಕೇಳಿದ್ದಕ್ಕೆಲ್ಲ ಉತ್ತರ ಹೇಳ್ಬೇಕು ನೀವು.."

"ನಾನಿನ್ನು ಹೊಸಬ.. ನನಗೇನು ಗೊತ್ತಿದೆ?..ನಿಮ್ಮ ಅಣ್ಣನಿಗೆ ಹೇಳ್ತೀರಾ?"

"ಅವನೆಲ್ಲಿ ಸಿಗ್ತಾನೆ?..ನಾನೇ ಬರ್ತೀನಿ. ಅಷ್ಟೇ.." ಅವಳು ಕೆಳಗಿಳಿದು ಹೋದಳು. ಅವನು ಅವಳ ಬಗ್ಗೆ ಚಿಂತಿಸಿದ. ಶರತ್ ಮನೆಯಿಂದ ಹೆಚ್ಚು ಹೆಚ್ಚು ಹೊರಗೇ ಇರ್ತಾನೆ.. ಇವಳನ್ನೇ ಎಲ್ಲಾದಕ್ಕು ಕೇಳ್ಬೇಕಾಗುತ್ತೇನೋ.. ಅವಳ ಮಾತಿನಲ್ಲಿ ಸ್ನೇಹವಿದ್ದಂತೆ ಇಲ್ಲ. ಆದರೆ, ಒರಟಾಗಿ ಮಾತನಾಡಿದರೂ ನಾನು ಸಹಿಸಿಕೊಳ್ಳಬೇಕಾಗುತ್ತದೆ. ನಾನೂ ಒರಟಾಗಿ ಮಾತನಾಡಿದರೆ ಕೆಲಸವನ್ನು ಕಳೆದುಕೊಳ್ಳಬೇಕಾಗಬಹುದು ಎಂದುಕೊಂಡ. ಆ ಅನಿಸಿಕೆ ಹಿತವಾಗಿರಲಿಲ್ಲ..

ಕ್ರಮೇಣ ಇವರಿಬ್ಬರಲ್ಲಿ ಸ್ನೇಹವೇರ್ಪಟ್ಟಿತು. ಡ್ಯಾಡಿಯನ್ನು ನೋಡುವ, ಮಾತನಾಡಿಸುವ ನೆಪದಲ್ಲಿ ಅವಳು ಆಗಾಗ ಬರತೊಡಗಿದಳು. ಸಮೀಪದಲ್ಲಿದ್ದ ಲೈಬ್ರರಿಯಿಂದ ಅವನಿಗೆ ಓದಲು ಕನ್ನಡ ಕಾದಂಬರಿಗಳನ್ನು ತಂದುಕೊಡುತ್ತಿದ್ದಳು. ಅವನ ಊಟ ತಿಂಡಿಯ ಬಗ್ಗೆ ವಿಚಾರಿಸಿಕೊಳ್ಳುತ್ತಿದ್ದಳು. ತಿಂಗಳು ಕಳೆಯುವಷ್ಟರಲ್ಲಿ ಇಬ್ಬರೂ ಆತ್ಮೀಯರಾಗಿದ್ದರು.

"ನಿಮಗೆ ಗೊತ್ತಾ ಆನಂದ್?.. ಮುಂಚೆ ಇದ್ದ ಹೆಲ್ಪರ್ಸ್‌ಗಳು ನಿಮ್ಮ ಹಾಗಿರಲಿಲ್ಲ."

"ಅಂದ್ರೇ.. ಹೇಗಿದ್ರು?.."

"ನಿಮ್ಮ ಹಾಗೆ ಒಳ್ಳೆಯವರಾಗಿರಲಿಲ್ಲ. ಹ್ಯಾಂಡ್ಸಮ್ ಆಗಿರಲಿಲ್ಲ.."

"ನಾನು ಹ್ಯಾಂಡ್ಸಮ್ ಅಂತ ನೀವೇ ಮೊದಲು ಹೇಳಿದ್ದು. ನನಗೆ ಹಾಗೆಂದೂ ಅನಿಸಿಲ್ಲ. ಅಮ್ಮ ಕೂಡಾ ಹೇಳಿಲ್ಲ.."

"ಅಮ್ಮ ಅಮ್ಮ.. ಅಮ್ಮನ್ನ ಬಿಟ್ಟರೆ ಬೇರೆ ಯಾರಿದಾರಿ ನಿಮಗೆ? ಯಾರಾದರೂ ಗರ್ಲ್‌ಫ್ರೆಂಡ್ ಇದ್ದಿದ್ರೆ, ಖಂಡಿತಾ ಈ ಮಾತನ್ನು ಹೇಳಿರುತಿದ್ಲು.."

"ಗರ್ಲ್‌ಫ್ರೆಂಡಾ? ಹಾಗಂದ್ರೆ ಯಾರು?" ಬೇಕಂತ ಕೇಳಿದ. ಅವಳು ಅವನ ಬೆನ್ನ ಮೇಲೆ ಗುದ್ದಿದಳು. ಅವನು "ಹ್ಲಾಂ" ಎಂದು ಹೇಳಿ, ಕೈಯನ್ನು ಹಿಡಿದ.

"ಕಾದಂಬರಿಗಳನ್ನು ಓದ್ತೀರಿ, ಗರ್ಲ್‌ಫ್ರೆಂಡ್ ಅಂದ್ರೆ ಗೊತ್ತಿಲ್ವಾ?.. ನೀವೂ ಕಾಲೇಜಿಗೆ ಹೋಗಿದ್ದಿದ್ರೆ ನಿಮಗೂ ಹುಡುಗಿಯರ ಸ್ನೇಹ ಸಿಗ್ತಿತ್ತು.. ಹೋಗ್ಲಿ ಬಿಡಿ. ಒಳ್ಳೇದೇ ಆಯ್ತು. ಇಲ್ದಿದ್ರೆ ನಂಗೆಲ್ಲಿ ಸಿಗ್ತಿದ್ರಿ ನೀವು?"

"ನಿಮಗೆ ಬಾಯ್‌ಫ್ರೆಂಡ್ ಇದಾರಾ?" ಕುತೂಹಲದಿಂದ ಕೇಳಿದ.

"ಹೂಂ, ಇದಾರೆ...." ಅವನ ಮುಖ ಪೆಚ್ಚಾಯಿತು. ಅವನ ಕೆನ್ನೆಯನ್ನು ಹಿಂಡಿದಳು. ಅವನು ನೋವಿನಿಂದ ಮುಖ ಕಿವುಚಿದ. ಅವಳು ಸರ್ರನೆ ಅವನ ಕೆನ್ನೆಗೆ ತುಟಿಯನ್ನು ತಗುಲಿಸಿದಳು. "ಸಾರೀ.. ಸಾರೀ.. ನೋವಾಯ್ತಾ?" ಎಂದಳು. ಅವನು ಹಿಂದಕ್ಕೆ ಸರಿದ.

"ಏನ್ಮಾಡ್ತಿದೀರಿ ನೀವು.. ಇದು ಸರಿ ಅಲ್ಲ.."

"ಈಗ ಈ ಕಾಲದಲ್ಲಿ ಇದೆಲ್ಲಾ ಮಾಮೂಲು. ಕಾಲೇಜ್ನಲ್ಲಿ ಬಂದು ನೋಡಿ. ಹುಡುಗ ಹುಡುಗಿಯರು ಕೈ ಕೈ ಹಿಡಿದು ಸುತ್ತಾಡ್ತಾರೆ. ಒಟ್ಟೊಟ್ಟಿಗೇ ಇರ್ತಾರೆ.."

"ಹಾಗಾದ್ರೆ ಓದೋದು? ಓದು, ಪರೀಕ್ಷೆ.. ಇದಕ್ಕಲ್ವಾ? ಕಾಲೇಜಿಗೆ ಹೋಗೋದು."

"ಹೌದು, ಅಂಥೋರೂ ಇದಾರೆ.. ಇಂಥೋರೂ ಇದಾರೆ...." ಅವನು ಸುಮ್ಮನಾದ. ಅವಳು ಮತ್ತೆ ನಕ್ಕಳು. "ನಾನು ಅಂಥೋಳಲ್ಲಪ್ಪಾ.. ಗಾಬರಿಯಾಗ್ಬೇಡಿ.. ನನಗೆ ಗರ್ಲ್‌ಫ್ರೆಂಡ್ಸ್ ಮಾತ್ರ ಇದಾರೆ.."

"ಬಾಯ್‌ಫ್ರೆಂಡ್ ಇದಾರೆ ಅಂತ ಹೇಳಿದ್ರಿ..?

"ಓ..ಅದಾ! ಸಮಯ ಬಂದಾಗ ಹೇಳ್ತೀನಿ.. ಗುಡ್ ನೈಟ್" ಎಂದು ಹೇಳಿ ಮತ್ತೊಮ್ಮೆ ಅವನ ಕೆನ್ನೆಯನ್ನು ಚುಂಬಿಸಿ, ನಗುತ್ತಾ ರೂಮಿನಿಂದ ಆಚೆ ನಡೆದಳು. ಅವಳ ತುಟಿಗಳು ತಗುಲಿದ್ದ ಭಾಗವನ್ನು ಕೈಯಿಂದ ಮುಟ್ಟಿಗೊಂಡ. ಬಿಸಿಯಾಗಿದೆಯೆನ್ನಿಸಿತು, ಭಯವೂ ಆಯಿತು. ಈ ಹುಡುಗಿ ಅಪಾಯಕಾರಿ. ಹೀಗೇ ಮುಂದುವರೆದರೆ, ತಾನು ಇಲ್ಲಿಂದ ಆದಷ್ಟು ಬೇಗ ಹೋಗಬೇಕಾಗುತ್ತದೆಂದುಕೊಂಡ.

ಆದರೆ ಅವಳ ಸಲುಗೆ ಹಾಗೇ ಮುಂದುವರೆದಿತ್ತು. ಅವಳಿಗೆ ತಿಳುವಳಿಕೆಯನ್ನು ಹೇಳಬೇಕೆಂದುಕೊಂಡ, ಒಮ್ಮೆ ಸಮಯವನ್ನು ಸಾಧಿಸಿ ಮಾತನಾಡಿದ.

"ನೀವು ಹೀಗೇಕೆ ವರ್ತಿಸುತ್ತೀರೋ ನಂಗೆ ಗೊತ್ತಿಲ್ಲ. ನನಗೆ ಕಷ್ಟವಾಗುತ್ತೆ." ಎಂದ.

"ಯಾಕ್ರೀ, ಗಂಡಸಾಗಿ ಹೆದರ್ತೀರಿ!.. ಸಲುಗೆಯಾಗಿ ಇದ್ದ ಮಾತ್ರಕ್ಕೆ ಏನೂ ಅನಾಹುತವಾಗುಲ್ಲ.. ನಿಮ್ಮ ಬಗ್ಗೆ ನನಗೆ ವಿಶ್ವಾಸವಿದೆ.. ಈಗ ಫ್ರೆಂಡ್ಸ್ ಆಗಿದೀವಿ.. ಮುಂದೆ ಎಂದಾದ್ರೂ ಐ ಲವ್ ಯೂ ಅಂತ ಹೇಳ್ತೀನಿ, ಭಯ ಪಡ್ಬೇಡಿ."

"ಹಾಗೆ ಹೇಳ್ಬೇಡಿ, ಭಯ ಆಗುತ್ತೆ.. ನನ್ನ ಕೆಲಸ ಹೋಗುತ್ತೆ.."

"ಕೆಲಸ ಯಾಕ್ರೀ ಹೋಗುತ್ತೆ..? ನನ್ನ ಓದು ಮುಗಿಯುವವರೆಗೆ ಹೀಗೆ ಸ್ನೇಹಿತರಾಗಿರೋಣ.. ಆಮೇಲೆ ಏನು ಮಾಡ್ಬೇಕು ಅಂತ ಹೇಳ್ತೀನಿ.. ನಿಮ್ಮ ಕೆಲಸ ಮಾತ್ರ ಗ್ಯಾರಂಟಿ.."

"ಹಾಗಾದ್ರೆ, ನೀವು ದೂರ ನಿಂತು ಮಾತಾಡ್ಬೇಕು.......ನನಗೆ ಇದೆಲ್ಲ ಅಭ್ಯಾಸವಿಲ್ಲ.."

"ಸರಿ, ಪ್ರಯತ್ನ ಪಡ್ತೀನಿ" ಎಂದು ಹೇಳಿದ್ದಳು. ಆದರೆ ಆಮೇಲೆ ಅವನಿಗೆ ಚಿಂತೆಯಾಗಿತ್ತು.. ತಾನು ಹಾಗೆ ಹೇಳಿದ್ದರಿಂದ, ಅವಳು ತನ್ನ ಮೇಲೆ ಬೇಸರಗೊಂಡರೆ!.. ತನ್ನ ಬಗ್ಗೆ ಉದಾಸೀನ ಬಂದರೆ?..... ಆದರೆ ಹಾಗೇನೂ ಆಗಲಿಲ್ಲ....ಮೊದಲಿನಂತೆಯೇ ಸ್ನೇಹದಿಂದ ಇರುತ್ತಿದ್ದಳು. ಅವಳ ಸ್ವಭಾವವೇ ಹಾಗೇನೋ ಅಂತ ಅಂದುಕೊಂಡ. ಕ್ರಮೇಣ ಅವಳ ಬಗ್ಗೆ ಅವನೂ ಆಸಕ್ತಿಯನ್ನು ಮೂಡಿಸಿಕೊಂಡ. ಆದರೆ ಸಂಯಮವನ್ನು ಕಳೆದುಕೊಳ್ಳಲಿಲ್ಲ. ಸ್ನೇಹ ಸಲುಗೆ ಇದ್ದರೂ, ಅವಳೂ ಎಂದೂ ಮತ್ತೆ ಅತಿಯಾಗಿ ವರ್ತಿಸಲಿಲ್ಲ. ಅವನಿಗೆ ಅದೇ ಸಮಾಧಾನವಾಗಿತ್ತು.

ಅವಳು ಆಗೊಮ್ಮೆ ಈಗೊಮ್ಮೆ ಅವನನ್ನು ಪ್ರೀತಿಸುತ್ತಿರುವುದಾಗಿ ಹೇಳಿದ್ದರೂ, ಇವನು ಬಾಯಿ ತಪ್ಪಿ ಎಂದೂ, ತಾನು ಪ್ರೀತಿಸುತ್ತಿದ್ದೇನೆಂದು ಹೇಳಿರಲಿಲ್ಲ. ಹೇಳಲು ಸಾಧ್ಯವೂ ಇರಲಿಲ್ಲ. ಪ್ರೀತಿ, ಪ್ರೇಮಕ್ಕೆ ಇಲ್ಲಿ ಆಸ್ಪದವಿಲ್ಲ. ಇವಳಿಗೆ ತಾನು ಯಾವ ರೀತಿಯಿಂದಲೂ ಸಮಾನನಲ್ಲ.. ಪ್ರೀತಿಸಲು ತನಗೆ ಅರ್ಹತೆ ಇಲ್ಲ.....ಏನೋ ತಿಳುವಳಿಕೆ ಸಾಲದು. ತಿಳುವಳಿಕೆ ಹೇಳಲು ತಾಯಿಯಿಲ್ಲ. ಅತ್ತಿಗೆ ಬಂದಿಲ್ಲ. ಅನ್ನಪೂರ್ಣಮ್ಮ ತಾಯಿಯಲ್ಲ. ತನ್ನ ಸಹಪಾಠಿಗಳು ವರ್ತಿಸುವ ರೀತಿಯಿಂದ ಇವಳಿಗೂ ಹಾಗೆನ್ನಿಸಿರಬಹುದು.. ಇದನ್ನು ತಾನು ಪ್ರೋತ್ಸಾಹಿಸಬಾರದು.. ಈ ಬಗ್ಗೆ ಶರತ್‌ಗೆ ಅನುಮಾನ ಬಂದರೆ, ಅವನ ಕೋಪ ತನ್ನ ಮೇಲೆಯೇ.....ತಾನು ಅವಮಾನಿತನಾಗಬಾರದು ಅಂತಲೇ ಯೋಚಿಸುತ್ತಿದ್ದ.. ಆದರೆ ಅವಳ ಸ್ನೇಹವೇ ಬೇಡ ಎಂದು ಹೇಳುವುದೂ ಸಾಧ್ಯವಿರಲಿಲ್ಲ. ದಿನಗಳು ಹೀಗೇ ಕಳೆದವು. ಅವನು ಈಗ ಆಪ್ತಮಿತ್ರನಾಗಿದ್ದ. ಮನೆಯ ಸಮಸ್ಯೆಗಳನ್ನು ಹಂಚಿಕೊಳ್ಳುವಷ್ಟು ಹತ್ತಿರದವನಾಗಿದ್ದ. ಶರತ್‌ನ ಈ ಆಲೋಚನೆ ಸರಿಯೋ ತಪ್ಪೋ..ಎಂದು ನಿರ್ಧರಿಸಲು ಕಷ್ಟವಾಗಿತ್ತು. ಈಗ ತನ್ನ ಬಳಿ ತಾಯಿಯಿದ್ದಿದ್ದರೇ.. ಅಂತನ್ನಿಸಿತ್ತು. ತಾಯಿಗೆ ಫೋನು ಮಾಡಿದ.

* * *

ಇದ್ದಕ್ಕಿದ್ದಂತೆ ಮಂದಾಕಿನಿ ಬಂದು ಇಳಿದಳು. ಅವಳನ್ನು ಕಂಡು ಚೈತ್ರಾ ಕೆಟ್ಟ ಮುಖ ಮಾಡಿದಳು. "ಹೇಗಿದೀಯಮ್ಮ ಚೈತ್ರಾ?" ಮುಗುಳ್ನಗುತ್ತಾ ಕೇಳಿದಾಗ, ಇವಳು ಸರಿಯಾಗಿ ಉತ್ತರಿಸಲಿಲ್ಲ. ಸುಮ್ಮನೇ ತಲೆಯಾಡಿಸಿದಳು. ಚಿದಾನಂದ ಕೆಳಗಿಳಿದು ಬಂದಿರಲಿಲ್ಲ. ಚೈತ್ರಾ ಮಹಡಿಯನ್ನೇರಿದಳು.

"ನಿಮ್ಮ ಅಮ್ಮ ಬಂದಿದಾರೆ.. ನೀವು ಬಾ ಅಂತ ಕಾಗ್ದ ಬರೆದಿದ್ರಾ?"

"ಹೌದಾ!..ಎಲ್ಲೋ ನನ್ನನ್ನು ನೋಡ್ಬೇಕು ಅಂತ ಅನ್ನಿಸಿರ್ಬೇಕು.. ಬಂದಿದಾಳೆ.. ಎನ್ನುತ್ತಾ ಕೆಳಗಿಳಿಯಲು ಹೊರಟವನನ್ನು ತಡೆದಳು.

"ಅಮ್ಮನ ಹತ್ರ ಈಗ್ಲೇ ಏನನ್ನೂ ಹೇಳ್ಬೇಡಿ. ನಾನು ಈಗಲೇ ಮದುವೆಗೆ ರೆಡಿಯಿಲ್ಲ.. ಅವರನ್ನು ಆದಷ್ಟು ಬೇಗ ಕಳಿಸಿಬಿಡಿ.. ಸಧ್ಯಕ್ಕೆ ನಮ್ಮ ಮನೆಯ ಸಮಸ್ಯೆಗಳೇ ಜಾಸ್ತಿ ಆಗಿದೆ.."

"ಈಗ್ಲೇ ಹೋಗು ಅಂತ ಹೇಗೆ ಹೇಳ್ಲೀ.. ನಾನು ಅವಳ ಮಗ.."

"ನಂಗೂ ಗೊತ್ತು.. ಆದರೆ ನಾನು ನಿಮ್ಮ ಹತ್ರ ಫ್ರೀಯಾಗಿ ಮಾತನಾಡುಕ್ಕಾಗುಲ್ಲ."

"ನಂಗೂ ಅರ್ಥವಾಗುತ್ತೆ ಚೈತ್ರಾ.. ಅಮ್ಮ ಹೆಚ್ಚು ದಿನ ಇರುಲ್ಲ.. ಅವಳು ಸೂಕ್ಷ್ಮ ಸ್ವಭಾವದವಳು. ಬೇರೆಯವರಿಗೆ ಬೇಸರವನ್ನುಂಟು ಮಾಡುಲ್ಲ."

"ಸಾರಿ, ಆನಂದ್. ನಿಮಗೆ ನನ್ನ ಮಾತ್ನಿಂದ ಬೇಸರವಾಗಿರಬಹುದು. ಆದರೆ ನಾನು ಏನು ಮಾಡ್ಲಿ? ನಾನೂ ಸ್ವಾರ್ಥಿ.. ಅಮ್ಮ ಇದ್ದಿದ್ರೆ ಹೀಗೆಲ್ಲಾ ಆಗ್ತಿರ್ಲಿಲ್ಲ.. ಎನ್ನುತ್ತಾ ಅವನ ಎದೆಗೆ ಒರಗಿದಳು. ಅವನು ಮೆಲ್ಲಗೆ ಅವಳನ್ನು ಸರಿಸಿದ. "ಅಮ್ಮ ಬಂದ್ಮೇಲೆ, ನಾನು ಬೇಡ ಆದ್ನಾ?" ಬಿರುಗಣ್ಣು ಬಿಟ್ಟು ಕೇಳಿದಳು.

"ಹಾಗಲ್ಲ, ಅಮ್ಮಂಗೆ ಈಗಲೇ ಅನುಮಾನ ಬಂದರೆ ಚೆನ್ನಾಗಿರುತ್ತಾ?.. ಇವತ್ತೇ ನನ್ನನ್ನು ಇಲ್ಲಿಂದ ಕರ್ಕೊಂಡು ಹೋಗ್ತಾಳೆ ಅಷ್ಟೇ...."

"ಹೌದು, ನಿಮ್ಮಮ್ಮ ಅಂಥೋರೆ, ಹಾಗೆ ಮಾಡಿದ್ರೂ ಮಾಡಿದ್ರೇ..... ನಾನು ಇಲ್ಲೇ ಡ್ಯಾಡಿಯ ಹತ್ರ ಕೂತಿರ್ತೀನಿ. ನೀವು ಅಮ್ಮನನ್ನು ನೋಡಿ ಮಾತನಾಡ್ಸಿ...." ಅವಳು ಅವನನ್ನು ಕೆಳಕ್ಕೆ ಕಳಿಸಿ, ಗಲ್ಲಕ್ಕೆ ಕೈ ಊರಿ, ತಂದೆಯ ಮುಖವನ್ನೇ ಗಮನಿಸುತ್ತಾ ಕುಳಿತಳು.

* * *

"ಚೈತ್ರಾ.. ಚೈತ್ರಾ.." ಎಂದು ಅವಳನ್ನು ಹುಡುಕುತ್ತಾ ಶರತ್ ಮಹಡಿಯ ಮೇಲಿನ ರೂಮಿಗೆ ಬಂದ. "ಇಲ್ಲೇನು ಮಾಡ್ತಿದೀಯ? ಚಿದಾನಂದ ಎಲ್ಲಿ?" ಕೇಳಿದ.

"ಅವನ ತಾಯಿ ಬಂದಿದಾರೆ, ಮಾತಾಡ್ತಾ ಇದಾರೇನೋ, ನೀನು ನೋಡ್ಲಿಲ್ವಾ!"

"ಇಲ್ಲ, ನಾನು ನೋಡ್ಲಿಲ್ಲ, ಆಕೆ ಯಾಕೆ ಬಂದಿದಾರೆ! ಹೋಗ್ಲಿ ಬಿಡು, ನಿನ್ನ ನಿರ್ಧಾರ ತಿಳಿಸ್ಲೇ ಇಲ್ಲ, ಬೇಗ ತಿಳಿಸು ಅಂತ ಹೇಳಿರ್ಲಿಲ್ವಾ?"

"ಇನ್ನೊಂದು ತಿಂಗಳಿಗೆ ಫೈನಲ್ ಪರೀಕ್ಷೆ ಇದೆ....ಓದುಕ್ಕೇ ಆಗ್ತಿಲ್ಲ.."

"ಆದಕ್ಕೆ ಇನ್ನು ಸಮಯವಿದೆ.. ಓದಿದರಾಯ್ತು.."

"ನನ್ನ ಪರೀಕ್ಷೆಗಿಂತ ನಿನ್ನ ಪ್ರಾಬ್ಲಂ ಹೆಚ್ಚಾ?"

"ನಿಂಗೆ ನನ್ನ ಪ್ರಾಬ್ಲಂ ಅರ್ಥವಾಗ್ತಿಲ್ಲ. ಅವನು ಎಲ್ಲವನ್ನೂ ನುಂಗಿ ಹಾಕಿದ್ಮೇಲೆ ನಮ್ಮ ಗತಿ ಏನು? ಪಾಪರ್ ಆಗಿಬಿಡ್ತೀವಿ.. ಈಗ್ಲಾದ್ರೂ ಸೀರಿಯಸ್ ಆಗಿ ಯೋಚಿಸು.." ಕೈಯಲ್ಲಿ

ಬಿಡಿಗಾಸೂ ಇಲ್ಲದ ಗತಿ ಬಂದ್ರೆ..?'' ಹೆದರಿಸಿದ.

''ನೀನು ಹೇಳಿದಾಗಿನಿಂದ ನನ್ನನ್ನ ಇದೇ ವಿಷಯ ಕೊರೀತಿದೆ.. ಆದರೆ..''

''ನೀನು ಮುಂದಿನ ವರ್ಷ ಪರೀಕ್ಷೆಗೆ ಕಟ್ಟಿದ್ರೂ ಆಯ್ತು.. ಸಮಯವೇ ಇಲ್ಲ, ಎಲ್ಲಾ ಫಾಸ್ಟ್ ಆಗಿ ಆಗ್ಬೇಕು.''

''ನಂಗೊಂದು ಉಪಾಯ ಹೊಳೆದಿದೆ. ನನ್ನನ್ನ ನಿನ್ನ ಆಫೀಸಿಗೆ ಕರ್ಕೊಂಡು ಹೋಗು. ಅವನಿಗೆ ನನ್ನನ್ನು ಪರಿಚಯ ಮಾಡಿಕೊಡು. ಮೊದಲು ಅವನ ಸ್ನೇಹ ಗಳಿಸ್ತೀನಿ. ಆಮೇಲೆ ಮುಂದಿನ ವಿಷಯ.. ನೀನು ಅವಸರ ಪಡಿಸ್ಬೇಡ.. ನೀನ್ಯಾಕೆ ನಿಧಾನ ಮಾಡ್ದೆ?''

''ನಾನು ಅವನನ್ನು ನಂಬಿ ಕೆಟ್ಟೆ. ಕಂಪೆನಿಯ ಹೆಸರಿಗೆ ಬಂದ ಹಣವನ್ನು ಮೋಸದಿಂದ ತನ್ನ ಅಕೌಂಟಿಗೆ ಹಾಕ್ಕೊಂಡಿದಾನೆ.. ಕಂಪೆನಿ ಲಾಸ್‌ನಲ್ಲಿ ನಡೀತಿದೆ ಅಂತ ಸುಳ್ಳು ಲೆಖ್ಖ ತೋರಿಸ್ತಾನೆ. ಅವನು ನಂಗೆ ಮೋಸ ಮಾಡಿರುವಷ್ಟು ವಾಪಸ್ಸು ಬಂದ್ರೆ ಸಾಕು''

''ಅದಕ್ಕೆ ನನ್ನನ್ನು ಪಣ ಇಡ್ತದೀಯಲ್ಲ, ನೀನೆಂಥಾ ಅಣ್ಣನೋ..''

''ಆ ಚರ್ಚೆ ಈಗ ಬೇಡ, ನಿನ್ನ ನಿರ್ಧಾರ ತಿಳಿಸೇ ಅಂತಂದ್ರೆ ತಲೆಹರಟೆ ಮಾಡ್ತೀಯಾ! ನೀನೆಂಥಾ ತಂಗಿ! ನಾನೇನಾದ್ರೂ ಮುಳುಗಿ ಹೋದ್ರೆ, ನಿನ್ನ ಬದುಕೂ ಮುಗೀತು ಅಂತ ತಿಳ್ಕೋ..''

''ಅಮ್ಮ ಇಲ್ಲ; ಡ್ಯಾಡಿ ಇದ್ದರೂ ಇಲ್ಲ. ನೀನು ನನ್ನ ರಕ್ಷಣೆ ಮಾಡಬೇಕಾದವನು ಹೀಗೆ ಹೆದರಿಸ್ತೀಯಲ್ಲ, ಹೀನಾಯವಾಗುಲ್ವಾ?''

''ನೋಡು ಚೈತ್ರಾ, ನಾನು ಬೇಕು ಅಂತ ಹೀಗೆ ಮಾಡ್ತಿಲ್ಲ, ನನಗೂ, ನಿನಗೆ ತೊಂದರೆ ಕೊಡುವ ಮನಸ್ಸಿಲ್ಲ, ಆದರೆ ಪರಿಸ್ಥಿತಿ ಹದಗೆಟ್ಟಿದೆ. ಹೊರಗಿನವರಿಗೆ ತಿಳಿಯುವ ಮೊದಲೇ ಈ ಕೆಲಸ ಆಗಬೇಕು. ಅವನೇನಾದ್ರೂ ಪಾರ್ಟನರ್‌ಷಿಪ್‌ನಿಂದ ಹೊರಟು ಹೋದ್ರೆ ಕಷ್ಟವಾಗುತ್ತೆ. ಅವನು ಹೋಗದಂತೆ ತಡೆಯಲು ಏನಾದ್ರೂ ಉಪಾಯ ಬೇಕು..''

''ಇದು ಬೇರೆ ಆಗ್ಬೇಕಾ!.. ಸರಿ ನಾಳೇನೇ ನಿನ್ನ ಆಫೀಸಿಗೆ ಬರ್ತೀನಿ..''

''ಅವನಿಗೆ, ನೀನು ನನ್ನ ತಂಗಿ ಅಂತ ಗೊತ್ತಾಗಬಾರ್ದು..''

''ಹೂಂ, ಸರಿ'' ಅವನು ಹೊರಟು ಹೋದ. ಇವಳು ಡ್ಯಾಡಿಯ ಕೈ ಹಿಡಿದು ಕಣ್ಣೀರು ಹರಿಸಿದಳು. ಚಿದಾನಂದ, ಕಲ್ಲಿನಂತೆ ಕುಳಿತವಳನ್ನು ಕಂಡ.. ಸ್ವಲ್ಪ ದೂರದಲ್ಲಿ ನಿಂತು ಕೇಳಿದ.

''ಏನಾಯ್ತು! ಶರತ್ ಬಂದ ಹಾಗಿತ್ತು.. ಏನಾದ್ರೂ ಅಂದ್ರಾ?''

''ಹೂಂ.. ಅವನ ಪ್ರಾಬ್ಲಂ ಇದೆಯಲ್ಲ.. ಅವನು ಹತಾಶನಾಗಿದಾನೆ. ನನ್ನನ್ನ ಹಿಂಸೆ ಮಾಡ್ತಿದಾನೆ. ಏನು ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ..''

''ನೀವು ರಾಜೀವನ್ನ ಮದುವೆಯಾಗೋದೇ ಸರಿ ಅಂತ ಅನ್ನಿಸ್ತಿದೆ..''

''ಆಂ! ನೀವು?.. ನೀವು ಈ ಮಾತನ್ನು ಹೇಳ್ತಿದೀರಲ್ಲ.. ಎಲ್ಲಾ ತಿಳಿದೂ..''

"ಈಗ ನಿಮ್ಮ ಅಣ್ಣನನ್ನು ಉಳಿಸುವುದು ಮುಖ್ಯ. ಅದಕ್ಕೆ ಈ ದಾರಿಯ ಹೊರತು ಬೇರೆ ದಾರಿಯಿಲ್ಲ."

"ಅಂದ್ರೇ.. ನೀವು, ಶರತ್ ಮಾಡಿರುವ ಪ್ಲಾನ್ ಸರಿಯಾಗಿದೆ ಅಂತ ಹೇಳ್ತೀರಾ?"

"ಸರಿಯೋ ತಪ್ಪೋ ಯೋಚಿಸ್ತಾ ಕೂತ್ಕೊಳ್ಳೋಕೆ ಸಮಯವಿಲ್ಲ. ರಾಜೀವನೊಡನೆ ಗೆಳೆತನ ಬೆಳೆಸ್ಕೊಳ್ಳಿ..... ಅವನಿಗೆ ತಿಳಿಯದಂತೆ, ಅವನ ಹಣಕಾಸಿನ ಬಗ್ಗೆ ತಿಳಿದುಕೊಳ್ಳಿ, ಮದುವೆಯ ಬಗ್ಗೆ ಮಾತನಾಡಿ.."

"ಇಲ್ಲ, ನಾನು ಆಡುಲ್ಲ.. ನನಗೆ ನಾನು ಮೋಸ ಮಾಡಿಕೊಳ್ಳಲಾರೆ.."

"ಸರಿ, ಅವನೇ ಆಡುವಂತೆ ಅವನಿಂದ ಹೇಳಿಸಿ.."

"ಆಮೇಲೆ ಮದುವೆಯಾಗಿ ಅವನ ಮನೆಗೆ ಹೊರಟು ಹೋಗ್ತೀನಿ.. ಅವನಿಂದ ಬಲಾತ್ಕಾರಕ್ಕೆ ಒಳಗಾಗ್ತೀನಿ. ಅವನ ಮಕ್ಕಳಿಗೆ ತಾಯಿಯಾಗ್ತೀನಿ. ಅಲ್ಲಿಗೆ ನನ್ನ ಕತೆ ಮುಗೀತು, ಇದರ ಬದಲು ಹಾಳು ಬಾವಿಗೆ ಹಗಲು ಹೊತ್ನಲ್ಲಿ ಬೀಳೋದು ವಾಸಿ.."

"ಹಾಗೆಲ್ಲಿ ಹೇಳ್ತಿದೀನಿ!.. ಇವೆಲ್ಲಾ ನಾಟಕವಾಗಿರಬೇಕು, ಕೆಲವು ಕಂಡೀಷನ್‌ಗಳನ್ನೂ ಹಾಕಿ.. ಅವನು ನಿಮ್ಮನ್ನು ಮುಟ್ಟದಂತೆ ಎಚ್ಚರಿಕೆ ವಹಿಸಿ.."

"ಇದೆಲ್ಲಾ ಹೇಳುವಷ್ಟು ಸುಲಭವಲ್ಲ, ಆನಂದ್.. ನೀವ್ಯಾಕೆ ಹೀಗೆ ಹೇಳ್ತಿದೀರೋ, ನೀವು ನನ್ನನ್ನು ಪ್ರೀತಿಸ್ತಾ ಇಲ್ಲ ಅನ್ನೋ ಸಂಶಯ ಬರ್ತಿದೆ ನಂಗೆ.."

"ಈಗ ಪ್ರೀತಿ ಪ್ರೇಮಕ್ಕಿಂತ, ನಿಮ್ಮ ಅಣ್ಣನಿಗೆ ಮೋಸವಾಗದಿರುವಂತೆ ನೋಡಿಕೊಳ್ಳುವುದು ಮುಖ್ಯ ಅಲ್ವಾ ಚೈತ್ರಾ? ಆಮೇಲೆ ಡೈವೋರ್ಸ್ ತಗೊಳ್ಳಿ...."

"ನಂಗ್ಯಾಕೋ ಈ ಪ್ಲ್ಯಾನ್ ಸರಿಯಿಲ್ಲ ಅಂತ ಅನ್ನಿಸ್ತಿದೆ."

"ಇಲ್ಲ, ಹಾಗೆಂದುಕೊಳ್ಬೇಡಿ. ಧೈರ್ಯವಾಗಿರಿ. ನಾನು ನಿಮ್ಮೊಂದಿಗಿದೀನಿ. ಶರತ್ ನಿಮ್ಮ ಕಡೆಗೆ ಇದಾನೆ. ಆದರೆ ರಾಜೀವನಿಗೆ ಯಾವ ರೀತಿಯಿಂದಲೂ ಅನುಮಾನ ಬರಬಾರದು. ನಿಮಗೆ ಎಲ್ಲಾ ಒಳ್ಳೆದಾಗಲಿ ಅಂತ ಹಾರೈಸ್ತೀನಿ...."

"ನಂಗೆ ಆತಂಕವಾಗ್ತಿದೆ ಆನಂದ್....ನಾಳೆ ನನ್ನ ಜೊತೇಲಿ ಬರ್ತೀರಾ!"

"ನಿಮಗೆ ರಾಜೀವನ ಪರಿಚಯ ಇಲ್ವಾ!"

"ಇಲ್ಲ, ಅವನು ನನ್ನನ್ನು ನೋಡಿಲ್ಲ, ನಾನೂ ನೋಡಿಲ್ಲ. ಅವನು ಶರತ್‌ನ ಕ್ಲಾಸ್ಮೇಟ್ ಆಗಿದ್ದ, ಅಷ್ಟೇ ನಂಗೆ ಗೊತ್ತಿರೋದು...."

"ಸರಿ, ನಾನು ಬರ್ತೀನಿ, ಅಮ್ಮ ಬಂದಿದಾಳಲ್ಲ, ಡ್ಯಾಡಿಯ ಚಿಂತೆ ನಿಮಗೆ ಬೇಡ" ಈ ಮಾತಿಗೆ ಚೈತ್ರಾ ಉತ್ತರಿಸಲಿಲ್ಲ.

* * *

ಚಿದಾನಂದನೊಡನೆ ಆಫೀಸಿಗೆ ಬಂದವಳನ್ನು ಕಂಡು ಶರತ್ ಹುಬ್ಬುಗಳನ್ನು ಕೂಡಿಸಿದ. ಆದರೂ ಏನನ್ನೂ ಆಡುವಂತಿರಲಿಲ್ಲ. ಅವರಿಬ್ಬರನ್ನೂ ರಾಜೀವನ ಛೇಂಬರಿಗೆ ಕಳುಹಿಸಿದ. ಒಳಗೆ ಬಂದವಳನ್ನು ರಾಜೀವ ಕತ್ತೆತ್ತಿ ನೋಡಿದ....

"ನಮಸ್ಕಾರ ಸಾರ್", ಎಂದು ಚಿದಾನಂದ ಕೈ ಮುಗಿದು ತನ್ನ ಪರಿಚಯವನ್ನು ಚೈತ್ರಾಳ ಪರಿಚಯವನ್ನು ಹೇಳಿಕೊಂಡ. ನಾನು ಚಿದಾನಂದ ಅಂತ. ಇವಳು ನನ್ನ ತಂಗಿ ಚೈತ್ರಾ, ನಾವಿಬ್ಬರೂ ಕೆಲಸವನ್ನು ಹುಡುಕ್ತಿದೀವಿ, ಯಾವ್ದಾದ್ರೂ ಕೆಲಸ ಕೊಟ್ಟರೆ ಅನುಕೂಲ ಆಗುತ್ತೆ, ಚೈತ್ರಾ ಉಗುಳು ನುಂಗಿದಳು. ರಾಜೀವ ಅವಳನ್ನೇ ನೋಡಿದ. ಬೆದರಿದ ಹರಿಣಿಯಂತಿದ್ದಳು, ಸುಂದರಿಯಂತೆ ಕಂಡಳು, ಮನದಲ್ಲೇ ನಕ್ಕ.

"ಸುಮ್ಮುಮ್ನೆ ಬಂದು ಕೆಲ್ಸ ಕೇಳಿದ್ರೆ ಎಲ್ಲಿರುತ್ತೆ, ಇಲ್ಲಿ ವೇಕೆನ್ಸಿ ಯಾವುದೂ ಇಲ್ಲ...ಹೊರಡಿ" ನಯವಾಗಿ ಆದರೆ ಗಂಭೀರವಾಗಿ ಹೇಳಿದ.

"ಪ್ಲೀಸ್ ಹಾಗೆ ಹೇಳ್ಬೇಡಿ, ಒಂದು ವಾರದಿಂದ ಇಬ್ಬರೂ ಉಪವಾಸವಿದೀವಿ.."

ಚೈತ್ರಾ ಕೈ ಮುಗಿದು ಕೇಳಿಕೊಂಡಳು. ಬೆಳಿಗ್ಗೆ ತಿಂಡಿಯ ಸಮಯದಲ್ಲಿ ತಿಂದ ದೋಸೆ ಇನ್ನೂ ಅರಗಿರಲಿಲ್ಲ. ಚಿದಾನಂದ ಮನದಲ್ಲೇ ನಕ್ಕ.

"ನೋಡಿ ಮಿಸ್ ಚೈತ್ರಾ.. ಹಾಗೆಲ್ಲಾ ಕೆಲಸಕ್ಕೆ ಸೇರಿಸಿಕೊಳ್ಳುಕ್ಕೆ ಆಗುಲ್ಲ.. ನಿಮ್ಮ ಬಯೋಡೇಟಾ.. ಎಕ್ಸ್‌ಪೀರಿಯನ್ಸ್ ಎಲ್ಲವನ್ನು ಒಂದು ಅಪ್ಲಿಕೇಷನ್ ಜೊತೆ ಆಫೀಸ್ನಲ್ಲಿ ಕೊಡಿ, ಯಾವುದಾದ್ರೂ ವೇಕೆನ್ಸಿ ಇದ್ದರೆ ಸಮಯ ಬಂದಾಗ ತಿಳಿಸ್ತೀನಿ. ಇಂಟರ್‌ವ್ಯೂನಲ್ಲಿ ಸೆಲೆಕ್ಟ್ ಆದ್ರೆ ಮಾತ್ರ ಕೆಲಸ.. ಅದೂ ನಿಮಗೆ ಮಾತ್ರ.. ಇವರಿಗಿಲ್ಲ," ಚಿದಾನಂದನ ಕಡೆ ತಿರುಗಿ ನುಡಿದ.

ಅಷ್ಟರಲ್ಲಿ ಶರತ್ ರಾಜೀವನ ಛೇಂಬರ್‌ಗೆ ಬಂದ.. ಇಬ್ಬರೂ ಅವನ ಕಡೆ ತಿರುಗಿದರು. ಅವನು ತುಟಿಯಂಚಿನಲ್ಲಿ ನಕ್ಕು "ರಾಜೀವ್, ಯಾರಿವರು? ಏನಂತೆ?" ಕೇಳಿದ.

"ಕೆಲಸವನ್ನು ಕೇಳ್ಕೊಂಡು ಬಂದಿದಾರೆ. ಉಪವಾಸ ಇದಾರಂತೆ, ಈ ಅಣ್ಣ ತಂಗಿ" ಅವನೂ ಕಿರುನಗೆಯನ್ನು ನಗುತ್ತಾ ನುಡಿದಾಗ, ಚೈತ್ರಾ ಹಲ್ಲು ಕಡಿದಳು. ಶರತ್ ಕಡೆ ಉರಿಗಣ್ಣಿನಿಂದ ನೋಡಿದಳು. ಅವನು ತಲೆ ತಗ್ಗಿಸಿದ.

"ನೀವಿನ್ನು ಹೋಗಬಹುದು.. ಈಗ ಎಲ್ಲಿದೆ ಕೆಲಸ?.."

"ಯಾವ್ದಾದ್ರೂ ಇದ್ದರೆ ತಿಳಿಸ್ತೀನಿ, ಅಂತ ಹೇಳು, ಅಪ್ಲಿಕೇಷನ್ ಬರೆದು ಕೊಡಿ.."

"ಹಾಗೇ ಹೇಳ್ದೆ ಇನ್ನೂ ನಿಂತಿದಾರೆ....." ಹೋಗಿ ಎನ್ನುವಂತೆ ರಾಜೀವ ಕೈಯಾಡಿಸಿದ. ಇವರಿಬ್ಬರೂ ಹೊರಬಂದರು. ಇಬ್ಬರೂ ಸೀದಾ ಮನೆಗೆ ಬಂದರು. ಸ್ವಲ್ಪ ಹೊತ್ತಿನಲ್ಲೇ ಶರತ್ ಮನೆಗೆ ಬಂದ. ತಂಗಿಯ ರೂಮಿಗೆ ಹೋದ.

"ಅದೇನು ನಿನ್ನ ಅವತಾರ?.. ಒಬ್ಬಳೇ ಬರೋದಲ್ವಾ! ಅವನನ್ಯಾಕೆ ಕರ್ಕೊಂಡ್ಬಂದೆ? ಅವನಿಗೆ ಎಲ್ಲಾ ಹೇಳಿಬಿಟ್ಯಾ?"

"ಎಲ್ಲಾ ಹೇಳಿಲ್ಲ, ನಾನು ಕೆಲಸಕ್ಕೆ ಸೇರ್ಬೇಕು ಅಂತಂದೆ. ಒಬ್ಬಳೇ ಹೋಗ್ಬೇಡ ಅಂತ ಅನ್ನಪೂರ್ಣಮ್ಮ ಹೇಳಿದ್ರು ಅಂತ ಅವನನ್ನು ಕರ್ಕೊಂಡು ಬಂದೆ ತಪ್ಪಾ!"

"ತಪ್ಪಾ!.. ನೀನೊಂದು ಬೆಪ್ಪು.. ಅವನು ಅಣ್ಣ ನೀನು ತಂಗಿ. ಚೆನ್ನಾಗಿದೆ ನಿಮ್ಮ ನಾಟಕ.. ಉಪವಾಸವಿದೀವಿ ಅಂತ ಬೇರೆ ಹೇಳಿದೀಯ. ನಾನ್ಸೆನ್ಸ್.. ಬೆಳಿಗ್ಗೆ ತಿಂದ ದೋಸೆ ಇನ್ನೂ ಕೂತಿಲ್ವಾ ಹೊಟ್ಟೇಲಿ.."

"ನಿಜ ಹೇಳಿದ್ದಿದ್ರೆ, ಅವನು ಕಿಸ ಕಿಸ ಅಂತ ನಕ್ಕಿರೋನು!.. ನಿನಗೆ ನನ್ನ ಈ ನಟನೆ ಸರಿ ಹೋಗ್ಲಿಲ್ಲ ಅಂತಾದ್ರೆ ಬೇಡ.. ನನ್ನ ಜೊತೆಗೆ ನೀನೂ ಉಪವಾಸವಿರಬೇಕಾದ ದಿನಗಳು ಸಮೀಪಿಸುತ್ತಿವೆ ಅಂತ ತಿಳ್ಕೋ...." ಬೆದರಿಸುವ ದನಿಯಲ್ಲಿ ಹೇಳಿದಳು.

"ಷಟಪ್! ನನ್ನನ್ನ ರೇಗಿಸ್ಬೇಡ.... ಆಮೇಲೆ ರಾಜೀವ ಏನಂದ ಗೊತ್ತಾ!.. ಚಿದಾನಂದನ ಪರ್ಸನಾಲಿಟಿ ಚೆನ್ನಾಗಿದೆ. ಸೆಕ್ಯೂರಿಟಿ ಗಾರ್ಡ್ ಕೆಲಸ ಕೊಡೋಣ ಅಂತಂದ.. ಅವನು ಬಂದಿರೋದು ಅಪ್ಪನ್ನ ನೋಡ್ಕೊಳ್ಳೋಕೆ.. ಹೆಲ್ಪರ್ ಅಂತ. ನಮ್ಮ ಆಫೀಸ್ನಲ್ಲಿ ವಾಚ್‌ಮನ್ ಆಗಿ ಕೆಲಸ ಮಾಡುಕ್ಕೆ ಅಲ್ಲ." ಚೈತ್ರಾ ಕಿಸ ಕಿಸ ನಕ್ಕಳು.

"ಅಲ್ಲಿಗೆ ನೀನೂ ಬಂದೆಯಲ್ಲ, ನನಗೆ ಕೆಲಸ ಕೊಡಿಸುವಂತೆ ಏನಾದ್ರೂ ಶಿಫಾರಸ್ಸು ಮಾಡ್ಬೇಕಾಗಿತ್ತು."

"ಮಾಡಿದೀನಿ, ನನ್ನ ಪರ್ಸನಲ್ ಸೆಕ್ರೆಟರಿಯಾಗಿಟ್ಟುಕೊಳ್ತೀನಿ ಅಂತ ಹೇಳಿದೀನಿ. ನಾಳೆ ಬಂದು, ಅಪ್ಲಿಕೇಷನ್ ಕೊಟ್ಟು ಹೋಗು..ನೋಡೋಣ...."

"ಏನು ಬರೀಬೇಕು, ಹೇಗೆ ಬರೀಬೇಕು ಅಂತ ಹೇಳು.. ನಿನಗೇ ಬರೆದುಕೊಡ್ತೀನಿ."

"ನಿನ್ನ ತಲೆ, ಅವನಿಗೆ ಅನುಮಾನ ಬರುಲ್ವಾ!.. ಚಿದಾನಂದನ ಕೈಲಿ ಕಳಿಸು. ಅವನು ನೇರವಾಗಿ ನನಗೆ ತಂದು ಕೊಡಲಿ.."

"ನಂಗೆ ಹೇಗೆ ಬರೆಯೋದು ಅಂತ ಗೊತ್ತಿಲ್ಲ. ನೀನು ಬರೆದು ಕೊಡು. ನಾನು ಸೈನ್ ಮಾಡ್ತೀನಿ."

"ಗೂಬೆ, ಅಷ್ಟು ಗೊತ್ತಾಗುಲ್ವಾ! ಗ್ರಾಜುಯೇಟ್ ಆಗ್ತಿದೀಯ.."

"ಹೌದು, ನಾನು ಗೂಬೇನೇ, ನೀನು ಹೀಗೆಲ್ಲ ಬೈದರೆ, ನಾನು ಏನೂ ಸಹಾಯ ಮಾಡುಲ್ಲ, ಮನೆ ಬಿಟ್ಟು ಓಡಿ ಹೋಗ್ತೀನಿ ಅಷ್ಟೆ."

"ಸರಿ.. ಈ ಬೆದರಿಕೆ ಬೇರೆ.. ನೀನು ನನ್ನ ತಂಗಿನೇನಾ ಅಂತ ಅನುಮಾನ ಬರುತ್ತೆ. ಪೆದ್ದು ಪೆದ್ದಾಗಿ ಮಾತಾಡ್ತೀಯ.. ಹೇಳಿದ್ದನ್ನ ಕೇಳುಲ್ಲ.."

"ನಾನು ಇರೋದೇ ಹೀಗೆ.. ಒಂದು ವೇಳೆ, ನಾನು ಇಲ್ಲದೇ, ನಿನ್ನ ಹೆಂಡತಿ ಇದ್ದಿದ್ರೆ ಅವಳನ್ನೂ ಹೀಗೇ ಬೈತಿದ್ಯಾ.."

"ಇವೆಲ್ಲಾ ಮುಗೀಲಿ. ಫಸ್ಟ್ ಕ್ಲಾಸ್ ಆಗಿರುವ ಒಬ್ಬ ಹುಡುಗೀನ ನಿನಗೆ ಅತ್ತಿಗೆಯಾಗಿ

ತರ್ತೀನಿ.. ನೋಡ್ತಿರು.''

''ಎಲ್ಲಿದಾಳೆ ಅವಳು?..'' ಅಣಕಿಸಿದಳು.

''ಯಾರಿಗ್ಗೊತ್ತು?....'' ಇಬ್ಬರೂ ನಕ್ಕರು. ''ಈ ರೀತಿ ನಗೋದೇ ಮರೆತು ಹೋಗಿದೆ. ನನ್ನ ತಲೆ ಕೆಟ್ಟು ಹೋಗಿದೆ. ಸುಮಾರು ಮೂವತ್ತು ಲಕ್ಷಕ್ಕೂ ಮೀರಿ ಮೋಸ ಆಗಿದೆ. ಈ ಮನೆಯ ಮೇಲೆ ಸಾಲ ಇದೆ. ಬಡ್ಡಿ ಸೇರ್ತಿದೆ....''

''ಇದುವರೆಗೂ ಏನ್ಮಾಡ್ತಿದ್ದೆ?..ಇದೆಲ್ಲಾ ಗೊತ್ತಾಗ್ಲೇ ಇಲ್ಲ ಅಂತಂದ್ರೆ...''

''ಸಧ್ಯಕ್ಕೆ ಈ ವಿಷಯ ನಮ್ಮಿಬ್ಬರಲ್ಲೇ ಇದೆ...ಕೆಲವು ವಿವರಗಳನ್ನು ಅನುಮಾನದಿಂದ ಕೇಳಿದಾಗ, ಏನೋ ಆಡಿದ. ಹೊಸದಾಗಿ ಬೇರೆ ಹೆಸರ್ನಲ್ಲಿ ಕಂಪೆನಿ ಶುರು ಮಾಡೋಣ. ಆಗ ನಾನು ಇನ್ವೆಸ್ಟ್ ಮಾಡ್ತೀನಿ.. ನಿನ್ನನ್ನ ಪಾರ್ಟನರ್ ಆಗಿ ತಗೋಳ್ತೀನಿ ಅಂತಂದ. ಅವನ ಕೊಬ್ಬು ಹೆಚ್ಚಾಗಿದೆ. ಅದನ್ನು ಇಳಿಸಬೇಕು..''

''ಏನೋ, ನಿನ್ನ ಈ ವ್ಯವಹಾರ, ಲಾಸ್, ಇನ್ವೆಸ್ಟ್‌ಮೆಂಟ್ ಒಂದೂ ನನಗೆ ಅರ್ಥವಾಗುಲ್ಲ. ನಿನಗೆ ಈಗ ನನ್ನ ಸಹಾಯ ಬೇಕು. ನಾನು ರಾಜೀವನನ್ನು ನಂಬಿಸಿ, ಅವನನ್ನು ಮದುವೆಯಾಗುವ ನಾಟಕವನ್ನಾಡಿ, ಆಮೇಲೆ ಮೋಸ ಮಾಡಿ, ನಿನ್ನ ಬೊಕ್ಕಸವನ್ನು ತುಂಬಿಕೊಡ್ಬೇಕು. ನೋಡೋಣ ನನ್ನ ಪ್ರಯತ್ನವನ್ನು ನಾನು ಮಾಡ್ತೀನಿ. ಆದರೆ ನನ್ನದೇ ಆದ ರೀತೀಲಿ ಮಾಡ್ತೀನಿ.. ನೀನು ಸುಮ್ಮನಿರ್ಬೇಕು, ಉಪದೇಶ ಮಾಡ್ಬಾರ್ದು.''

''ಏನೋ, ನಿನ್ನನ್ನೇ ನಂಬಿದೀನಿ, ಎಲ್ಲವನ್ನೂ ಕೆಡಿಸಿ ಬಿಡ್ಬೇಡ.. ಈಗ ನಂಗೆ ಹೆಲ್ಪ್ ಮಾಡು, ಮುಂದೆ ನಿನ್ನನ್ನ ರಾಜಕುಮಾರಿಯ ಥರ ನೋಡ್ಕೋತೀನಿ..''

''ಏನು ನೋಡ್ಕೋತೀಯೋ? ನಿನ್ನ ನಡೆವಳಿಕೆ, ಭಯವನ್ನು ಹುಟ್ಟಿಸುತ್ತೆ, ನನ್ನ ಲೈಫ್ ಹಾಳಾದ್ರೆ ನಾನು ನಿನ್ನನ್ನ ಸುಮ್ಮನೆ ಮಾತ್ರ ಬಿಡುಲ್ಲ.''

''ಹಾಗೇನೂ ಆಗುಲ್ಲ ಡೋಂಟ್ ವರಿ,'' ಸಮಾಧಾನ ಹೇಳಿದ.

''ನಿನ್ನನ್ನ ಹೇಗೆ ನಂಬ್ಲೋ? ನೀನು ನನ್ನ ಸ್ವಂತ ಅಣ್ಣಾನೇನಾ ಅಂತ ನಂಬುಕ್ಕೇ ಕಷ್ಟವಾಗ್ತಿದೆ. ತಂಗಿಯ ತಲೆ ಕೂದಲು ಕೊಂಕದಂತೆ ಅಣ್ಣಂದಿರು ನೋಡಿಕೊಳ್ತಾರೆ ಅನ್ನೋ ಕತೆಗಳನ್ನು ಕೇಳಿದೀನಿ.''

''ಸಾರಿ, ಅಂತ ಹೇಳಿದ್ನಲ್ಲ, ಶಕುನಿ, ಧರ್ಮರಾಯ, ನಳ, ರಾವಣ ಎಲ್ಲರೂ ಏನೇನೋ ಮಾಡಿ ಹೆಸರು ಮಾಡಿದ್ರು. ನಾನೂ ಅವರಂಥವರಲ್ಲಿ ಒಬ್ಬ ಅಂತ ಅಂದ್ಕೊಂಡು ಕ್ಷಮಿಸಿ ಬಿಡು. ಡ್ಯಾಡಿಗೋಸ್ಕರ ಇದನ್ನೆಲ್ಲ ಮಾಡಬೇಕಾಗಿದೆ. ಇಲ್ದೇ ಇದ್ದಿದ್ರೆ, ಈ ಬಿಸಿನೆಸ್ ಸಹವಾಸವೇ ಬೇಡ ಅಂತ ಕೆಲ್ಸಕ್ಕೆ ಸೇರಿಕೊಂಡು, ನಿನ್ನನ್ನ ಸಾಕ್ತಿದ್ದೆ.. ನನ್ನ ಆಪ್ತನಾಗಿ ರಾಜೀವ ನಂಗೆ ಮೋಸ ಮಾಡ್ಬಾರ್ದಾಗಿತ್ತು. ನೆನೆಸ್ಕೊಂಡ್ರೆ ಮೈಯೆಲ್ಲಾ ಉರಿಯುತ್ತೆ.'' ಅವಳು ಅವನಿಗೆ ಉತ್ತರಿಸಲಿಲ್ಲ. ಅವಳ ಮೌನ ಅವನನ್ನು ರೇಗಿಸಿತು. ಎದ್ದು ಹೋಗಿದ್ದ.

* * *

ಮುಂದೆ ಕೆಲವೇ ದಿನಗಳಲ್ಲಿ, ಚೈತ್ರಳಿಗೆ ಶರತ್‌ನ ಆಫೀಸ್ನಲ್ಲಿ ಕೆಲಸ ಸಿಕ್ಕಿತ್ತು. ಚಿದಾನಂದನೊಡನೆ ಓಡಾಡಿ, ಇಂಟರ್‌ವ್ಯೂ ನಾಟಕವನ್ನು ಆಡಿದ್ದಳು. ರಾಜೀವ ತುಟಿಕೊಂಕಿಸಿ ನಕ್ಕು, "ಕಂಗ್ರಾಟ್ಸ್" ಎಂದಿದ್ದ. ಅವಳು ಶರತ್‌ಗೆ ಪಿ.ಎ.ಯಾಗಿ ನೇಮಕಗೊಂಡರೂ ಹೆಚ್ಚು ಹೆಚ್ಚು ರಾಜೀವನೊಡನೆ ಬೆರೆಯುತ್ತಿದ್ದಳು. ಮಾತು ಕತೆಗಳಲ್ಲಿ ಹಾವಭಾವಗಳಲ್ಲಿ ಅವನನ್ನು ಆಕರ್ಷಿಸಲು ನೋಡಿದಳು. ಅವನಿಗೂ ಖುಷಿಯಾಗುತ್ತಿತ್ತು.. ಶರತ್ ಬಗ್ಗೆ ತನಗೆ ಮಾಹಿತಿಗಳು ಸಿಗಬಹುದು ಎಂದು ಯೋಚಿಸಿದ್ದ.

ಒಮ್ಮೆ ಶರತ್, ಬಿಸಿನೆಸ್ ಟೂರ್ ಎಂದು, ಡೆಲ್ಲಿಗೆ ಹೋಗಿದ್ದಾಗ, ರಾಜೀವ ಚುರುಕಾದ. ಶರತ್‌ನ ಫೈಲ್‌ಗಳನ್ನು ತರಿಸಿಕೊಂಡು ನೋಡಿದ. ಅವಳನ್ನು ರೆಸ್ಟೋರೆಂಟ್‌ಗೆ ಕರೆದುಕೊಂಡು ಹೋಗಿ ಅವಳಿಗಿಷ್ಟವಾದ ಸಿಹಿ ತಿಂಡಿಗಳನ್ನು ಕೊಡಿಸಿದ್ದ. ಅವಳನ್ನು ಸಿನಿಮಾಕ್ಕೆ ಕರೆದೊಯ್ದಿದ್ದ. ಅವಳೊಡನೆ ಮಾತನಾಡಲೆಂದು ಅವಳಿಗೆ ಒಂದು ಮೊಬೈಲ್ ಫೋನನ್ನು ಕೊಡಿಸಿದ್ದ. ನಾಲ್ಕೈದು ದಿನಗಳ ನಂತರ ವಾಪಸ್ಸಾಗಿದ್ದ ಶರತ್ ಹುಬ್ಬೇರಿಸಿದ್ದ. ರಾತ್ರಿ ಊಟಕ್ಕೆ ಕುಳಿತಿದ್ದಾಗ, ಚೈತ್ರಾ ಎಲ್ಲವನ್ನು ವರದಿ ಒಪ್ಪಿಸಿದ್ದಳು.

"ಹುಶಾರಾಗಿರೇ ಚೈತ್ರಾ.. ರಾಜೀವ ಬಹಳ ಫಾಸ್ಟ್ ಆಗಿರುವಂತಿದೆ" ಎಂದ.

"ನಿನಗೂ ಅದೇ ತಾನೇ ಬೇಕಾಗಿರೋದು. ಇದೆಲ್ಲ ಆದಷ್ಟು ಬೇಗ ಮುಗಿದರೆ ಸಾಕು ಅಂತ ಎನಿಸಿದೆ."

"ಬೇಗ ಹೇಗೇ ಮುಗಿಯುತ್ತೆ! ಈಗಿನ್ನೂ ಪ್ರಾರಂಭವಾಗಿದೆ.. ಅವನು ನಿನ್ನನ್ನು ಪ್ರೀತಿಸ್ತೀನಿ ಅಂತ ಹೇಳಿದ್ರೆ, ಪೆದ್ದು ಪೆದ್ದಾಗಿ ಆಡ್ಬೇಡ."

"ನಾನು ಪೆದ್ದಾಗಿದ್ದರೆ, ಅವನು ನನ್ನನ್ನು ಹಾಳು ಮಾಡ್ತಾನೆ, ಸ್ಮಾರ್ಟ್ ಆಗಿದ್ದರೆ ನಾನೇ ಹಾಳಾಗ್ತೀನಿ.. ಒಂದು ವೇಳೆ ನಿನ್ನ ಪ್ಲಾನ್ ಸರಿ ಹೋಗ್ದೇ ಇದ್ದರೆ, ಸೂಯಿಸೈಡ್ ಮಾಡ್ಕೊಳ್ತೀನಿ. ಸೂಯಿಸೈಡ್ ನೋಟ್‌ನಲ್ಲಿ ಮರೀದೇ ನಿನ್ನ ಹೆಸರನ್ನೂ ಬರೀತೀನಿ."

"ಹಾಗೇನೂ ಆಗುಲ್ಲ, ನಾನು ನಿನ್ನ ಬೆನ್ನ ಹಿಂದೇನೇ ಇರ್ತೀನಲ್ಲ."

"ಹೂಂ, ಇರ್ತೀಯ..ಬೇಲೀನೇ ಎದ್ದು ಹೊಲ ಮೇಯ್ದ ಹಾಗೆ..."

"ಹೂಂ, ಹಾಗೇ ಅಂದ್ಕೋ.. ಅವನಿಗೆ ಮನೆ ಅಡ್ರೆಸ್‌ನ ಮರೆತೂ ಹೇಳ್ಬೇಡ.. ಆಮೇಲೆ ಕೆಲಸ ಕೆಡುತ್ತೆ"

"ನಂಗೆ ಅಷ್ಟೂ ಗೊತ್ತಾಗುಲ್ವಾ!. ನಿನ್ನ ಹಾಗೆ ಮೋಸ ಹೋಗೋಳಲ್ಲ."

"ಅದಕ್ಕೇ ತಾನೇ ನನಗೆ ಈ ಕೆಲಸವನ್ನು ಹಚ್ಚಿರೋದು. ಆಲ್ ದಿ ಬೆಸ್ಟ್.. ಅಂಡ್ ಐ ವಾಂಟ್ ದಿ ರಿಸಲ್ಟ್ ಆಸ್ ಸೂನ್ ಆಸ್ ಪಾಸಿಬಲ್" ಹೂಂ, ಹೂಂ, ಎನ್ನುತ್ತಾ ಮೂತಿ ಸೊಟ್ಟ ಮಾಡಿ ಅಣಕಿಸಿದಳು. ಅವನು ಅತ್ತ ಎದ್ದು ಹೋದ ಕೂಡಲೇ ಇವಳು ಮಹಡಿಯನ್ನೇರಿದಳು.

ಅವಳ ಬರುವನ್ನೇ ಕಾಯುತ್ತಾ ಕುಳಿತಿದ್ದ ಚಿದಾನಂದ.. "ನೀವು ಕೆಲಸಕ್ಕೆ ಸೇರಿಕೊಂಡ್ಮೇಲೆ,

ನಿಮ್ಮ ತಂದೇನ ಬಂದು ನೋಡೋದೇ ಕಡಿಮೆ ಆಗಿಬಿಟ್ಟಿದೆ..'' ನೊಂದು ನುಡಿದ.

''ಡ್ಯಾಡಿಗೆ ನಾನು ಬಂದ್ರೂ ಗೊತ್ತಾಗುಲ್ಲ, ಬರ್ದಿದ್ರೂ ಗೊತ್ತಾಗುಲ್ಲ, ನಿಜ ಹೇಳಿ ನಿಮಗೆ ತಾನೇ ನಾನು ಬಾರದೇ ಇರೋದು ಬೇಸರವಾಗ್ತಿರೋದು?'' ಕುಡಿನೋಟ ಬೀರಿದಳು.

''ಹೌದು ಚೈತ್ರಾ.. ಈ ನಡುವೆ ಬಹಳ ಬೇಸರವಾಗುತ್ತೆ. ಆಗಾಗ್ಗೆ ನೀವು ಬಂದು ಹೋದ್ರೆ, ನಾನೂ ಈ ಮನೆಯಲ್ಲಿ ಒಬ್ಬ ಅಂತ ಅನ್ನಿಸುತ್ತೆ. ಇಲ್ದಿದ್ರೆ ನಾನು ಇನ್ನೂ ಅಪರಿಚಿತ ಅಂತ ಅನ್ನಿಸುತ್ತೆ.''

''ನನಗೂ ಈ ನಾಟಕ ಬೇಡವಾಗಿದೆ, ಬೇಸರ ಹುಟ್ಟಿಸ್ತಿದೆ, ಆದರೇನು ಮಾಡ್ಲೀ? ನಿಮಗೂ ಎಲ್ಲಾ ಗೊತ್ತಲ್ಲ.... ಬೇಸರ ಅಂತ ಅಮ್ಮನ್ನ ಕರೆಸ್ಬೇಡಿ....''

''ಅಮ್ಮ ಹಾಗೆಲ್ಲ ಸುಮ್ಸುಮ್ನೆ ಬರೋಳಲ್ಲ.. ನಾನೇ ಒಂದೆರಡು ದಿನಗಳ ಮಟ್ಟಿಗೆ ಹೋಗಿ ಬರೋಣ ಅಂತ ಅಂದ್ಕೊಂಡಿದೀನಿ..''

''ನೀವು ಹೋಗ್ಬೇಡಿ ಆನಂದ್.. ಇಲ್ಲಿ ನಾನು ಒಂಟಿಯಾಗಿ ಬಿಡ್ತೀನಿ..'' ಎನ್ನುತ್ತಾ ಅವನಿಗೆ ಒರಗಿದಳು.. ಅವನು ಹಗುರವಾಗಿ ಅವಳನ್ನು ದೂರ ಸರಿಸಿದ.'' ಯಾಕೆ ಆನಂದ್, ನಾನು ರಾಜೀವನ ಜೊತೆ ಸ್ನೇಹ ಬೆಳೆಸಿದೀನಿ ಅಂತ ಕೋಪಾನಾ!.... ಕೇಳಿದಳು.

''ಹಾಗೇನಿಲ್ಲ....ಯಾರಿಗೆ ಅನುಮಾನ ಬಂದ್ರೂ ಕೆಲಸ ಕೆಡುತ್ತೆ..''

''ಶರತ್ ಅಣ್ಣನಾಗಿ, ನನಗೆ ಇಂಥಾ ಕೆಲಸವನ್ನು ವಹಿಸಿದಾನೆ. ನೀವು ನನ್ನ ಲವರ್ ಆಗಿ, ಇದನ್ನು ಸಪೋರ್ಟ್ ಮಾಡ್ತಿದೀರಿ. ನನಗೆ ನಿಮ್ಮಿಬ್ಬರ ಮೇಲೆ ನಂಬಿಕೆಯೇ ಹೊರಟು ಹೋಗುತ್ತೆ ಅಷ್ಟೇ..''

''ಇಲ್ಲ, ನಾನು ಎಂದೂ ನಿಮ್ಮ ಹಿತೈಷಿ. ಆದರೆ ಸಧ್ಯಕ್ಕೆ ಬೇರೆ ಯಾವ ಭಾವನೆಗಳಿಗೂ ಅವಕಾಶ ಕೊಡಬಾರದು ಅಂತ ನನಗೆ ಅನ್ನಿಸುತ್ತೆ...''

''ನಿಮ್ಮ ಮಾತುಗಳು ನನಗೆ ಭಯವನ್ನು ಹುಟ್ಟಿಸುತ್ತೆ. ನನ್ನನ್ನು ದೂರ ಮಾಡ್ಬೇಡಿ ಆನಂದ್.. ಒಂದು ದಿನವಾದ್ರೂ, ನನ್ನ ಥರ ಪ್ರೀತಿಯ ಮಾತುಗಳನ್ನಾಡುಲ್ಲವಲ್ಲ ನೀವು..''

''ನನಗೆ ಇದೆಲ್ಲ ಗೊತ್ತಿಲ್ಲ, ನಾನು ಪಟ್ಟಣದಲ್ಲಿ ಬೆಳೆದವನಲ್ಲ, ರಾಜೀವ ಹೀಗೆಲ್ಲಾ ಮಾತಾಡ್ತಾರಾ?''

''ಹೂಂ, ಸ್ವಲ್ಪ ಸ್ವಲ್ಪ.. ನನ್ನ ಬಗ್ಗೆ ಆಸಕ್ತಿಯನ್ನು ತೋರಿಸ್ತಿದಾನೆ, ಅದೇನು ನಾನು ಹುಡುಗಿ ಅಂತಲೋ, ಅಥವಾ ಶರತ್‌ನ ಪಿ.ಎ. ಅಂತಲೋ.... ಈಗ್ಲೇ ಗೊತ್ತಾಗ್ತಿಲ್ಲ.''

''ನಿಮಗೆ ರಾಜೀವನ ಬಗ್ಗೆ ಏನನ್ನಿಸುತ್ತೆ?''

''ಇದ್ಯಾಕೆ ಹೀಗೆ ಕೇಳ್ತೀರಿ ಆನಂದ್? ಸಧ್ಯಕ್ಕೆ ಯಾವ ಭಾವನೆಗಳೂ ಇಲ್ಲ. ಶರತ್‌ಗೆ ಮೋಸ ಮಾಡಿದಾನೆ ಅನ್ನೋ ಕಾರಣದಿಂದ ಅವನ ಬಗ್ಗೆ ಒಳ್ಳೆಯ ಭಾವನೆಗಳಿಲ್ಲ. ನೋಡೋಕೆ ಸುಂದರ, ಶ್ರೀಮಂತ ಯುವಕ.. ಕ್ರಮೇಣ ನಮ್ಮಿಬ್ಬರ ನಡುವೆ ಪ್ರೀತಿ ಹುಟ್ಟಿ, ನಾನು ಅವನ

ಕಡೆಗೇ ಸೇರಿ...." ಓರೆಗಣ್ಣಿನಿಂದ ಅವನ ಕಡೆ ನೋಡಿ ಮಂದಹಾಸ ಬೀರಿದಳು. ಅವನು ನಕ್ಕಂತೆ ಮಾಡಿದ. "ಮತ್ತಿನ್ನೇನು! ನನ್ನ ಪಾಡಿಗೆ ನಾನು ಹಾಯಾಗಿದ್ದೆ. ರಾಜೀವನ ಕಡೆಗೆ ನಾನಾಗಿಯೇ ಹೋಗಲಿಲ್ಲ, ಆದರೂ, ಅವನು ಯುವಕ, ನಾನು ಯುವತಿ... ಒಬ್ಬರನ್ನೊಬ್ಬರು ಆಕರ್ಷಿಸಿ, ಆದರ್ಶ ದಂಪತಿಗಳಾದರೆ!.. ತಮಾಷೆಯ ಮಾತುಗಳು ಎಂಬಂತೆ ನಕ್ಕಳು.

"ಶರತ್‌ಗೆ ಶಾಕ್ ಆಗುವುದು ಖಂಡಿತಾ...." ಎಂದ ಅವನೂ ನಗುತ್ತಾ.

* * *

ರಾಜೀವ, ಚೈತ್ರಾಳನ್ನು ಶರತ್‌ನ ಎದುರಿಗೇ ಹೊರಕ್ಕೆ ಕರೆದೊಯ್ದು. ಶರತ್ ತಂಗಿಯ ಕಡೆ ನೋಡಿ ಕಣ್ಣು ಹೊಡೆದ. ಕಾರು ಆಫೀಸಿನ ಕಾಂಪೌಂಡನ್ನು ದಾಟಿ ರಸ್ತೆಗೆ ಇಳಿದ ಮೇಲೆ ರಾಜೀವ ಇವಳ ಕಡೆ ತಿರುಗಿದ.

"ಚೈತ್ರಾ, ನೀವ್ಯಾಕೆ ಸುಳ್ಳು ಹೇಳಿದ್ರಿ?"

"ನಾನಾ! ಯಾವ ಸುಳ್ಳು?"

"ನೀವು ಶರತ್‌ನ ತಂಗಿ ಅಲ್ವಾ!" ಅವಳ ಉಸಿರು ಸಿಕ್ಕಿಕೊಂಡಂತಾಯಿತು. ಉಗುಳು ನುಂಗಿ ಕಷ್ಟಪಟ್ಟು ಕೇಳಿದಳು.

"ನಿಮಗೆ.... ಹೇಗೆ ಗೊತ್ತಾಯ್ತು?"

"ಗೆಸ್ ಮಾಡಿದೆ. ಕಂಡು ಹಿಡಿದೆ. ಈ ನಾಟಕದ ಹಿಂದೆ ಏನು ಪ್ಲಾನ್?"

"ಏನೂ ಇಲ್ಲ. ನನಗೆ ಕೆಲಸ ಬೇಕಾಗಿತ್ತು. ಶರತ್ ಕೆಲಸಕ್ಕೆ ಹೋಗಬೇಡ ಅಂತ ರೇಗಿಸಿದ. ನಾನು ಛಾಲೆಂಚ್ ಮಾಡಿ, ಅವನ ಆಫೀಸಿನಲ್ಲೇ ಕೆಲಸಕ್ಕೆ ಸೇರಿದೆ. ತಂಗಿ ಅಂತ ಯಾರಿಗೂ ಹೇಳ್ಬೇಡ ಅಂತ ಗೋಗರೆದ.. ಅಷ್ಟೇ.."

"ಇಲ್ಲಿ, ಮತ್ತೊಂದು ಸುಳ್ಳು ಇಲ್ಲ ತಾನೇ?" ಎತ್ತಲೋ ನೋಡಿ ಕೇಳಿದ.

"ಇಲ್ಲ," ಅವಳ ಹಣೆಯ ಮೇಲೆ ಬೆವರಿನ ಸಾಲುಗಳು ಗೋಚರಿಸಿದವು. ಕರವಸ್ತ್ರದಿಂದ ಒರೆಸಿಕೊಂಡಳು.

"ಹೋಗಲಿ ಬಿಡಿ. ಈ ಸುಳ್ಳಿನಿಂದ ನನಗೆ ಯಾವ ನಷ್ಟವೂ ಇಲ್ಲ. ನನಗೆ ಒಬ್ಬಳು ಸುಂದರ ಯುವತಿ ಸ್ನೇಹಿತೆಯಾಗಿ ಸಿಕ್ಕಿದಳು. ಮೊದಲನೇ ದಿನ ನಿಮ್ಮ ಜೊತೆ ಒಬ್ಬ ಯುವಕ ಬಂದಿದ್ನಲ್ಲ ಅವನ್ಯಾರು?"

"ಅವನು ಆನಂದ್ ಅಂತ, ನಮ್ಮ ಡ್ಯಾಡಿಯನ್ನು ನೋಡಿಕೊಳ್ಳಲು ಗೊತ್ತು ಮಾಡಿಕೊಂಡಿದೀವಿ, ಅವರ ಹೆಲ್ತ್ ಸರಿಯಾಗಿಲ್ಲ.."

"ಹೌದಾ! ಏನಾಗಿದೆ ಅವರಿಗೆ! ಶರತ್ ಹೇಳಲೇ ಇಲ್ಲ.. ಶರತ್ ಅವನನ್ನು ನಂಬಿದ್ದಾನಾ!.. ನಿಮ್ಮಂತಹ ಸುಂದರ ತರುಣಿ ಅವನೆದುರಿಗೆ ಓಡಾಡಿದ್ರೆ ಪರವಾಗಿಲ್ಲವಂತಾ! ಅವನು ಹೇಗೆ? ಸಲುಗೆಯಿಂದ ಇರುವಂತಿದೆ.." ಅವಳು ಕಸಿವಿಸಿಗೊಂಡಳು.

"ಏನಿಲ್ಲ, ಅವರು ಬಹಳ ಸಿಂಪಲ್ಲು.. ಡ್ಯಾಡೀನ ಬಹಳ ಚೆನ್ನಾಗಿ ನೋಡ್ಕೋತಾರೆ. ಅದಕ್ಕೇ ನಾನು ಅವರನ್ನು ಗೌರವಿಸ್ತೀನಿ.."

"ಸರಿ ಬಿಡಿ.. ಮುಂದೇನು! ನಿಮ್ಮ ಡಿಗ್ರಿ ಕಂಪ್ಲೀಟ್ ಆಗಿದೆಯಾ?"

"ಇಲ್ಲ, ಈ ನಡುವೆ ನಂಗೆ ಓದಿನಲ್ಲಿ ಆಸಕ್ತಿ ಕಡಿಮೆ. ಪರೀಕ್ಷೆಗೆ ಕಟ್ಟಲಿಲ್ಲ. ಓದ್ತಾನೂ ಇಲ್ಲ,".. ಟೈಂ ಪಾಸ್ ಮಾಡುಕ್ಕೆ ಅಂತ ಈ ಕೆಲಸಕ್ಕೆ ಸೇರಿಕೊಂಡೆ.."

"ವೆರಿ ಬ್ಯಾಡ್.... ಟೈಂ ಪಾಸ್ ಮಾಡುಕ್ಕೆ ಈ ಜುಜುಬಿ ಕೆಲಸ ಯಾಕೆ ಬೇಕು! ಮದುವೆಯಾಗ್ಬಿಡಿ" ಅವನು ಮಂದಹಾಸದಿಂದ ಅವಳ ಮುಖವನ್ನೇ ನೋಡಿದ. ಅವಳು ಕೆಂಪಾಗಿದ್ದಳು.

"ಮದುವೆ ಬೇಡ.. ಹೀಗೇ ಹಾಯಾಗಿದೀನಿ.."

"ನೀವು ಸುಳ್ಳು ಹೇಳ್ತಿದೀರಿ ಅಂತ ನಿಮ್ಮ ಮುಖವೇ ಹೇಳ್ತಿದೆ. ಯಾರನ್ನಾದ್ರೂ ಲವ್ ಮಾಡ್ತಿದ್ದರೆ ನನ್ನ ಹತ್ರ ಹೇಳಿ.... ನಾನು ಶರತ್ ಹತ್ರ ಮಾತನಾಡ್ತೀನಿ.."

"ಏನೂ ಬೇಡ.... ನಾನೇ ಅವನ ಹತ್ರ ಸಮಯ ಬಂದಾಗ ಮಾತಾಡ್ತೀನಿ. ಅದ್ಸರಿ, ನಾನು ಅವನ ತಂಗಿ ಅಂತ ನಿಮಗೆ ಗೊತ್ತಾಗಿದೆ ಅಂತ ತಿಳಿದ ದಿನ, ಅವನು ನನ್ನನ್ನು ಕೆಲಸದಿಂದ ತೆಗೆದು ಹಾಕ್ತಾನೆ."

"ಹಾಕಿದರೆ ಹಾಕಲಿ, ನಾನು ನಿಮ್ಮನ್ನು ರೀ ಅಪಾಯಿಂಟ್ ಮಾಡ್ಕೊಳ್ತೀನಿ.. ಆದರೆ ನಂಗೆ ಒಂದು ವಿಷಯ ಅರ್ಥ ಆಗ್ತಿಲ್ಲ... ನೀವು ಯಾವ ನಾಟಕವನ್ನು ಆಡಬೇಕಾಗಿರ್ಲಿಲ್ಲ. ಅಪ್ಲಿಕೇಷನ್ ಕೊಟ್ಟಿದ್ರೆ ಸಾಕಾಗಿತ್ತು....ಈಗಿನ ಹಾಗೆ ಸಿಕ್ಕಿ ಹಾಕಿಕೊಳ್ತಿರ್ಲಿಲ್ಲ ಅಲ್ವಾ!"

"ಸಾರಿ ಸಾರ್... ಅಮ್ಮ ಬದುಕಿಲ್ಲ, ಡ್ಯಾಡಿಗೆ ಆರೋಗ್ಯ ಸರಿ ಇಲ್ಲ. ನನಗೂ ಶರತ್‌ಗೂ ಸದಾ ಜಗಳ ಮನೇಲಿ ಬೋರ್.. ಅವನು ಬೇಡ ಅಂದಿದನ್ನ ಮಾಡೋ ಹಠ ನಂಗೆ."

"ಐ.ಸೀ. ಪರವಾಗಿಲ್ಲ. ಒಂಥರದಲ್ಲಿ ಒಳ್ಳೇದೇ ಆಯ್ತು. ನನಗೆ ನಿಮ್ಮ ವರ್ತನೆ ಇಷ್ಟವಾಗಿದೆ. ನೀವು ಇಷ್ಟವಾಗಿದೀರಿ... ನಿಮಗೆ ಪ್ರಮೋಷನ್ ಕೊಡೋಣ ಅಂತ ಇದೀನಿ."

"ಪ್ರಮೋಷನ್ನಾ?.." ಆಶ್ಚರ್ಯದಿಂದ ಕಣ್ಣರಳಿಸಿ ಬಾಯಿ ಬಿಟ್ಟಳು. ಸ್ಯಾಲರಿ ಹೆಚ್ಚು ಮಾಡ್ತೀರಾ!" ಅವನು ನಗುತ್ತಾ ಸ್ಟೀರಿಂಗ್‌ನ್ನು ತಿರುಗಿಸಿ, ಕಾರನ್ನು ನಿಲ್ಲಿಸಿದ.

"ಹುಂ, ನಿಮ್ಮ ಅಗತ್ಯಕ್ಕಿಂತ ಹೆಚ್ಚಿನ ಸ್ಯಾಲರಿಯನ್ನು ನಾನು ಕೊಡ್ತೀನಿ, ಆದರೆ ನೀವು ನನಗೆ ಒಂದು ಫೇವರ್ ಮಾಡ್ಬೇಕು."

"ಫೇವರ್ರಾ?..." ಅವಳು ಹೆದರಿದ್ದಳು. ಮುಖದ ಬಣ್ಣ ಕೆಟ್ಟಿತ್ತು.

"ಈಗಲೇ ಅಲ್ಲ. ಸಮಯ ಬಂದಾಗ.. ಈಗ್ಲಿಂದ ಟೆನ್ಷನ್ ಮಾಡ್ಕೋಬೇಡಿ. ಶರತ್‌ಗೆ ಈ ಬಗ್ಗೆ ಹೇಳ್ಬೇಡಿ.... ಕೆಲಸದಿಂದ ವಜಾ ಮಾಡಿದರೂ ಮಾಡಬಹುದು"

"ಯಾಕ್ಸಾರ್ ಹೀಗೆ ಹೇಳ್ತೀರಿ! ಅವನು ನಿಮ್ಮ ಫ್ರೆಂಡ್ ಅಲ್ವಾ!.."

"ಹೌದು, ಅವನು ನನ್ನ ಫ್ರೆಂಡು. ಹಾಗೇ ಬಿಸಿನೆಸ್ ಪಾರ್ಟನರ್, ಫ್ರೆಂಡ್‌ಷಿಪ್ ಬೇರೆ. ಬಿಸಿನೆಸ್ ಬೇರೆ. ಈ ವಿಷಯ ನಿಮಗೆ ಬೇಡ.. ಈಗ ಈ ಮಾತು ಸಾಕು. ಇಳೀರಿ" ಎನ್ನುತ್ತಾ, ಕಾರಿನ ಬಾಗಿಲನ್ನು ತೆರೆದ. ಅವಳು ಕೆಳಗಿಳಿದಳು. ಇಬ್ಬರೂ ಹೋಟೆಲನ್ನು ಒಳ ಹೊಕ್ಕರು. ಅವನು ಅವಳಿಗೆ ಇಷ್ಟವಾದ ಊಟವನ್ನು ತರಿಸಿದ. ಅವಳು ಅನುಮಾನಿಸುತ್ತಾ ನಿಧಾನವಾಗಿ ತಿಂದಳು. ಅವನು ಆಗಾಗ್ಗೆ ಅವಳನ್ನೇ ನೋಡುತ್ತಿದ್ದುದು ಅವಳ ಗಮನಕ್ಕೆ ಬಂದಿತ್ತು.

"ಏನು ಯೋಚಿಸ್ತಿದೀರಿ! ತಲೆ ಕೆಡುತ್ತೆ ಅಷ್ಟೆ. ರಿಲಾಕ್ಸ್ ಆಗಿರಿ...." ಇಲ್ಲಿಂದ ನಾನು ನಿಮ್ಮನ್ನು ನಿಮ್ಮ ಮನೆಗೆ ಡ್ರಾಪ್ ಮಾಡಿ, ನಾನು ಮನೆಗೆ ಹೋಗ್ತೀನಿ" ಅಂತಂದ.

ಕಾರಿನಿಂದ ಇಳಿದವಳು, ಅವನಿಗೆ ಥ್ಯಾಂಕ್ಸ್ ಹೇಳಿ, ತನ್ನ ಮನೆಯ ಕಡೆ ನಡೆದಳು. 'ಮನೆಗೆ ಬನ್ನಿ' ಎಂದು ಕರೆಯಲಿಲ್ಲ ಎನ್ನುವುದನ್ನು ಅವನು ಗಮನಿಸಿದ. "ಬೈ ಬೈ" ಎಂದು ಹೇಳಿ, ಕಾರನ್ನು ತಿರುಗಿಸಿದ. 'ರಾಜೀವ ಬಹಳ ಖಿಲಾಡಿ, ನನ್ನನ್ನು ಚೆನ್ನಾಗಿ ಅಬ್ಸರ್ವ್ ಮಾಡ್ತಾನೆ ಇದಾನೆ. ಈ ವಿಷಯವನ್ನು ಶರತ್‌ಗೆ ಹೇಳ್ಬೇಕೋ ಬೇಡವೋ' ಎಂದು ಬಹಳವಾಗಿ ಚಿಂತಿಸಿ ಕಡೆಗೆ ಚಿದಾನಂದನೊಡನೆ ಮಾತನಾಡಲೆಂದು ಬಂದಳು.

"ಇವರಿಬ್ಬರೂ ಹೆಸರಿಗೆ ಸ್ನೇಹಿತರು. ಒಳಗೊಳಗೇ ಶತ್ರುಗಳು ರಾಜೀವನ ಮನಸ್ನಲ್ಲಿ ಏನಿದೆ ಅಂತ ಅರ್ಥವಾಗ್ತಿಲ್ಲ" ಎನ್ನುತ್ತಾ ನಡೆದ ಮಾತುಕತೆಗಳನ್ನು ತಿಳಿಸಿದಳು.

"ಪಾರ್ಟನರ್ಸ್ ಅಂದರೆ ಕೆಲವು ಸಲ ಹೀಗೇ.. ಮೇಲು ನೋಟಕ್ಕೆ ಕಲೀಗ್ಸ್, ಒಳಗೊಳಗೇ ಕತ್ತಿಯನ್ನು ಮಸೆಯುತ್ತಿರುತ್ತಾರೆ. ಬಹುಶಃ ಅವರವರ ಕಾರ್ಯಕ್ಕೆ ನಿಮ್ಮನ್ನು ಉಪಯೋಗಿಸಿಕೊಳ್ತಿದಾರೆ. ಈಗ ನೀವು ತುಂಬಾ ಹುಶಾರಾಗಿರ್ಬೇಕು" ಎಂದ.

"ಈಗ ಮುಂದೇನು ಮಾಡೋದು?"

"ನೀವೇ ಕೆಲಸವನ್ನು ಬಿಟ್ಬಿಡಿ, ಓದನ್ನು ಮುಂದುವರೆಸಿ."

"ಶರತ್ ಏನಂತಾನೋ?....ಸಾಲಗಾರನಾಗಿಬಿಟ್ಟಿದಾನೆ.. ಡ್ಯಾಡೀನ ನೋಡಿದ್ರೆ ಸಂಕಟ ಆಗುತ್ತೆ... ಖರ್ಚಿಗೆ ಹಣ ಬೇಕು.. ಎಲ್ಲಿಂದ ತರೋದು?"

"ಈಗ ರಾಜೀವ ಹೇಗೂ ಸ್ನೇಹದಿಂದ ಇದಾರೆ.. ಅವರ ಹತ್ರ ಹಣವನ್ನು ಸಾಲ ಅಂತ ಕೇಳಿ ಪಡೆಯಿರಿ.. ಅವರ ಮನಸ್ನಲ್ಲಿ ಏನಿದೆ ಅಂತ ಹೊರಕ್ಕೆ ಬರಬಹುದು." ಚೈತ್ರಾ ಚಿದಾನಂದನ ಸಲಹೆಯನ್ನು ಒಪ್ಪಿದಳು.

ಒಂದೆರಡು ದಿನಗಳ ನಂತರ, ರಾಜೀವನನ್ನು ಕಂಡು ಮಾತನಾಡಿದಳು.

"ನಂಗೆ ಲೋನ್ ಸಿಗುತ್ತಾ? ಕೊಡಿಸ್ತೀರಾ!.. ನಾನು ಸಂಜೆಯ ವೇಳೆಯಲ್ಲಿ ಯಾವುದಾದ್ರೂ ಕೋರ್ಸಿಗೆ ಹೋಗೋಣ ಅಂತ ಅಂದ್ಕೊಂಡಿದೀನಿ" ರಾಜೀವ ನಕ್ಕ.

"ಯಾಕೆ? ಶರತ್ ಕೊಡುಲ್ಲ ಅಂತಂದ್ನ?"

"ನನಗೆ ಅವನನ್ನ ಕೇಳೋಕೆ ಇಷ್ಟವಿಲ್ಲ. ಡ್ಯಾಡಿ ಸರಿಯಾಗಿದ್ದಿದ್ರೆ ನನಗೆ ಯಾವ ಪ್ರಾಬ್ಲಂ ಇರ್ತಿಲ್ಲ...."

"ಯಾವ ಕೋರ್ಸೂ ಬೇಡ.. ಈ ಕೆಲಸವೂ ಬೇಡ. ಮದುವೆಯಾಗ್ಬಿಡಿ. ಎಷ್ಟೋ ಪ್ರಾಬ್ಲಂಗಳು ಸಾಲ್ವ್ ಆಗುತ್ತೆ."

"ಮದುವೆ ಬಗ್ಗೆ ಯಾವ ಕನಸನ್ನು ಕಾಣುವ ಪರಿಸ್ಥಿತಿಯಲ್ಲಿ ನಾನು ಇಲ್ಲ ರಾಜೀವ್, ಮಗಳನ್ನು ಪ್ರೀತಿಸುವ ತಾಯಿ ಬದುಕಿಲ್ಲ. ತಂದೆ ಬದುಕಿದ್ದೂ ಇಲ್ಲದಂತೆ... ಶರತ್‌ಗೆ ಯಾವ ಆಸಕ್ತಿಯೂ ಇಲ್ಲ. ನನ್ನನ್ನು ಯಾರು ಮದುವೆಯಾಗ್ತಾರೆ?... ಮದುವೆಯಾದ್ರೂ ಸುಖವಾಗಿರುವ ಭಾಗ್ಯ ನನ್ನ ಹಣೆಯಲ್ಲಿ ಬರೆದಿದೆಯೋ ಇಲ್ವೋ!"

"ಯಾಕೆ ಹಾಗಂತೀರಿ! ನಿಮ್ಮನ್ನು ಸುಖವಾಗಿಟ್ಟುಕೊಳ್ಳುವ ಗಂಡ ಸಿಗಬಹುದು"

"ಅಂಥೋನು ಎಲ್ಲಿದಾನೆ ಸಾರ್?.... ನನಗೆ ಯಾರ ಮೇಲೂ ನಂಬಿಕೆ ಇಲ್ಲ."

"ನನ್ನ ಮೇಲೂ ನಂಬಿಕೆ ಇಲ್ವಾ ಚೈತ್ರಾ!....ನಿಮಗೆ ನಾನು ಒಪ್ಪಿಗೆಯಾಗಿದ್ದರೆ ಆದಷ್ಟು ಬೇಗ ಮದುವೆಯಾಗೋಣ." ತಕ್ಷಣವೇ ನುಡಿದ. ಅವಳು ಆ ಮಾತನ್ನು ನಿರೀಕ್ಷಿಸಿದ್ದಳು.

"ಸಾರ್... ನೀವು ನನ್ನನ್ನ? ನನಗೆ ಮದುವೆಯಾಗುವ ಆಸೆ ಸಧ್ಯಕ್ಕಿಲ್ಲ.." ನಟಿಸಿದಳು.

"ನಿಮಗೆ ಆ ಆಸೆ ಸಧ್ಯಕ್ಕೆ ಇಲ್ಲದಿರಬಹುದು. ಆದರೆ ಆ ಆಸೆ, ಅವಶ್ಯಕತೆ ಎರಡೂ ನನಗಿದೆ. ನಿಮಗೆ ಯೋಚಿಸಲು ಸ್ವಲ್ಪ ಸಮಯ ಕೊಡ್ತೀನಿ. ನಿಮ್ಮ ನಿರ್ಧಾರವನ್ನು ತಿಳಿಸಿ. ಆದರೆ, ನಿಮ್ಮ ಉತ್ತರ ನೆಗೆಟಿವ್ ಆಗಿರಬಾರು.." ಅವನು ಟೇಬಲ್ ಮೇಲೆ ಬಾಗಿ, ಅವಳ ಕೈಗಳನ್ನು ಹಿಡಿದ. ಅವಳು ನಿಧಾನವಾಗಿ ಬಿಡಿಸಿಕೊಂಡು ಬಲವಂತವಾಗಿ ನಕ್ಕಳು.. ಮತ್ತೆ ನುಡಿದ. "ನಾನು ತಮಾಷೆ ಮಾಡ್ತಿಲ್ಲ, ಸೀರಿಯಸ್ಸಾಗಿ ಹೇಳ್ತಿದೀನಿ... ನಿಮ್ಮನ್ನು ಕಂಡ ದಿನದಿಂದ ನಾನು ನಿಮ್ಮನ್ನು ಮೆಚ್ಚಿದೀನಿ. ಶರತ್‌ಗೆ ಒಬ್ಬಳು ಇಂಥಾ ಸುಂದರವಾದ ತಂಗಿ ಇದಾಳೆ ಅಂತ ನನಗೆ ಗೊತ್ತಿರಲೇ ಇಲ್ಲ. ಅವನೆಂದೂ ನನ್ನನ್ನು ಮನೆಗೆ ಕರೆದಿರಲಿಲ್ಲ..."

ಅವಳು ಬೆಪ್ಪಳಂತೆ ಅವನನ್ನೇ ನೋಡಿದಳು. "ನನ್ನ ತಂದೆ ತಾಯಿ, ಮದುವೆ ಮಾಡ್ಕೋ ಅಂತ ನನಗೆ ಒತ್ತಾಯ ಮಾಡ್ತಿದಾರೆ... ನಿಮ್ಮ ಒಪ್ಪಿಗೆ ಸಿಕ್ಕ ಕೂಡಲೇ, ನಾನು ನಿಮ್ಮನ್ನು ನನ್ನ ಮನೆಗೆ ಕರ್ಕೊಂಡು ಹೋಗಿ, ಪರಿಚಯ ಮಾಡಿಕೊಡ್ತೀನಿ. ನನ್ನ ತಾಯಿಗೆ ನೀವು ಖಂಡಿತಾ ಮೆಚ್ಚುಗೆಯಾಗ್ತೀರಿ..."

"ಒಂದು ವೇಳೆ ಅವರಿಗೆ ನಾನು ಮೆಚ್ಚುಗೆ ಆಗದೇ ಇದ್ದರೆ!..."

"ಯಾಕೆ ಆಗುಲ್ಲ!..ನನ್ನ ಆಯ್ಕೆ ಎಂದ ಮೇಲೆ ಅವರು ಒಪ್ಪಲೇ ಬೇಕು. ಒಂದು ವೇಳೆ ಅವರು ಒಪ್ಪದಿದ್ದರೂ... ನಾನು ನಿಮ್ಮನ್ನು ಮದುವೆಯಾಗ್ತೀನಿ. ಈ ಮಾತು ನಿಜ..." ಅವನು ಮತ್ತೊಮ್ಮೆ ಅವಳ ಕೈಗಳನ್ನು ಮೃದುವಾಗಿ ತಟ್ಟಿದ. ಅವಳು ಸರ್ರನೆ ಎದ್ದು ನಿಂತಳು. ಅವನು ಕೈಯಾಡಿಸಿದ. "ಪ್ಲೀಸ್, ನೀವು ಎಲ್ಲಿಗೂ ಹೋಗ್ಬೇಡಿ, ನಾನೇ ಹೊರಕ್ಕೆ ಹೋಗ್ತೀನಿ. ನಿಮ್ಮ ಗೊಂದಲದ ಮುಖವನ್ನು ಶರತ್ ನೋಡಿದ್ರೆ, ಅಪಾರ್ಥ ಮಾಡ್ಕೋತಾನೆ...." ಎಂದು ಹೇಳಿ ತಾನೇ ಹೊರಕ್ಕೆ ಹೋಗಿದ್ದ. ಅವಳು ನಿರಾಳವಾದ ಉಸಿರನ್ನು ಬಿಟ್ಟಳು. ಆದರೂ ಮನಸ್ಸು ಗೊಂದಲಕ್ಕೊಳಗಾಗಿತ್ತು. ಶರತ್‌ಗೆ ಅನುಕೂಲವಾಗುವಂತೆ, ಇವನಾಗಿಯೇ ತನಗೆ ಒಲಿದಿದ್ದಾನೆ. ಇದರಲ್ಲಿ ಮೋಸ ಏನೂ ಇರಲಾರದು. ಆದರೆ ತಾನು?....ತನ್ನ ಆಯ್ಕೆ ರಾಜೀವನಲ್ಲ....ಈ

ದಿನ ಚಿದಾನಂದನೊಡನೆ ಮಾತನಾಡಿ ಒಂದು ಇತ್ಯರ್ಥಕ್ಕೆ ಬರಲೇ ಬೇಕು ಅಂತಂದುಕೊಂಡಳು.

ಆದರೆ, ಈಗ ತಾನು ಚಿದಾನಂದನನ್ನು ಪ್ರಿತಿಸುತ್ತಿರುವುದಾಗಿ ಹೇಳಿ, ಅವನನ್ನೇ ಮದುವೆಯಾಗ್ತೀನಿ ಅಂತಂದ್ರೆ ಶರತ್ ಗಲಾಟೆ ಮಾಡದೇ ಬಿಡುವವನಲ್ಲ, ಈ ವಿಷಯದಲ್ಲಿ ರಾಜೀವನೂ ತನಗೆ ಸಹಾಯ ಮಾಡಲಾರ.. ಚಿದಾನಂದನಿಗೂ ಈ ಪ್ಲಾನ್ ಗೊತ್ತಿರುವುದರಿಂದ ತನಗೇ ತಿಳುವಳಿಕೆಯನ್ನು ಹೇಳಬಹುದು.... ಈಗ ತನ್ನ ಸಹಾಯಕ್ಕೆ ಯಾರೂ ಇಲ್ಲವಲ್ಲ ಎಂದುಕೊಂಡು ತಳಮಳಗೊಂಡಳು. ಬೇಸರದಿಂದ ಎದ್ದು ಶರತ್‌ನ ಛೇಂಬರ್‌ಗೆ ಬಂದಳು.

''ನಂಗ್ಯಾಕೋ ತಲೆ ನೋಯ್ತಿದೆ. ಮನೆಗೆ ಹೋಗ್ತೀನಿ..'' ಎಂದಳು.

''ಯಾಕೇ? ಮುಖವೆಲ್ಲಾ ಕೆಟ್ಟು ಹೋಗಿದೆ. ರಾಜೀವ ಏನಾದ್ರೂ ಅಂದ್ನಾ?''

''ಇಲ್ಲ, ಅವನೇನನ್ತಾನೆ?.....ನಾನೇ ಅಪ್ಸೆಟ್ ಆಗಿದೀನಿ....''

''ನಿಂದು ಇದ್ದದ್ದೇ ಗೋಳು.. ಅವನೂ ಎಲ್ಲೋ ಹೋದ. ಈಗ ಮನೆಗೆ ಹೇಗೆ ಹೋಗ್ತೀಯ! ಆಟೋದಲ್ಲೋ ಟ್ಯಾಕ್ಸೀಲೋ ಹೋಗು. ದುಡ್ಡು ಬೇಕಾ?.. ಎನ್ನುತ್ತಾ ನೂರರ ಒಂದೆರಡು ನೋಟುಗಳನ್ನು ಅವಳ ಕೈಗಿತ್ತ. ಅವಳು ಅಲ್ಲಿಂದ ಹೊರಬಿದ್ದಳು. ಆಟೋಗಾಗಿ ಕಾಯುತ್ತಾ ರಸ್ತೆ ಬದಿಯಲ್ಲಿ ನಿಂತಿದ್ದವಳನ್ನು ಅವಳ ಸ್ನೇಹಿತೆ ಶ್ವೇತಾ ಗುರುತಿಸಿ, ಹತ್ತಿರಕ್ಕೆ ಬಂದಳು..'' ಒಂದು ಸಮಯದಲ್ಲಿ ಆಪ್ತ ಗೆಳತಿಯಾಗಿದ್ದವಳು.

''ಚೈತ್ರಾ.. ಇದೇ ಊರ್ನಲ್ಲಿ ಇದೀಯೇನೆ?...'' ಪತ್ತೇನೇ ಇಲ್ಲ.... ''ನೀನೇನೇ ಇಲ್ಲಿ?'' ಅವಳನ್ನು ಕಂಡು ಖುಷಿಯಾಗಿರಲಿಲ್ಲ.

''ನೀನು ಅದೇನು ಇಲ್ಲಿಗೆ ಬಂದಿರೋದು?....'' ಮರು ಪ್ರಶ್ನಿಸಿದಳು.

''ಇಲ್ಲೇ ಪಕ್ಕದ ಬಿಲ್ಡಿಂಗ್‌ನಲ್ಲಿ ಒಂದು ಆಫೀಸಿದೆ. ಅಲ್ಲಿ ವೇಕೆನ್ಸಿ ಇದೆ ಅಂತ ತಿಳೀತು. ಅಪ್ಲಿಕೇಷನ್ ಕೊಡೋಕೆ ಅಂತ ಬಂದಿದ್ದೆ. ಈಗ ಮನೆಗೆ ವಾಪಸ್ಸು ಹೋಗ್ತಾ ಇದೀನಿ.... ನಿನ್ನ ವಿಚಾರ ಹೇಳು....ಮದುವೆ ಆಯ್ತೇನೋ ಅಂತ ಅಂದ್ಕೊಂಡೆ ನಾನು.''

''ಮದುವೆ! ನಿಮಗೆಲ್ಲಾ ತಿಳಿಸ್ದೇ ಮದುವೆ ಆಗ್ತೀನಾ?...''

''ಮತ್ಯಾಕೆ ಪರೀಕ್ಷೆಗೆ ಬರ್ಲಿಲ್ಲ ನೀನು....''

''ಓದಲಿಲ್ಲ, ಪಾಸಾಗ್ತೀನಿ ಅನ್ನೋ ನಂಬಿಕೆ ಇರ್ಲಿಲ್ಲ.... ಅಷ್ಟೇ..''

''ಅಟೆಂಪ್ಟ್ ಮಾಡಬಹುದಾಗಿತ್ತು.... ಅನ್ಯಾಯ ಮಾಡ್ಕೊಂಡೆ... ಇಲ್ಲಿ ಏನ್ಮಾಡ್ತಿದ್ದೆ...?

''ನಿಧಾನವಾಗಿ ಎಲ್ಲಾ ಹೇಳ್ತೀನಿ. ಇಲ್ಲಿ ರಸ್ತೇಲಿ ಮಾತು ಬೇಡ.''

''ಫ್ರೀಯಾಗಿದ್ರೆ ನಮ್ಮ ಮನೆಗೇ ಹೋಗೋಣ ಬಾ. ಮನೇಲಿ ಯಾರೂ ಇಲ್ಲ''

''ನಿಮ್ಮಣ್ಣ?... ಅಮ್ಮ?''

''ಅಣ್ಣ ರಾತ್ರೀನೇ ಮನೆಗೆ ಬರೋದು. ಅಮ್ಮ ಅವಳ ಅಣ್ಣನ ಮನೆಗೆ ಹೋಗಿದಾಳೆ. ಮಾತನಾಡುತ್ತಾ ಇಬ್ಬರೂ ಬಸ್‌ಸ್ಟಾಂಡಿಗೆ ಬಂದರು. ಬಸ್ ಹತ್ತಿ, ಇಬ್ಬರೂ ಅವಳ ಮನೆಗೆ

ಬಂದರು. ಶ್ವೇತಾ ಅವಳನ್ನು ಕೂರಿಸಿ, ಅಡಿಗೆ ಮನೆಗೆ ಹೋಗಿ, ತಿನ್ನಲು ಒಂದಿಷ್ಟು ತಿಂಡಿಯನ್ನು ಕುಡಿಯಲು ನೀರನ್ನು ತಂದಿತ್ತಳು. ಚೈತ್ರಾ ಗಟಗಟನೆ ನೀರನ್ನು ಕುಡಿದಳು.

"ಹೂಂ, ಹೊಟ್ಟೆ ತಣ್ಣಗಾಯ್ತುಲ್ಲ, ಈಗ ಹೇಳು ನಿನ್ನ ಕತೇನ?..." ಶ್ವೇತಾ ಸರಿಯಾಗಿ ಕುಳಿತು ತಿಂಡಿಯ ತಟ್ಟೆಯನ್ನು ಕೈಗೆತ್ತಿಕೊಂಡಳು. ಚೈತ್ರಾ, ತಾನೂ ನಿಧಾನವಾಗಿ ತಿನ್ನುತ್ತಾ, ಎಲ್ಲಾ ವಿಷಯಗಳನ್ನು ಹೇಳಿದಳು.

"ಈಗ ಏನ್ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ. ನನಗೆ ಸಲಹೆಯನ್ನು ಕೊಡೋಕೆ ಸಹಾಯ ಮಾಡುಕ್ಕೆ ಯಾರೂ ಆಪ್ತರಿಲ್ಲ. ನಾನು ಅನಾಥೆ ಅನ್ನೋ ಭಾವ ಬರ್ತಿದೆ."

"ಯಾಕೇ? ನಾನು ಇಲ್ವಾ?... ನನ್ನ ಅಣ್ಣ ಏನು ಬೇಕಾದ್ರೂ ಸಹಾಯ ಮಾಡ್ತಾನೆ."

"ಎಲ್ಲರಿಗೂ ಹೇಳ್ಕೊಂಡು ತಿರುಗುವ ವಿಷಯ ಇದಲ್ಲ ಶ್ವೇತಾ.. ರಾಜೀವಂಗೆ ಅನುಮಾನ ಬಂದರೆ ಕೆಲಸ ಕೆಡುತ್ತೆ. ಶರತ್‌ಗೆ ಮಾತು ಕೊಟ್ಟು ಬಿಟ್ಟಿದೀನಿ. ಚಿದಾನಂದನಿಗೆ ದ್ರೋಹವಾದೀತು ಅಂತ ಆತಂಕ. ನಾನು ಅವನನ್ನು ಇಷ್ಟ ಪಟ್ಟಿದೀನಿ."

"ನಾನು ಶರತ್ ಹತ್ರ ಮಾತಾಡ್ಲಾ?..."

"ಈಗಲೇ ಬೇಡ ಕಣೇ..."

"ಮೊದಲು ಚಿದಾನಂದನ ಹತ್ರ ಮಾತಾಡು. ಅವನು ತಕ್ಷಣಕ್ಕೆ ಮದುವೆಯಾಗೋಕೆ ಸಿದ್ಧನಾಗಿದ್ರೆ, ಎಲ್ಲವನ್ನೂ ಮರೆತು, ಅವನ ಜೊತೆ ಓಡಿ ಹೋಗು..."

"ಅದು ಅಷ್ಟು ಸುಲಭವಲ್ಲ, ಆಮೇಲೆ ಡ್ಯಾಡಿಯ ಗತಿ?... ಚಿದಾನಂದ ಅವರನ್ನು ತುಂಬಾ ಚೆನ್ನಾಗಿ ನೋಡಿಕೊಳ್ತಿದಾನೆ...." ಚೈತ್ರಾಳ ಕಣ್ಣುಗಳಲ್ಲಿ ನೀರು ತುಳುಕಿತು.

"ಸರಿ, ಅಳ್ಬೇಡ, ಚಿದಾನಂದನ ಹತ್ರ ಮೊದಲು ಮಾತ್ನಾಡು, ಎಲ್ಲಾ ಸರಿ ಹೋಗುತ್ತೆ, ಅವಳು ಸಮಾಧಾನ ಮಾಡುವವಳಂತೆ ಹೇಳಿದಾಗ, ಚೈತ್ರಾಳಿಗೆ ಅದು ಸರಿ ಎನಿಸಿತು. ತಿಂಡಿ ಮುಗಿದಿತ್ತು. ಅವಳಿತ್ತ ಕಾಫಿಯನ್ನು ಕುಡಿದು ಎದ್ದಳು. ನಾನೂ ನಿನ್ನ ಜೊತೇಲಿ ಬರ್ತೀನಿ. ನಿಮ್ಮ ತಂದೇನ ನೋಡಿದ ಹಾಗಾಗುತ್ತೆ." ಎನ್ನುತ್ತಾ ಎದ್ದಳು. ಇಬ್ಬರೂ ಒಂದು ಆಟೋ ಹಿಡಿದರು. ಸ್ನೇಹಿತೆಯರಿಬ್ಬರೂ ಒಳಕ್ಕೆ ಬಂದಾಗ, ಶರತ್ ತಂಗಿಯ ಕಡೆ ದುರು ದುರು ನೋಡಿದ. ಶ್ವೇತಾ ಮುಂದೆ ಬಂದಳು. ಹಾಯ್ ಶರತ್....ನಾನ್ಯಾರು, ಗೊತ್ತಾಯ್ತಾ?..." ಮಂದಹಾಸ ಬೀರಿದಳು.

"ಶ್ವೇತಾ ಅಲ್ವಾ?... ಚೈತ್ರಾಳ ಕ್ಲಾಸ್ ಮೇಟ್.. ಹೇಗಿದೀರಿ?.."

"ನಾನು ಚೆನ್ನಾಗಿದೀನಿ. ಚೈತ್ರ ಪರೀಕ್ಷೆಗೂ ಬರಲಿಲ್ಲವಲ್ಲ. ವಿಚಾರಿಸೋಣ ಅಂತ ಬಂದೆ. ದಾರಿಯಲ್ಲಿ ಇವಳು ಸಿಕ್ಕಿದಳು. ಒಟ್ಟಿಗೇ ಬಂದೆವು.."

"ಕೂತ್ಕೊಳ್ಳಿ..." ಎಂದ ಇಬ್ಬರೂ ಮಾತಿನಲ್ಲಿ ತೊಡಗಿರುವಾಗ, ಚೈತ್ರಾ ಮಹಡಿಯನ್ನೇರಿದಳು. ಚಿದಾನಂದ ಅವಳ ಬಳಿ ಸಾರಿದ.

"ಸಧ್ಯ ಮನೆಗೆ ಬಂದ್ರಾ? ಎಲ್ಲಿಗೆ ಹೋಗಿದ್ರಿ?.. ಶರತ್ ತುಂಬಾ ಅಪ್ಸೆಟ್ ಆದ ಹಾಗಿತ್ತು."

ಅಂತಂದ.

"ಹೂಂ ಈಗ್ತಾನೆ ಬಂದೆ. ಬೈಯ್ಯೋಣ ಅಂತ ಇದ್ದೇನೋ? ನನ್ನ ಜೊತೆ ನನ್ನ ಫ್ರೆಂಡ್ ಇದ್ಲು. ಗುರ್ ಅಂತ ನೋಡಿ, ಹಾಗೇ ಸುಮ್ಮನಾದ. ಅವಳ ಜೊತೆ ಮಾತಾಡ್ತಿದಾನೆ, ನಾನು ಇಲ್ಲಿಗೆ ಬಂದೆ..."

"ಎಲ್ಲಿಗೆ ಹೋಗಿದ್ರಿ ಚೈತ್ರಾ! ನಂಗೂ ಆತಂಕವಾಗಿತ್ತು."

"ರಾಜೀವನ ಮಾತುಗಳಿಂದ ತಲೆ ಕೆಟ್ಟ ಹಾಗಾಗಿತ್ತು.. ನನ್ನ ಫ್ರೆಂಡ್ ಮನೆಗೆ ಹೋಗಿದ್ದೆ. ಆಮೇಲೆ ಇಬ್ರೂ ಒಟ್ಟಿಗೇ ಬಂದೆವು.."

"ಆಪ್ತ ಸ್ನೇಹಿತೇನಾ?.."

"ನಿಮಗಿಂತ ಮುಂಚೆ, ಅವಳೊಬ್ಬಳೇ ನನ್ನ ಆಪ್ತ ಸ್ನೇಹಿತೆ ಇದ್ದದ್ದು. ಎಷ್ಟೋ ಸಾರಿ ಬೇಜಾರಾದಾಗ, ರಾತ್ರಿ ಕೂಡಾ ಅವಳ ಮನೇಲೇ ಉಳಿದುಕೊಂಡು ಬಿಡ್ತಿದ್ದೆ. ಈಗ ನೀವು ಸಿಕ್ಕ ಮೇಲೆ, ಅವಳನ್ನು ದೂರ ಮಾಡಿಬಿಟ್ಟಿದ್ದೆ."

"ನನ್ನನ್ನ ಅಷ್ಟು ಹಚ್ಕೋಬೇಡಿ ಚೈತ್ರಾ ನಿರಾಸೆ ಆದೀತು?...ಬೇರೆ ಬೇರೆ ತಿರುವುಗಳಿವೆ.."

"ಏನೇ ತಿರುವಿರಲಿ, ನನ್ನ ನಿರ್ಧಾರವೇ ಬೇರೆ.. ಅದಿರಲಿ, ನಿಮಗೆ ನಿಮ್ಮ ತಾಯಿಯನ್ನು ನೋಡ್ಬೇಕು ಅಂತ ಅನ್ನಿಸ್ತಿಲ್ವಾ?"

"ಹೂಂ, ಅನ್ನಿಸುತ್ತೆ, ಒಂದೆರಡು ದಿನಗಳ ಮಟ್ಟಿಗೆ ಊರಿಗೆ ಹೋಗಿ ಬರೋಣ ಅಂತ ಅಂದ್ಕೊಂಡಿದೀನಿ."

"ಹಾಗಾದ್ರೆ ನಿಮ್ಮ ಜೊತೇಲಿ ನನ್ನನ್ನೂ ಕರ್ಕೊಂಡು ಹೋಗಿ.."

"ಅದ್ಹೇಗೆ ಆಗುತ್ತೆ ಚೈತ್ರಾ?.. ಶರತ್ ಒಪ್ಪಬೇಕಲ್ಲ.."

"ಸರಿ ಹಾಗಾದ್ರೆ.. ನಿಮ್ಮ ತಾಯೀನ ಇಲ್ಲಿಗೇ ಕರೆಸಿ, ನೀವು ಮಾತ್ರ ಹೋಗ್ಬೇಡಿ.." ಅವನು ಅಚ್ಚರಿಯಿಂದ ನೋಡಿದ.

"ಅವಳು ಬರದೇ ಇದ್ದರೇ?"

"ಬನ್ನಿ ಅಂತ ಬಲವಂತ ಮಾಡ್ಬೇಕು. ನಿಮಗೆ ನಿಮ್ಮ ತಾಯಿಯ ಮೇಲೆ ಬಲವಾದ ಪ್ರೀತೀನೇ ಇಲ್ಲ. ನಾನು ತಾಯಿಯಿಲ್ಲದವಳು, ಆ ಬೆಲೆ, ಪ್ರೀತಿ ಏನೂಂತ ನಂಗೊತ್ತು."

"ನಂಗೂ ಅಮ್ಮನ ಬೆಲೆ ಗೊತ್ತಿದೆ.... ಆದರೆ ನಮ್ಮಮ್ಮನ ಪರಿಸ್ಥಿತಿಯ ಬೆಲೆ ಇನ್ನೂ ಹೆಚ್ಚು ಗೊತ್ತಿದೆ...."

"ನನ್ನನ್ನ ಹಂಗಿಸಿ ಅಂತಿದೀರಿ. ಈಗ ನಾನೇ ಹೇಳ್ತಿದೀನಿ. ಚೈತ್ರಳಿಗೆ ನಿನ್ನ ಅವಶ್ಯಕತೆ ಇದೆ. ತಕ್ಷಣ ಬಾ ಅಂತ ಫೋನು ಮಾಡಿಸಿ. ಖಂಡಿತಾ ಬರ್ತಾರೆ."

"ಅಂ!ಏನಂದ್ರಿ? ನಿಮಗೆ ನನ್ನ ಅಮ್ಮನ ಅವಶ್ಯಕತೆ ಇದೆಯಾ? ಯಾಕೆ?."

"ಈ ನಡುವೆ ನನಗೆ ನನ್ನ ಅಮ್ಮನ ನೆನಪು ತುಂಬಾ ಬರ್ತಿದೆ. ಅಮ್ಮ ಇದ್ದರೆ ಒಬ್ಬಳು ಒಳ್ಳೆಯ ಸ್ನೇಹಿತೆ ಇದ್ದ ಹಾಗೆ. ನಮ್ಮ ಮನಸ್ಸಿನ ತುಮುಲಗಳನ್ನೆಲ್ಲ ಹೇಳಿಕೊಳ್ಳಬಹುದು. ಅಮ್ಮ ಯಾರೇ ಆಗಿರಲಿ, ತಾಯಿಯ ಹೃದಯ ಒಂದೇ ಥರ ಅಲ್ವಾ?.." ನಾನೀಗ ತುಂಬಾ ಒಂಟಿಯಾಗಿ ಬಿಟ್ಟಿದೀನಿ....."

"ಒಂಟಿಯಾಗಿ ಎಲ್ಲಿದೀರಿ? ನಾನಿದೀನಿ. ಶರತ್ ಇದಾರೆ. ರಾಜೀವ ಇದಾರೆ.. ಇನ್ನೇನು?"

"ಹೂಂ, ಎಲ್ಲರೂ ಇದೀರಿ. ಎಲ್ಲವೂ ಇದೆ. ಶರತ್ ನನಗೆ ಅಣ್ಣ, ಸ್ನೇಹಿತನಲ್ಲ, ರಾಜೀವ ನನ್ನ ಬಾಸ್, ನನ್ನ ಸ್ನೇಹಿತನಲ್ಲ.. ನೀವು ಸ್ನೇಹಿತರು..ಆದರೆ...."

"ಸ್ನೇಹಿತ ಅಂತ ಒಪ್ಕೊಂಡಿದೀರಲ್ಲ, ಆದರೆ...ಯಾಕೆ?.. ಏನೀಗ ಸಮಸ್ಯೆ..?"

"ನಿಮ್ಮ ತಾಯೀನ ಕರೆಸಿ ಅವರ ಹತ್ರ ಮಾತಾಡ್ತೀನಿ..."

"ಓ... ನಮ್ಮಿಬ್ಬರ ಮದುವೆ ಮಾತಾಡ್ಬೇಕು ಅಂತ ಇದೀರಾ! ಸಧ್ಯಕ್ಕೆ ಸಾಧ್ಯವಿಲ್ಲ.."

"ಯಾಕೆ ಸಾಧ್ಯವಿಲ್ಲ, ನಾನು ನಿಮ್ಮನ್ನು ತುಂಬಾ ಪ್ರೀತಿಸ್ತಿದೀನಿ. ನೀವೂ ನನ್ನನ್ನು ಪ್ರೀತಿಸ್ತೀರಿ ಅಂತ ನಂಗೆ ಗೊತ್ತು..."

"ನಾನೆಂದು ಹಾಗೆ ಹೇಳಿದೀನಿ ಚೈತ್ರಾ..? ನಾನು ನಿಮ್ಮ ಸ್ನೇಹಿತ ಅಷ್ಟೆ. ನೀವು ಸಲಗೆಯಿಂದ ಇದ್ದರೂ, ನಾನೆಂದೂ ನಿಮ್ಮನ್ನು ಆ ಭಾವನೆಯಿಂದ ನೋಡೇ ಇಲ್ಲ."

"ನೀವು ಸುಳ್ಳು ಹೇಳ್ತಿದೀರಿ.. ನಾನು ರಾಜೀವನನ್ನ ಮದುವೆಯಾಗ್ತಿದೀನಿ ಅಂತ ನಿಮಗೆ ಕೋಪ...ನನಗೆ ಈ ನಾಟಕವೆಲ್ಲ ಬೇಡ. ನನ್ನನ್ನು ಈ ಗೊಂದಲದಿಂದ ಆಚೆಗೆ ಕರೆದುಕೊಂಡು ಹೋಗಿ...ನಾನು ಒಪ್ಪಿಗೆ ಇಲ್ಲ ಅಂತ ಮಾತ್ರ ಹೇಳ್ಬೇಡಿ."

"ನಾನು ಹೇಗೆ ಒಪ್ಪಿಕೊಳ್ಳಲಿ ಚೈತ್ರಾ...ನಾನೆಲ್ಲಿ, ನೀವೆಲ್ಲಿ? ನಾನು ಈ ಮನೆಗೆ ಕೆಲಸಕ್ಕೆ ಅಂತ ಬಂದಿರುವವನು...ವಿದ್ಯಾವಂತನಲ್ಲ...ಬುದ್ಧಿವಂತನಲ್ಲ...ನನಗೆ ನಿಮ್ಮನ್ನು ಮದುವೆಯಾಗುವ ಯಾವ ಅರ್ಹತೆಯೂ ಇಲ್ಲ...."

"ನನಗೆ ಯಾವ ಅರ್ಹತೆಯೂ ಬೇಕಿಲ್ಲ. ನೀವು ಒಳ್ಳೆಯವರು, ನನಗೆ ಅಷ್ಟೇ ಸಾಕು...ರಾಜೀವ ಫೋನು ಮಾಡಿದ್ನಾ! ಶರತ್ ಏನಾದ್ರೂ ಅಂದ್ನಾ?... ನೀವು ಇದ್ದಕ್ಕಿದ್ದಂತೆ ಬದಲಾಗಿದೀರಿ ಅಂತ ಅನ್ನಿಸ್ತಿದೆ.. ಆದರೆ ನಾನು ಯಾರಿಗೂ ಕೇರ್ ಮಾಡುಲ್ಲ. ನನಗೆ ನೀವು ಬೇಕು. ನನ್ನ ಪ್ರೀತಿಯನ್ನು ತಿರಸ್ಕರಿಸಬೇಡಿ....ಪ್ಲೀಸ್.." ಅವಳು ಭಾವೋದ್ವೇಗದಿಂದ ಅವನ ಕೈಗಳನ್ನು ಹಿಡಿದು ನುಡಿದಾಗ, ಅವನು ವಿಶ್ವಾಸದಿಂದ ಅವಳ ಕೈಗಳನ್ನು ಅಮುಕಿದ.

"ದುಡುಕಬೇಡಿ ಚೈತ್ರಾ.. ನಾನು ಯಾವಾಗಲೂ ನಿಮ್ಮ ಆಪ್ತ ಸ್ನೇಹಿತನೇ. ಸಧ್ಯಕ್ಕೆ ಈ ಮದುವೆಯ ಸುದ್ದಿ ಖಂಡಿತಾ ಬೇಡ. ಶರತ್‌ನ ಆಲೋಚನೆಗಳು ತಲೆ ಕೆಳಗಾಗಬಹುದು. ಅವರಿಗೆ ಕೋಪ ಬರಬಹುದು. ನನ್ನನ್ನ ಈ ಮನೆಯಿಂದ ಆಚೆಗೆ ಕಳಿಸಿಬಿಟ್ಟರೆ, ನನಗೆ, ನಿಮಗೆ, ಮೇಲಾಗಿ ನಿಮ್ಮ ತಂದೆಗೆ ತೊಂದರೆಯಾಗಬಹುದು. ಅದನ್ನು ಯೋಚಿಸಿ."

"ಡ್ಯಾಡಿಯನ್ನು ನಮ್ಮ ಜೊತೆಗೆ ಕರೆದುಕೊಂಡು ಹೋಗೋಣ"

"ಅದು ಸುಲಭವಲ್ಲ, ನಾನು ಅನುಕೂಲವಂತನಲ್ಲ, ಶರತ್ ಎಲ್ಲಿಂದ ಹಣವನ್ನು ಒದಗಿಸ್ತಾರೆ! ಅಥವಾ ನಮಗೆ ಕೊಡದೇನೂ ಇರಬಹುದು. ಇವರನ್ನು ನೋಡಿಕೊಳ್ಳುವುದು ಕಷ್ಟವಾಗುತ್ತೆ, ಶರತ್ ಹೇಳಿದ ಹಾಗೆ ಕೇಳಿ ಬಿಟ್ಟರೆ, ಹಣಕ್ಕೆ ಚಿಂತೆ ಇರುಲ್ಲ."

"ನಾನೂ ಕೆಲಸಕ್ಕೆ ಸೇರಿ ಸಂಪಾದಿಸ್ತೀನಿ, ಹೇಗೋ ನಡೆಯುತ್ತೆ"

"ಇಲ್ಲ, ಹೇಗೋ ನಡೆಯುವುದು ಸುಳ್ಳು. ನಿಮಗೆ ಬಡತನ ಅಂತಂದ್ರೆ ಏನೂಂತ ಗೊತ್ತಿಲ್ಲ. ಎಷ್ಟೋ ರಾತ್ರಿಗಳು ಉಪವಾಸದಿಂದ ಕಳೆದಿದೀನಿ. ನಿದ್ದೆ ಬಾರದೇ ಹೊರಳಾಡಿದೀನಿ. ಇಲ್ಲಿ, ನನಗಾಗಲೀ, ನಿಮಗಾಗಲೀ, ಊಟ ತಿಂಡಿಗೆ ಕೊರತೆ ಇಲ್ಲ. ಮೊದಲು ಶರತ್‌ಗೆ ಅವರ ಕೈ ಬಿಟ್ಟು ಹೋಗಿರುವ ಹಣ ಹಿಂದಕ್ಕೆ ಬರುವುದು ಮುಖ್ಯ.. ಆಮೇಲೆ ಶರತ್ ಒಪ್ಪಿದರೂ ಒಪ್ಪಬಹುದು. ಅಲ್ಲಿಯವರೆಗೆ ಕಾಯೋಣ."

"ಅವನು ಒಪ್ತಾನೆ ಅನ್ನೋ ನಂಬಿಕೆ ನನಗಿಲ್ಲ."

"ಅವನ ಹಣ ಅವರಿಗೆ ವಾಪಸ್ಸು ಸಿಕ್ಕ ಮೇಲೆ, ನಿಮಗೆ ರಾಜೀವನಿಂದ ಬಿಡುಗಡೆ ಸಿಕ್ಕ ಮೇಲೆ ಒಪ್ಪಿಸೋಣ....ಬೇಕಾದರೆ, ನೀವು ಕಂಡೀಷನ್ ಹಾಕಿಯೇ ಮುಂದುವರೆಯಿರಿ."

"ಪರಿಣಾಮ ಏನೇನಾಗಬಹುದು ಅನ್ನೋ ಕಲ್ಪನೆ ನಿಮಗಿದೆಯಾ! ನಾನು ರಾಜೀವನಿಗೆ ಪತ್ನಿಯಾಗ್ತೀನಿ.. ನನ್ನ ಅವನ ಸಂಬಂಧ ನಿಕಟವಾಗಿರುತ್ತೆ. ಇದ್ಯಾಕೆ ನಿಮಗೆ ಅರ್ಥವಾಗುಲ್ಲ? ಅವನು ನನ್ನನ್ನು ಬಳಸಿಕೊಳ್ಳದೇ ಇರ್ತಾನಾ!... ನಾನು ಅವನ ಸ್ವತ್ತು ಆಗಿಬಿಡ್ತೀನಿ."

"ನೀವು ಚುರುಕಾಗಿರುವವರು, ಅವರಿಂದ ದೂರ ಇರುವುದು ಹೇಗೆ ಅಂತ ನಾನು ಹೇಳಿ ಕೊಡ್ಬೇಕಾ!.. ಏನಾದರೂ ಉಪಾಯವನ್ನು ಹುಡುಕಿ... ಹಾಗೇ ಅವರಿಂದ ಡೈವೋರ್ಸ್ ತೆಗೆದುಕೊಂಡು, ಸಂಬಂಧವನ್ನು ಕಳಚಿಕೊಳ್ಳುವ ಬಗ್ಗೆ ಯೋಚಿಸಿ.. ಆಮೇಲೆ ನೋಡೋಣ."

"ನೀವೂ ಹೀಗೆ ಯೋಚಿಸ್ತೀರಿ ಅಂತ ನಾನು ಅಂದ್ಕೊಂಡಿರ್ಲಿಲ್ಲ. ನಿಮಗೂ ಹಣದ ಆಸೇನಾ! ಶರತ್ ಎಷ್ಟು ಪರ್ಸೆಂಟ್ ಕೊಡ್ತೀನಿ ಅಂತಂದ?.. ನನ್ನ ಪ್ರೀತಿಗಿಂತ ನಿಮಗೆ ಹಣವೇ ಹೆಚ್ಚಾಯ್ತಾ?.."

"ಚೈತ್ರಾ..! ಏನೇನೋ ಅಪಾರ್ಥ ಕಲ್ಪಿಸ್ಬೇಡಿ, ನನಗೆ ಹಣದ ಆಸೆ ಇಲ್ಲ. ಪ್ರೀತಿಗೆ ಏನು ಬೆಲೆ ಅಂತಲೂ ಗೊತ್ತು. ಆದರೆ ಹಣವಿಲ್ಲದೆ ಯಾವ ಕೆಲಸವೂ ಸಾಗುವುದಿಲ್ಲ. ಅದು ಅತಿ ಮುಖ್ಯ ಅನ್ನುವ ಅನುಭವ ನನಗಿದೆ. ನನಗೆ ಯಾವ ಹಣವೂ ಬೇಡ. ಇಲ್ಲಿ ನಾನು ಇರುವ ಉದ್ದೇಶ ಅದಲ್ಲ. ಹೀಗೆಲ್ಲ ಅವಮಾನವಾಗುವಂತೆ ಯಾರೇ ಮಾತನಾಡಿದರೂ, ನನಗೆ ಇಲ್ಲಿರಲು ಕಷ್ಟ ಆಗುತ್ತೆ.."

"ಸರಿ ಬಿಡಿ, ಎಲ್ರಿಗೂ ಅವರವರ ಚಿಂತೆಯೇ ಅವರವರಿಗೆ. ನಾನೇ ಅವಿವೇಕಿ.. ನಿಮ್ಮನ್ನು ನಂಬಿದೆ. ಪ್ರೀತಿಸಿದೆ.. ಹಾಗೇ ಮೋಸ ಹೋದೆ. ನನಗೆ ಏನಾದರೆ ನಿಮಗೇನು? ನಾನ್ಯಾಕೆ ನಿಮ್ಮನ್ನು ಬಲವಂತ ಪಡಿಸಬೇಕು? ಎಲ್ಲರೂ ಸ್ವಾರ್ಥಿಗಳೇ...."

"ಹಾಗಲ್ಲ ಚೈತ್ರಾ.. ಪರಿಸ್ಥಿತಿ ಚೆನ್ನಾಗಿಲ್ಲ ಅಂತ ಹೇಳಿದೆ ಅಷ್ಟೆ."

"ಹೇಳದೇ ಏನು! ನಾನು ರಾಜೀವನನ್ನ ಮದುವೆಯಾಗಲಿ ಅಂತ ನೀವೇ ಪದೇ ಪದೇ ಹೇಳುತ್ತಿರುವಾಗ, ನನ್ನ ಪ್ರೀತಿಯ ಬಗ್ಗೆ ಹೇಳಿಕೊಂಡರೆ ಏನು ಪ್ರಯೋಜನ? ನಾನೇಕೆ ನಿಮ್ಮ ಮಾತಿಗೆ ಒಪ್ಪಬೇಕು? ನಾನೇ ಈ ಮನೆಯಿಂದ ಆಚೆ ಹೊರಟು ಹೋಗ್ತೀನಿ."

ಅವನು ಹೆದರಿದ. "ಹಾಗೆ ಮಾತ್ರ ಮಾಡ್ಬೇಡಿ... ಅದು ತಪ್ಪಾಗುತ್ತೆ."

"ನನಗೂ ಒಂದು ಜೀವನ ಇದೆ. ನನಗೆ ಬೇಕಾದ ಹಾಗೆ ಜೀವನ ನಡೆಸಬೇಕು ಅಂತ ನಾನು ಆಸೆ ಪಟ್ಟರೆ ಅದು ತಪ್ಪಾ ನೀವೇ ಹೇಳಿ."

"ನಿಮ್ಮ ಮಾತು ಸರಿಯಾಗಿದೆ... ಮೊದಲು ಅಮ್ಮನ್ನ ಕರೆಸ್ತೀನಿ. ಅಲ್ಲಿಯವರೆಗೆ ಧೈರ್ಯವಾಗಿರಿ. ದುಡುಕಬೇಡಿ.." ಅವನು ಅವಳಿಗೆ ಸಮಾಧಾನ ಪಡಿಸುವವನಂತೆ ಹೇಳಿದ. ಇಬ್ಬರೂ ಕೆಳಗಿಳಿದು ಬಂದರು. ಚೈತ್ರಾ ತನ್ನ ಸ್ನೇಹಿತೆಗೆ ಅವನನ್ನು ಪರಿಚಯಿಸಿದಳು.

* * *

ತಾಯಿಯನ್ನು ಕರೆತರಲು ಬಸ್‌ಸ್ಟ್ಯಾಂಡಿಗೆ ಹೋಗಿದ್ದ ಚಿದಾನಂದ, ಆಟೋರಿಕ್ಷಾದಲ್ಲಿ ಕುಳಿತಿದ್ದಾಗ ಸಂಕ್ಷಿಪ್ತವಾಗಿ ಕೆಲವು ವಿಷಯಗಳನ್ನು ಹೇಳಿದ. ನಾನು ಇಲ್ಲಿರುವುದೇ ಸರಿಯಿಲ್ಲವೇನೋ ಅಂತ ಅನ್ನಿಸ್ತಿದೆ. ಚೈತ್ರಾಳಿಗೆ ತಿಳುವಳಿಕೆ ಸಾಲದು. ಕೆಲವೊಮ್ಮೆ ಬಾಲಿಶವಾಗಿ ಆಡ್ತಾಳೆ.... ಅಣ್ಣ ತಂಗಿ ಇಬ್ಬರೂ ಅವಿವೇಕಿಗಳೇ. ನೀನು ಅವಳಿಗೆ ತಿಳುವಳಿಕೆಯನ್ನು ಹೇಳಿ, ರಾಜೀವನನ್ನು ಮದುವೆಯಾಗಲು ಒಪ್ಪಿಸು. ಇಲ್ಲದಿದ್ದರೆ ನಾನು ಇಲ್ಲಿರಲು ಸಾಧ್ಯವಿಲ್ಲ."

"ನೀನು ವಿಷಯ ಹೀಗಿದೆ ಅಂತ ಆಗಲೇ ಹೇಳಿದ್ದಿದ್ರೆ, ಈ ಕೆಲಸವನ್ನು ಬಿಟ್ಟು ಬಾ ಅಂತ ನಾನೇ ಹೇಳ್ತಿದ್ದೆ.... ಅವಳ ಸಲುಗೆಯನ್ನು ನೀನೇಕೆ ಸಹಿಸಿಕೊಳ್ಳಬೇಕಾಗಿತ್ತು? ನಿನಗಾದ್ರೂ ತಿಳುವಳಿಕೆ ಬೇಡ್ವಾ?"

"ನಾನೇನಮ್ಮ ಮಾಡ್ಲೀ..? ಹುಡುಗಾಟದ ಹುಡುಗಿ ಅಂತ ಅಂದ್ಕೊಂಡೆ. ತಾನಾಗಿಯೇ ಸರಿ ಹೋಗ್ತಾಳೆ ಅಂತ ಅಂದ್ಕೊಂಡೆ...ಕಡೆಗೆ ರಾಜೀವನ ಪ್ರಸ್ತಾಪ ಬಂದಾಗ, ಅವನನ್ನು ಮದುವೆಯಾಗಿ ಹೋದರೆ, ಅಲ್ಲಿಗೆ ಎಲ್ಲಾ ಮುಗೀತು ಅಂತ ಅಂದ್ಕೊಂಡೆ...ಕೆಲಸವನ್ನು ಕಳೆದುಕೊಳ್ಳುವ ಆಸೆ ನನಗಿರಲಿಲ್ಲ.." ಅರ್ಧ ಸತ್ಯವನ್ನು ಮುಚ್ಚಿಟ್ಟು ಹೇಳಿದ.

"ಹಾಗಂತ ಇದನ್ನೆಲ್ಲಾ ಯಾರಾದ್ರೂ ಸಹಿಸ್ಕೋತಾರೇನೊ? ನಿನ್ನದೂ ಹುಡುಗು ಬುದ್ಧೀನೇ.. ಏನಾದ್ರೂ ಹೆಚ್ಚು ಕಡಿಮೆ ಆಗಿದ್ದಿದ್ರೆ, ಏನ್ಗತಿ?.. ಮಾನಕ್ಕಿಂತ ಹಣ, ಸಂಪಾದನೆ ಮುಖ್ಯವಲ್ಲ.."

"ಅಂಥಾದ್ದೇನೂ ಆಗಿಲ್ಲಮ್ಮ.. ಇಲ್ಲಿಯ ಪರಿಸ್ಥಿತಿ ಏನೇನೂ ಚೆನ್ನಾಗಿಲ್ಲ. ಈ ಶರತ್‌ನ ಪ್ಲಾನ್ ಕೂಡಾ ಸರಿಯಾಗಿಲ್ಲ... ಯಾರಾದ್ರೂ ತಂಗೀನ ಹೀಗೆ ಉಪಯೋಗಿಸ್ಕೊಳ್ತಾರಾ?"

"ಹೋಗ್ಲೀ.. ಆ ರಾಜೀವ ಹೇಗೆ? ನೀನು ನೋಡಿದೀಯಾ?"

"ನೋಡೋಕೆ ಚೆನ್ನಾಗಿದಾನೆ. ವಿದ್ಯಾವಂತ, ಶ್ರೀಮಂತ, ಈಗ ಇವಳನ್ನು ಪ್ರೀತಿಸ್ತಾ ಇದಾನೆ. ಅವಳನ್ನು ಮದುವೆಯಾಗೋದಕ್ಕೆ ಸಿದ್ಧವಾಗಿದಾನೆ.."

"ಸರಿ ಮತ್ತೆ? ಮದುವೆ ಆಗಲಿ...ಆತನಿಗೋ ಇದೆಲ್ಲಾ ಏನು ನಡೀತಿದೆ ಅನ್ನೋ ಪರಿವೆಯೇ ಇಲ್ಲ.. ಆತನ ಬಗ್ಗೆ ಮರುಕ ಹುಟ್ಟುತ್ತೆ."

"ಹೌದಮ್ಮ, ಆತನ ಆರೋಗ್ಯದಲ್ಲಿ ಏನೂ ಬದಲಾವಣೆ ಇಲ್ಲ....ಹೀಗೇ ಮುಂದುವರೆದರೆ ಏನು ಪ್ರಯೋಜನ?"

"ನೋಡೋಣ, ಅದೇನೇನು ನಡೆಯುತ್ತೆ ಅಂತ?" ರಿಕ್ಷಾ, ರಸ್ತೆಯನ್ನು ಸವೆಸುತ್ತಾ ಮನೆಯ ಮುಂದೆ ಬಂದು ನಿಂತಿತ್ತು. ಅವರುಗಳಿಗಾಗಿಯೇ ಕಾಯುತ್ತಿದ್ದ ಚೈತ್ರಾ ಮುಂಬಾಗಿಲಿಗೆ ಬಂದಳು.. ಮಂದಾಕಿನಿಯನ್ನು ಕಂಡು ಮುಗುಳ್ನಕ್ಕಳು. ಬದಲಾಗಿದ್ದಾಳೆಂದೆನಿಸಿತ್ತು.

"ಹೇಗಿದೀರಿ ಆಂಟಿ?" ವಿಚಾರಿಸಿದಳು. ಅವಳಿಗೆ ವಿಚಿತ್ರವೆನಿಸಿತ್ತು.

"ಹೂಂ, ಚೆನ್ನಾಗಿದೀನಿ, ಇವನನ್ನು ನೋಡ್ಬೇಕು ಅಂತ ಅನ್ನಿಸ್ತು. ಬಂದ್ಬಿಟ್ಟೆ. ನೀವೆಲ್ಲಾ ಹೇಗಿದೀರಿ?.." ನಿಮ್ಮ ತಂದೆ ಹೇಗಿದಾರೆ?" ಮಂದಾಕಿನಿ ವಿಚಾರಿಸಿದಳು.

"ಡ್ಯಾಡಿ ಹೇಗಿದಾರೆ ಅಂತ, ನಮಗಿಂತ ಚೆನ್ನಾಗಿ ನಿಮ್ಮ ಮಗನಿಗೇ ಗೊತ್ತು. ಎಲ್ಲಾ ಇವರದ್ದೇ ಜವಾಬ್ದಾರಿ.." ಒಳ ಬಂದು ಸ್ವಲ್ಪ ಸುಧಾರಿಸಿಕೊಂಡಳು. ಅನ್ನಪೂರ್ಣಮ್ಮ ಕಾಫಿಯನ್ನು ತಂದಿತ್ತಳು.. ಕುಡಿದು ಮುಗಿಸಿ ಎದ್ದಳು.

"ನಿಮ್ಮ ತಂದೇನ ನೋಡ್ಕೊಂಡು ಬರ್ತೀನಿ" ಎನ್ನುತ್ತಾ ಮಹಡಿಯನ್ನು ಹತ್ತಿದಳು. ಚೈತ್ರಾ ಅವಳಿಗೆ ಕಾಣದಂತೆ, ಚಿದಾನಂದನ ತೋಳನ್ನು ಮುಟ್ಟಿ, ಸಂಜ್ಞೆ ಮಾಡಿದಳು. ಅವನು ಏನನ್ನೂ ಹೇಳದೇ ತಾಯಿಯನ್ನು ಹಿಂಬಾಲಿಸಿದ.

ಮಂದಾಕಿನಿ, ಯಶವಂತರಾಯನ ಬಳಿ ನಿಂತಳು. ಆತ ಅಲುಗಾಡಿರಲಿಲ್ಲ. ಅಣ್ಣ ತಂಗಿ ಇಬ್ಬರೂ, ಈತನನ್ನು ನಿನ್ನ ವಶಕ್ಕೆ ಕೊಟ್ಟಿರುವಂತಿದೆ. ಏಕಾಏಕಿ ಬಿಟ್ಟು ಹೋಗುವಂತಿಲ್ಲ. ಕಾರಣವನ್ನು ಹೇಳುವಂತಿಲ್ಲ."

"ಈಗೇನು ಮಾಡ್ಲೀ ನೀನೇ ಹೇಳು.."

"ಗಂಡು ಹುಡುಗನಾಗಿ ನೀನ್ಯಾಕೆ ಹೆದರ್ತೀಯ?.. ನಾನು ಚೈತ್ರಳ ಹತ್ರ ಮಾತಾಡ್ತೀನಿ. ಧೈರ್ಯವಾಗಿರು" ಅಂತ ಮಗನಿಗೆ ಹೇಳಿದರೂ, ಅವಳಿಗೂ ಆತಂಕವಾಗಿತ್ತು. ನಿಜವಾದ ವಿಷಯಗಳನ್ನು ತಿಳಿಸಿದರೆ, ದೊಡ್ಡ ಕೋಲಾಹಲವುಂಟಾಗುವುದು ಖಂಡಿತಾ ಎಂದು ತಿಳಿದಿತ್ತು. ಹೊಸ ಹೊಸ ಸಮಸ್ಯೆಗಳಿಗೆ ತಾನು ನಾಂದಿ ಹಾಡುವುದು ಬೇಡ ಅಂತೆನ್ನಿಸಿದರೂ,.. ಈಗ ಹಿರಿಯಳಾಗಿ ತಾನು ತಿಳುವಳಿಕೆ ಹೇಳುವುದೋ, ಏನಾದರೂ ಸುಳ್ಳು ಹೇಳಿ ಪರಿಸ್ಥಿತಿಯನ್ನು ಸರಿಮಾಡುವುದೋ ಎಂಬ ಜಿಜ್ಞಾಸೆಯಲ್ಲಿ ಮುಳುಗಿದಳು.

ಶರತ್ ಆಫೀಸಿಗೆ ಹೊರಟು ಹೋಗಿದ್ದ. ಚಿದಾನಂದ ಮೆಡಿಕಲ್ ಸ್ಟೋರ್ಸ್‌ಗೆ ಹೋಗಿದ್ದ. ಚೈತ್ರಾ ಅನುಮಾನಿಸುತ್ತಾ ಮಂದಾಕಿನಿ ಇದ್ದಲ್ಲಿಗೆ ಬಂದಳು.

"ಏನಾದ್ರೂ ಬೇಕಾಗಿತ್ತಾ ಚೈತ್ರಾ.. ಕಾಲೇಜಿಗೆ ಹೋಗುಲ್ವಾ?" ಕೇಳಿದಳು.

"ಇಲ್ಲ ಆಂಟಿ...ಕಾಲೇಜು ಬಿಟ್ಬಿಟ್ಟೆ.."

"ಯಾಕಮ್ಮ ಹಾಗ್ಮಾಡ್ದೆ? ಓದನ್ನು ಯಾರಾದ್ರೂ ಬಿಡ್ತಾರಾ?"

"ಅದೆಲ್ಲಾ ಒಂದು ದೊಡ್ಡ ಕತೆ.. ಅವಕಾಶ ಆದ್ರೆ ಮತ್ತೆ ಓದ್ತೀನಿ ಬಿಡಿ...ಈಗ ಕೆಲಸಕ್ಕೆ ಸೇರ್ಕೊಂಡಿದೀನಿ...ಯಾಕೋ ಇದೆಲ್ಲಾ ಬೇಸರ ಬಂದು ಬಿಟ್ಟಿದೆ...ನಾನು ನಿಮ್ಮ ಜೊತೆ ನಿಮ್ಮೂರಿಗೆ ಬರ್ತೀನಿ." ಮಂದಾಕಿನಿ ನಕ್ಕಳು.

"ನಮ್ಮೂರಿಗಾ! ಅಲ್ಲೇನಿದೆ ಅಂತ ಬರ್ತೀಯ?.. ಹಳ್ಳಿಗಾಡು ಅದು. ನಿಮ್ಮಂಥ ಹುಡುಗೀರ್ಗೆ ಈ ಊರೇ ಸರಿ. ಬೇಸರ ಯಾಕೆ? ಕೆಲಸ ಇದೆ.. ಯಾರನ್ನಾದ್ರೂ, ನಿನಗೆ ಸರಿಯಾದವನನ್ನು ಮದುವೆಯಾಗು. ಹಾಯಾಗಿರು.." ಸುಲಭ ಎಂಬಂತೆ ಹೇಳಿದಳು.

"ನಾನು ಈಗಾಗ್ಲೇ ಒಬ್ಬರನ್ನು ಇಷ್ಟ ಪಟ್ಟಿದೀನಿ. ಅವರನ್ನೇ ಮದುವೆಯಾಗ್ಬೇಕು ಅಂತ ತೀರ್ಮಾನ ಮಾಡ್ಕೊಂಡಿದೀನಿ. ಅದಕ್ಕೆ ನಿಮ್ಮ ಒಪ್ಪಿಗೆ ಬೇಕು."

"ನನ್ನ ಒಪ್ಪಿಗೇನಾ?.. ಶರತ್ ಅಲ್ವಾ ಈ ಮನೆಗೆ ಯಜಮಾನ. ಅವನೇನಂತಾನೆ?"

"ಅವನಿಗೆ ಏನೂ ಗೊತ್ತಿಲ್ಲ.. ಹಾಗಾದ್ರೆ ಆನಂದ್ ನಿಮ್ಹತ್ರ ಏನನ್ನು ಹೇಳ್ಲಿಲ್ವಾ?"

"ಆನಂದನಾ? ಯಾವ ವಿಷಯ?"

"ನಮ್ಮಿಬ್ಬರ ಮದುವೆ ವಿಷಯ. ನಾನು ಆನಂದನ್ನ ಮದುವೆಯಾಗ್ಬೇಕು ಅಂತ ಅಂದುಕೊಂಡಿದೀನಿ. ನನಗೆ ನಿಮ್ಮ ಆಶೀರ್ವಾದ ಬೇಕು." ಮನದಾಸೆಯನ್ನು ತಿಳಿಸಿದಳು. ಮಂದಾಕಿನಿ ಮೌನವಾದಳು. ಚೈತ್ರಾ ಕಳವಳಗೊಂಡಳು. "ಯಾಕೆ ಆಂಟಿ, ಏನನ್ನೂ ಹೇಳ್ತಿಲ್ಲ. ನಾನು ನಿಮ್ಮ ಸೊಸೆಯಾಗಿ ಬರೋದು ನಿಮಗೆ ಇಷ್ಟವಿಲ್ವಾ?"

"ಈ ಮದುವೆ ನೆರವೇರಲು ಸಾಧ್ಯವಿಲ್ಲ ಚೈತ್ರಾ..." ಮಂದಾಕಿನಿ ಗಂಭೀರಳಾಗಿ ನುಡಿದಾಗ, ಚೈತ್ರಾ ಹಿಮ್ಮೆಟ್ಟಿದಳು.

"ಯಾಕೆ ಸಾಧ್ಯವಿಲ್ಲ! ನಾನು ನಿಮಗೆ ಇಷ್ಟವಾಗಲಿಲ್ವಾ!.. ಆನಂದನೂ ನನ್ನನ್ನು ಪ್ರೀತಿಸ್ತಾರೆ. ಬೇಕಾದ್ರೆ ಅವರನ್ನೇ ಕೇಳಿ...."

"ಇಲ್ಲಮ್ಮ, ಅವನು ನಿನಗೆ ತಕ್ಕವನಲ್ಲ. ನಿನ್ನನ್ನು ಸಾಕುವ ಯೋಗ್ಯತೆ ಕೂಡಾ ಅವನಿಗಿಲ್ಲ. ನಿನಗೆ ತಕ್ಕವನಾದವನನ್ನು ನೋಡಿ ಮದುವೆಯಾಗು. ಇವನ ಆಸೆಯನ್ನು ಬಿಟ್ಬಿಡು... ಅವನು ಎಂದಾದ್ರೂ ನಿನ್ನನ್ನ ಪ್ರೀತಿಸ್ತೀನಿ ಅಂತ ಹೇಳಿದಾನಾ?...ಇಲ್ಲ ತಾನೇ?"

"ನಿಮಗೆ ಹೇಗೆ ಗೊತ್ತು?...

"ಅವನು ಬೇರೆ ಯಾರನ್ನೂ ಪ್ರೀತಿಸಲು ಸಾಧ್ಯವಿಲ್ಲಮ್ಮ.. ಅವನಿಗೆ ಈಗಾಗ್ಲೇ ಮದುವೆಯಾಗಿದೆ. ಅವನ ಹೆಂಡತಿ ತವರಿನಲ್ಲಿದಾಳೆ...

"ಸುಳ್ಳು! ನೀವು ಸುಳ್ಳು ಹೇಳ್ತಿದೀರಿ." ಚೈತ್ರ ಕಿರುಚಿದಳು.

"ಇಲ್ಲ ಚೈತ್ರಾ... ಇದು ನಿಜ...ನಾನ್ಯಾಕೆ ಸುಳ್ಳು ಹೇಳ್ಲಿ?"

"ನಿಮಗೆ ನನ್ನನ್ನು ಕಂಡರೆ ಇಷ್ಟವಿಲ್ಲ.. ಅದಕ್ಕೆ ಸುಳ್ಳು ಹೇಳ್ತಿದೀರಿ..."

"ಈಗ ಅವನು ಬರ್ತಾನಲ್ಲ. ಅವನನ್ನು ನೇರವಾಗಿ ಕೇಳು. ನಿಜವೋ ಸುಳ್ಳೋ ಅಂತ ನಿಂಗೇ ಗೊತ್ತಾಗುತ್ತೆ.."

"ನೀವೆಲ್ಲಾ ಮೋಸಗಾರರು!. ಅವರ್ಯಾಕೆ ಈ ವಿಷಯವನ್ನು ನಂಗೆ ಹೇಳಲಿಲ್ಲ!.."

"ಹೆಂಡತಿ ಗಂಡನ್ನ ಬಿಟ್ಟು ತವರಿನಲ್ಲಿ ಇರುವ ವಿಷಯವನ್ನು ಅವನಾಗಿಯೇ ಹೇಳಿಕೊಳ್ಳಲು ಹೀನಾಯವಾಗುಲ್ವಾ?.. ಅವನೂ ನೊಂದಿದಾನೆ.. ಕೆಲಸವಿರ್ಲಿಲ್ಲ, ಸಂಪಾದನೆ ಇರ್ಲಿಲ್ಲ. ಬಿಟ್ಟು ಹೋದ್ಲು. ಇವನು ಇಲ್ಲಿಗೆ ಬಂದು ಸೇರ್ಕೊಂಡ. ಇಲ್ಲಿ ಹಾಯಾಗಿದಾನೆ. ಅವನಿಗೆ ಹೆಂಗಸರು ಅಂದ್ರೇ ಭಯ.."

"ಇಲ್ಲ, ನಾನು ನಿಮ್ಮ ಮಾತನ್ನು ನಂಬುಲ್ಲ, ಅವರೆಂದೂ ನನ್ನೊಡನೆ ಭಯದಿಂದ ವರ್ತಿಸಿಲ್ಲ. ಸ್ನೇಹದಿಂದ ಮಾತಾಡ್ತಾರೆ.."

"ಹಾಗೆ ಮಾಡದಿದ್ರೆ ಕೆಲಸ ಕಳ್ಕೋತೀನಿ ಅನ್ನೋ ಭಯ ಅವನಿಗೆ. ನಿಷ್ಠೂರವಾಗಿ ನಡೆದುಕೊಳ್ಳಲು ಹೆದರಿದಾನೆ. ಇನ್ನು ಅವನು ಇಲ್ಲಿ ಇರುವುದು ಸರಿ ಇಲ್ಲ. ನಿಮ್ಮ ತಂದೆಯ ಕೆಲಸಕ್ಕೆ ಬೇರೆ ಯಾರನ್ನಾದ್ರೂ ಗೊತ್ತು ಮಾಡ್ಕೊಳ್ಳಿ.. ನಾನು ಅವನನ್ನು ಕರೆದುಕೊಂಡು ಹೊರಟು ಹೋಗ್ತೀನಿ." ಚೈತ್ರಾ ಪೆಚ್ಚಾದಳು. ಅವಳಿಗೆ, ದುಃಖ, ಅವಮಾನ, ಕೋಪ ಎಲ್ಲವೂ ಒಟ್ಟಿಗೇ ಮುತ್ತಿಗೆ ಹಾಕಿದಂತಾಗಿತ್ತು...ಮಂಚದ ಮೇಲೆ ಕುಳಿತು, ಕೈಗಳಿಂದ ಮುಖವನ್ನು ಮುಚ್ಚಿಕೊಂಡಳು.

"ಅಳ್ಬೇಡಮ್ಮ ಚೈತ್ರಾ.. ನಾನೂ ನಿನಗೆ ತಾಯಿಯಿದ್ದ ಹಾಗೆ..."

"ಸಾಕು ಸುಮ್ಮನಿರಿ...ತಾಯಿಯಲ್ಲವಲ್ಲ. ಆದ್ದರಿಂದಲೇ, ನಿಮ್ಮ ಮಾತಿನಿಂದ ನನಗೆ ನೋವನ್ನುಂಟು ಮಾಡ್ತಿದೀರಿ. ನಿಮಗಿಂತ ಆನಂದ್ ವಾಸಿ....ನನಗೆ ನೋವಾಗುವಂತೆ ಎಂದೂ ಮಾತನ್ನಾಡಿಲ್ಲ."

"ಹೌದಮ್ಮ, ಅವನು ಒಳ್ಳೆಯವನು, ಅವನ ಒಳ್ಳೆಯತನದಿಂದ ಕಷ್ಟಗಳಿಗೆ ಸಿಕ್ಕಿ ಹಾಕಿಕೊಳ್ತಾನೆ... ಅವನಿಗೆ ಸುಖವಿಲ್ಲ. ಎಲ್ಲರೂ ಅವನಿಗೆ ಹಿಂಸೆ ಕೊಡುವವರೇ..."

"ನಾನೆಲ್ಲಿ ಸುಖವಾಗಿದೀನಿ! ನನ್ನ ಸುಖವನ್ನು ಎಲ್ಲರೂ ಕಿತ್ತು ಕೊಳ್ತಿದೀರಿ....ಶರತ್ ಅಣ್ಣನಾಗಿ, ಆನಂದ್ ಸ್ನೇಹಿತನಾಗಿ, ನನಗೆ ಮಾಡಿದ್ದಾದರೂ ಏನು? ಎಲ್ಲರೂ ಸ್ವಾರ್ಥಿಗಳು."

"ಒಬ್ಬೊಬ್ಬರ ಸ್ವಾರ್ಥಕ್ಕೆ ಒಂದೊಂದು ಕಾರಣವಿರುತ್ತೆ, ಆನಂದ ನಿನ್ನ ಸ್ನೇಹಿತ ಅಂತ ಒಪ್ಕೊಂಡಿದೀಯ ಅಲ್ವಾ!.. ಅವನು ಸ್ನೇಹಿತನಾಗಿಯೇ ಇರ್ತಾನೆ. ನಿನಗೆ ಸಹಾಯ ಮಾಡ್ತಾನೆ...."

"ನನಗೆ ಯಾರ ಸಹಾಯವೂ ಬೇಡ. ಎಲ್ಲರೂ ನನ್ನ ಕಣ್ಣೆದುರಿನಿಂದ ಹೊರಟ್ಹೋಗಿ", ಅವಳು ಕೈ ಒದರಿ ನುಡಿದಾಗ, ಮಂದಾಕಿನಿಗೆ ಅವಮಾನವಾದಂತಾಗಿತ್ತು. ಆದರೆ ಸಹಿಸಿಕೊಂಡಳು. ಚೈತ್ರಳಿಗೆ ಬೇಸರವಾಗಿದೆಯೆಂದು ಗೊತ್ತಿತ್ತು. ಅವಳು ಸುಮ್ಮನೇ ನಿಂತಳು. ಮಂಚದಿಂದ ಇಳಿದ ಚೈತ್ರಾ ದುಡು ದುಡು ಕೆಳಗಿಳಿದು ಹೋದಳು. ಅಡಿಗೆ ಮನೆಯ ಬಾಗಿಲಲ್ಲಿ ನಿಂತಳು. "ಆಂಟಿ, ನಾನು ಶ್ವೇತಾಳ ಮನೆಗೆ ಹೋಗ್ತೀನಿ...ಇವರು ಊರಿಗೆ ಹೋದ್ಮೇಲೆ ನಂಗೆ ಫೋನು ಮಾಡಿ. ನಾನು ವಾಪಸ್ಸು ಬರ್ತೀನಿ. ಅಲ್ಲಿಯವರೆಗೂ ನಾನು ಅವಳ ಮನೇಲಿರ್ತೀನಿ" ಎಂದು ಹೇಳಿ.

ಒಂದೆರಡು ಬಟ್ಟೆಗಳನ್ನು ಒಂದು ಕಿಟ್ ಬ್ಯಾಗ್‌ಗೆ ತುರುಕಿಕೊಂಡು, ಚಪ್ಪಲಿ ಮೆಟ್ಟಿ ಹೊರಗೆ ಅಡಿ ಇಟ್ಟಳು.

* * *

ಧುಮುಗುಟ್ಟುತ್ತಿದ್ದವಳ ಮುಖವನ್ನು ಕಂಡು ಶ್ವೇತಾ ಬೆದರಿದಳು. ಏನಾಯ್ತೇ ಚೈತ್ರಾ ಯಾಕೇ ಹೀಗಿದೀಯ! ನಿಂಗೂ ಶರತ್‌ಗೂ ಮತ್ತೆ ಜಗಳ ಆಯ್ತಾ?'' ಕೇಳಿದಳು.

''ಎಲ್ಲಾದಕ್ಕೂ ಅವನೇ ಕಾರಣ. ನಾನು ಅವನನ್ನು ಕ್ಷಮಿಸುಲ್ಲ.''

''ಇಷ್ಟಕ್ಕೆಲ್ಲಾ ಅವನೊಬ್ಬನೇ ಕಾರಣ ಅಲ್ಲ. ರಾಜೀವ ಅವನಿಗೆ ಮೋಸ ಮಾಡಿರುವುದು ನಿಜ ತಾನೇ..? ನಿನ್ನ ಅದೃಷ್ಟ ಚೆನ್ನಾಗಿಲ್ಲ. ನಿನ್ನ ತಂದೆಗೆ ಖಾಯಿಲೆ ಬರಬಾರ್ದಾಗಿತ್ತು. ನಿನ್ನ ತಾಯಿ, ನಿನ್ನನ್ನು ಬಿಟ್ಟು ಸಾಯಬಾರ್ದಾಗಿತ್ತು.''

''ಷಟಪ್! ನೀನೂ ನನ್ನ ಹೊಟ್ಟೆ ಉರಿಸ್ಬೇಡ.. ಮನೇಲಿ ನೆಮ್ಮದಿ ಇಲ್ಲ ಅಂತ ಇಲ್ಲಿಗೆ ಬಂದ್ರೆ, ನನ್ನ ತಲೇನ ಮತ್ತೂ ಕೆಡಿಸ್ತಾ ಇದೀಯ ನೀನು.''

''ಸಾರಿ....ತಿನ್ನುಕ್ಕೆ ಕುಡಿಯೋಕೆ ಏನಾದ್ರೂ ಕೊಡ್ಲಾ?''

''ಒಂದಿಷ್ಟು ವಿಷ ಕೊಡು....ಹಾಯಾಗಿ ಬಿದ್ಕೋತೀನಿ...ಆಮೇಲೆ ನಮ್ಮ ಮನೆಯವರಿಗೆ ಸುದ್ಧಿ ತಿಳಿಸು....''

''ನಾನು ಜೈಲಿಗೆ ಹೋಗ್ತೀನಿ....ಅದು ನಂಗೆ ಬೇಕಿಲ್ಲ. ಸುಮ್ಮನೇ ಕುಡಿ'' ಎಂದು ಹೇಳುತ್ತಾ ಫ್ರಿಜ್‌ನಿಂದ ಜ್ಯೂಸ್ ಶೀಷೆಯನ್ನು ಹೊರಕ್ಕೆ ತೆಗೆದಳು. ''ತಣ್ಣನೆಯ ಜ್ಯೂಸ್ ತಲೇನ, ದೇಹಾನ ಕೂಲ್ ಮಾಡುತ್ತೆ.. ನಿಧಾನವಾಗಿ ಕೂತು ಯೋಚಿಸು.. ಒಂದು ಮಾರ್ಗ ಸಿಗುತ್ತೆ'' ಎಂದು ಹೇಳಿ, ಆರೇಂಜ್ ಜ್ಯೂಸನ್ನು ಲೋಟಕ್ಕೆ ಬಗ್ಗಿಸಿದಳು.

ಎರಡು ಲೋಟದಷ್ಟು ಜ್ಯೂಸನ್ನು ಕುಡಿದು, ಬ್ರೆಡ್‌ಗೆ ಜ್ಯಾಮ್‌ನ್ನು ಹಾಕಿಕೊಂಡು ತಿಂದು, ಸೋಫಾದ ಮೇಲೆ ಮಲಗಿದಳು. ನಿದ್ದೆ ಹತ್ತಿದಂತಾಗಿತ್ತು. ಯಾರೋ ಮಾತನಾಡುವ ಧ್ವನಿ ಕೇಳಿ ಎಚ್ಚರಗೊಂಡಳು. ಚಿದಾನಂದನ ಧ್ವನಿ? ಅವನೇಕೆ ಇಲ್ಲಿಗೆ ಬಂದಿದಾನೋ ಎಂದುಕೊಂಡು ಏಳಲೂ ಬೇಸರವೆನಿಸಿ, ಹಾಗೇ ಮಾತುಗಳನ್ನು ಆಲಿಸುತ್ತಾ ಒರಗಿದಳು.

''ಅವಳ ಮನಸ್ಸಿಗೆ ತುಂಬಾ ಬೇಸರವಾಗಿದೆ. ಒಂದೆರಡು ದಿನಗಳು ಇಲ್ಲಿರಲಿ''.. ಶ್ವೇತಾ ಹೇಳಿದ್ದಳು.

''ಅವರಿಗೆ ಇಲ್ಲಿ ಹಾಯಾಗಿದೆ ಅಂತ ಅನ್ನಿಸಿದರೆ ಇಲ್ಲಿರಲಿ.. ಆದರೆ ಕೋಪ ಮಾಡ್ಕೊಂಡು ಹೀಗೆ ಬರಬಾರದಾಗಿತ್ತು. ಅಮ್ಮನಿಗೆ ತುಂಬಾ ಬೇಸರವಾಗಿದೆ. ಶರತ್‌ಗೆ ತಿಳಿದರೆ ನಮ್ಮ ಬಗ್ಗೆ ಏನಂದುಕೊಂಡಾರು!.. ನಾನು ನನ್ನ ಅಮ್ಮನೊಂದಿಗೆ ಇವತ್ತು ರಾತ್ರಿಯೇ ಊರಿಗೆ ವಾಪಸ್ಸು ಹೊರಟು ಹೋಗ್ತೀನಿ. ಮತ್ತೆಂದೂ ಇತ್ತ ಕಡೆ ಸುಳಿಯುವುದಿಲ್ಲ. ಹೋಗುವ ಮೊದಲು ಚೈತ್ರಾಳ ಹತ್ತಿರ ಕ್ಷಮೆ ಕೇಳ್ಬೇಕು. ಅದಕ್ಕೇ ಬಂದೆ..''

"ನೀವ್ಯಾಕ್ರೀ ಕ್ಷಮೆ ಕೇಳ್ಬೇಕು! ನಿಮ್ಮ ತಪ್ಪೇನು?"

"ನಾನು ಅವರಿಂದ ಒಂದು ಮುಖ್ಯವಾದ ವಿಷಯವನ್ನು ಮುಚ್ಚಿಟ್ಟು ಬಿಟ್ಟೆ. ನನ್ನ ವರ್ತನೆಯಿಂದ ಅವರಿಗೆ ನೋವಾಗಿದೆ."

"ಯಾಕೆ ಹಾಗೆ ಮಾಡಿದ್ರಿ ಚಿದಾನಂದ್?... ನೀವು ಮೊದಲೇ ಹೇಳಿಬಿಟ್ಟಿದ್ರೆ, ಇಷ್ಟು ರಂಪವಾಗ್ತಿರಲಿಲ್ಲ ಅಲ್ವಾ!.."

"ಹೌದು, ಹೇಳಲಿಲ್ಲ.. ಯಾವ ಸಂತಸದ ವಿಷಯ ಅಂತ ಹೇಳ್ಬೇಕಾಗಿತ್ತು!... ನನಗೆ ನಾನು ಅವಮಾನವನ್ನು ಮಾಡಿಕೊಳ್ಳಲು ಇಷ್ಟವಿರಲಿಲ್ಲ.... ರಾಜೀವನನ್ನು ಚೈತ್ರಾ ಮದುವೆಯಾಗುವ ಪ್ರಸ್ತಾಪ ಬಂತಲ್ಲ...ಎಲ್ಲಾ ಸರಿಹೋಗುತ್ತದೆ ಎಂದುಕೊಂಡು ಸುಮ್ಮನಾಗ್ಬಿಟ್ಟೆ...ಅವರು ಎದ್ದಿದ್ರೆ ಕರೀರಿ. ಕ್ಷಮೆ ಕೇಳ್ಬಿಟ್ಟು ನಾನು ಹೊರಟು ಹೋಗ್ತೀನಿ.

"ನೀವು ಹೊರಟು ಹೋದರೆ, ಅವಳ ತಂದೆಯ ಗತಿ ಏನು?.. ಅವರಿಗೆ ನಿಮ್ಮ ಅಭ್ಯಾಸವಾಗಿದೆ.. ಚೈತ್ರಾಳ ಗಂಡನ ಮನೆಗೆ ಹೊರಟು ಹೋದ್ರೆ, ಅವರು ಒಂಟಿಯಾಗಿಬಿಡ್ತಾರೆ..."

"ಹಾಗಾದ್ರೆ...ಚೈತ್ರಾ, ರಾಜೀವನ್ನ ಮದುವೆಯಾಗಲು ಒಪ್ಪಿಕೊಂಡ್ರಾ!"

"ಮತ್ತೇನ್ಮಾಡ್ತಾಳೆ?... ಹಣಕ್ಕಾಗಿ ಏನೆಲ್ಲಾ ಮಾಡಬೇಕಾಗುತ್ತೆ...ಹಣವಿದ್ದರೆ ಅವಳ ಮನೆ, ಅವರ ಸಂಸಾರ ಉಳಿಯುತ್ತೆ, ಇಲ್ಲದಿದ್ರೆ ಇಲ್ಲ...ಬೇರೆ ದಾರಿ ಏನಿದೆ?"

"ಥ್ಯಾಂಕ್ಸ್ ಶ್ವೇತಾ... ನೀವು ಒಳ್ಳೆಯ ಕೆಲಸವನ್ನೇ ಮಾಡಿದ್ರಿ...ಅವರ ದಾಂಪತ್ಯ ಜೀವನ ಚೆನ್ನಾಗಿರಲಿ. ರಾಜೀವನೊಂದಿಗೆ ಸುಖವಾಗಿರಲಿ...."

ಚೈತ್ರಾ ಎದ್ದು ವೆರಾಂಡದ ಬಾಗಿಲಿಗೆ ಬಂದು ನಿಂತಳು. ಚಿದಾನಂದ ಅವಳನ್ನು ಕಂಡು ಎದ್ದು ನಿಂತ. ತಪ್ಪು ಮಾಡಿದವನಂತೆ ಮುಖ ಮಾಡಿದ. ಅವಳು ಅವನನ್ನೇ ದುರುದುರು ನೋಡಿದಳು" ಯಾರಿಗೆ ಬೇಕಾಗಿದೆ ನಿಮ್ಮ ಹಾರೈಕೆ?...ಅದನ್ನು ನಿಮಗೇ ಇಟ್ಟುಕೊಳ್ಳಿ. ನನ್ನ ವಿಷಯ ನನಗಿರಲಿ. ಯಾರೂ ಬಾಯಿ ಹಾಕ್ಬೇಡಿ..." ಅವಳು ಒರಟಾಗಿ ನುಡಿದಾಗ, ಶ್ವೇತಾ ಅವಳನ್ನು ತಡೆದಳು.

"ಚೈತ್ರಾ, ಹೀಗ್ಯಾಕೆ ಮಾತಾಡ್ತೀಯ?... ನಿನಗೆ ಇಷ್ಟವಿಲ್ಲದಿದ್ರೆ ಬೇಡ...ನಿನ್ನ ಪರವಾಗಿ ನಾನು ಶರತ್ ಹತ್ರ ಮಾತಾಡ್ತೀನಿ."

"ಏನೂ ಬೇಡ, ಹಣಕ್ಕಾಗಿ ಏನೆಲ್ಲವನ್ನು ಮಾಡಬೇಕಾದ ಪರಿಸ್ಥಿತಿ ನನ್ನ ಪಾಲಿಗೆ ಬಂದಿದೆ. ನಾನು ಅದನ್ನು ಎದುರಿಸ್ತೀನಿ. ಡ್ಯಾಡಿಯ ಅಸಹಾಯಕ ಸ್ಥಿತಿ ನನ್ನ ಹೊಟ್ಟೆಯನ್ನು ಕಲಕುತ್ತೆ. ಅವರನ್ನು ನಾನು ನೋಡಿಕೊಳ್ತೀನಿ...ಶರತ್ ಸಾಲಗಾರನಾಗಿದಾನೆ...ಮನೆಯನ್ನು ಅಡವಿಟ್ಟಿದಾನೆ. ಮನೆಯನ್ನು ನಾನು ಬಿಡಿಸಿಕೊಳ್ತೀನಿ..."

"ನಿನ್ನ ಮೂಡ್ ಸರಿಯಾಗಿಲ್ಲ. ಏನೇನೋ ಮಾತಾಡ್ಬೇಡ...ರೆಸ್ಟ್ ತಗೋ..."

"ನೀನು ಸುಮ್ಮನಿರು ಶ್ವೇತಾ, ನನ್ನ ಪಾಡಿಗೆ ನನ್ನನ್ನು ಬಿಡು... ಇವರಿಗೆ ಹೋಗು ಅಂತ ಹೇಳಿ ಬಿಡು."

"ಚೈತ್ರಾ, ನೀವು ನನ್ನನ್ನು ಕ್ಷಮಿಸಿದೀನಿ ಅಂತ ಹೇಳ್ಬಿಡಿ. ನಾನು ಹೊರಟು ಹೋಗ್ತೀನಿ."

"ನೀವು ಯಾವ ತಪ್ಪನ್ನು ಮಾಡಿಲ್ಲದೇ ಇದ್ಮೇಲೆ ನೀವ್ಯಾಕೆ ಹೋಗ್ಬೇಕು!.. ನನ್ನಿಂದ ಕ್ಷಮೆ ಯಾಕೆ ಬೇಕು?... ಈಗ ನೀವು ಮನೆಗೆ ಹೋಗಿ. ಡ್ಯಾಡಿಗೆ ನಿಮ್ಮ ಅವಶ್ಯಕತೆ ಇದೆ. ನಿಮ್ಮ ಹಾಗೆ ಶರತ್ ಆಗಲಿ, ನಾನಾಗಲೀ ನೋಡಿಕೊಳ್ಳಲು ಸಾಧ್ಯವಿಲ್ಲ. ಆದರೆ, ನಿಮ್ಮಿಂದ ನಾನು ಒಂದು ಪಾಠವನ್ನು ಕಲಿತಂತಾಯಿತು.." ಏನದು ಎಂದು ಅವನೂ ಕೇಳಲಿಲ್ಲ, ಅವಳೂ ಹೇಳಲಿಲ್ಲ." ಅವನನ್ನೇ ಒಂದು ಗಳಿಗೆ ದಿಟ್ಟಿಸಿ ನೋಡಿ ಮತ್ತೆ ಒಳಕ್ಕೆ ಹೋಗಿ ಬಿಟ್ಟಳು.

ಚಿದಾನಂದನ ಚಿತ್ತ ಕಲಕಿ ಹೋಗಿತ್ತು. ಅವಳ ಮಾತುಗಳಿಂದ ಅವನು ಸಮಾಧಾನಗೊಳ್ಳಲಿಲ್ಲ, ತಾಯಿ ಚೈತ್ರಾಳೊಡನೆ ಹೇಳಿದ್ದು ಸರಿಯಿಲ್ಲ ಎಂದು ಅವನಿಗೆ ತಿಳಿದಿತ್ತು. ಇಷ್ಟೆಲ್ಲಾ ರಂಪವಾದ ಮೇಲೆ, ಚೈತ್ರಾ ತನ್ನೊಡನೆ ಮುಂಚಿನಂತೆ ಸ್ನೇಹದಿಂದ ಇರುವುದು ಸಾಧ್ಯವಿಲ್ಲ. ಮಾತನ್ನಾಡಿಸುತ್ತಾಳೋ ಇಲ್ಲವೋ ಅಂತ ಅಂದುಕೊಂಡ...ಇಲ್ಲಿ ತನ್ನ ತಪ್ಪು ಏನೂ ಇಲ್ಲ, ಅಸಹಾಯಕರಾಗಿ ಮಲಗಿರುವ ಯಶವಂತರಾಯರದೂ ತಪ್ಪಿಲ್ಲ. ಹೀಗಿರುವಾಗ ತಾನು ಏಕಾಏಕಿ ಬಿಟ್ಟು ಹೋದರೆ, ತಾನು ಅಪರಾಧಿಯಾಗುವುದು ಖಂಡಿತಾ... ತಾನೆಷ್ಟೋ ತನ್ನ ಕೆಲಸವೆಷ್ಟೋ ಎಂಬಂತೆ ಇದ್ದು ಬಿಡ್ತೀನಿ ಎಂದುಕೊಂಡು ಶ್ವೇತಾಳಿಗೆ ಹೇಳಿ ಹೊರಟ.

ಶ್ವೇತಾ ಬಾಗಿಲನ್ನು ಭದ್ರ ಪಡಿಸಿ ಒಳಕ್ಕೆ ಬಂದಳು. "ನಿನ್ನ ಮಜ್ನೂ ಹೊರಟು ಹೋದ. ಇನ್ನಾದ್ರೂ ಏಳು ಊಟ ಮಾಡೋಣ" ಎಂದು ಎಬ್ಬಿಸಿದಳು.

"ಅವನೆಂಥಾ ಮಜ್ನೂ! ನಾನು ಫೂಲ್ ಆದೆ ಅಷ್ಟೇ...ನನಗೀಗ ಪಿಕ್ಚರ್ ಎಲ್ಲಾ ಕ್ಲಿಯರ್ ಆಗಿದೆ...ನಾನು ಏನ್ಮಾಡ್ಬೇಕು ಅಂತ ಗೊತ್ತಾಗ್ತಿದೆ."

'ನೋಡಿದ್ಯಾ ನಮ್ಮ ಮನೆಯ ಜ್ಯೂಸ್‌ಗೆ ಎಂಥಾ ಪವರ್ ಇದೆ ಅಂತಾ..."

"ಏನೋ ಇರಲೇ ಬೇಕು. ಇನ್ನೊಂದು ಲೋಟ ಕೊಡು.."

"ಬರೀ ಜ್ಯೂಸ್ ಕುಡಿದರೆ ಹೊಟ್ಟೆ ತುಂಬುಲ್ಲ. ಮೊದಲು ಊಟ, ಊಟ ಮಾಡ್ತಾ ಮಾತನಾಡೋಣ. ವಿಶ್ವೂ ಬಂದು ಬಿಟ್ರೆ ಆಮೇಲೆ ಮಾತಾಡುಕ್ಕೆ ಆಗುಲ್ಲ."

"ಇಲ್ಲಿ ಈ ರಾತ್ರಿ ನಾನಿದ್ರೆ ಅವನು ಏನೂ ಅನ್ನುಲ್ಲ ತಾನೇ?"

"ಏನನ್ನಾದ್ರೂ ಅನ್ನೋಕೆ ಅವನ್ಯಾರು?... ಬೀದಿ ಬೀದಿ ತಿರುಗಿದರೂ ನಾಲ್ಕು ಕಾಸು ಸಂಪಾದಿಸುವುದಿಲ್ಲ. ಬಂದೂ ಬಂದೂ ಅಮ್ಮನ್ನ ಪೀಡಿಸ್ತಾನೆ... ಅವಳು ಅಲ್ಲಿ ಇಲ್ಲಿ ಸಾಲ ಮಾಡ್ತಾಳೆ. ನಂಗೊಂದು ಕೆಲಸ ಸಿಕ್ಕಿ ಬಿಟ್ಟರೆ.. ಆಮೇಲೆ ಪರವಾಗಿಲ್ಲ."

"ಹಾಗಾದ್ರೆ ನಂಗೆ ಊಟ ಬೇಡ, ನಾನು ಮನೆಗೆ ಹೋಗ್ತೀನಿ."

"ಊಟ ಹಾಕದಷ್ಟು ಬಡತನವಿಲ್ಲ.. ಅವನು ಏನೂ ಅನ್ನುಲ್ಲ. ಅವನಿಗೂ ನಿನ್ನಂಥ ಸುಂದರ ಹುಡುಗಿಯರನ್ನು ಕಂಡರೆ ಗೌರವ...ನಿನ್ನ ಆಫೀಸ್ನಲ್ಲಿ ನನಗೆ ಒಂದು ಕೆಲಸ ಕೊಡಿಸ್ತೀಯಾ?..." ಮಾತಿನ ಧಾಟಿಯನ್ನು ಬದಲಾಯಿಸಿದಳು.

"ಹೂಂ, ನೋಡೋಣ...ನೀನು ಶರತ್‌ನ ಕೇಳು..."

"ಅವನೇ ಕಷ್ಟದಲ್ಲಿದಾನೆ ಅಂತ ಅಂತೀಯ...ರಾಜೀವನ್ನ ನೀನು ಕೇಳು.."

"ಹೂಂ, ನೋಡೋಣ..." ಎನ್ನುತ್ತಾ ತಟ್ಟೆಗೆ ಕೈ ಹಾಕಿದಳು.

* * *

ಆ ರಾತ್ರಿ ಚೈತ್ರಾ ಮನೆಗೆ ಬಾರದಿದ್ದಾಗ, ಶರತ್‌ಗೆ ಆತಂಕವಾಗಿತ್ತು. ಎಷ್ಟೋ ಹೊತ್ತಿನ ನಂತರ ಅನ್ನಪೂರ್ಣಮ್ಮ, ಅವಳು ಶ್ವೇತಾಳ ಮನೆಗೆ ಹೋಗಿರುವ ವಿಷಯವನ್ನು ತಿಳಿಸಿದಳು.

"ಈಗ ಹೇಳ್ತಿದೀರಲ್ಲ.. ಏನಾಯ್ತು ಅವಳಿಗೆ? ಅದ್ಯಾಕೆ ಹೋದಳು?"

"ಏನೋ ನಂಗೊತ್ತಿಲ್ಲ, ಸಿಟ್ಟು ಮಾಡಿಕೊಂಡ ಹಾಗಿತ್ತು"

"ಇವಳದ್ದು ಇದ್ದದ್ದೇ ಗೋಳು. ಚಿದಾನಂದ ಎಲ್ಲಿ? ಅವನೂ ಕಾಣ್ತಿಲ್ಲ."

"ಅವರು ಅವರ ತಾಯಿಯನ್ನು ಬಸ್ಸಿಗೆ ಹತ್ತಿಸಲು ಹೋಗಿದಾರೆ..."

"ಎಲ್ರಿಗೂ ಅವರವರದ್ದೇ ಅವರವರಿಗೆ, ಆಕೆ ಈಗ ಯಾಕೆ ಬಂದಿದ್ರು?...

"ಏನೋ ನಂಗೊತ್ತಿಲ್ಲ, ನಾನು ಕೇಳ್ಲಿಲ್ಲ.."

"ಎರಡು ಮೂರು ವರ್ಷಗಳಿಂದ ನಮ್ಮ ಮನೇಲಿದೀರಿ.. ನಮ್ಮ ಮನೆಗೆ ಯಾರು ಬರ್ತಾರೆ, ಯಾರು ಹೋಗ್ತಾರೆ? ಯಾಕೆ ಬರ್ತಾರೆ ಅಂತ ತಿಳ್ಕೋಬೇಡ್ವಾ!.. ಇಪ್ಪತ್ನಾಲ್ಕು ಗಂಟೆಯೂ ಮನೇಲಿರೋರು ನೀವೇ ಅಲ್ವಾ?" ಅವನು ಮುಖಕ್ಕೆ ಹೊಡೆದಂತೆ ಹೇಳಿದಾಗ ಆಕೆ ಪೆಚ್ಚಾದಳು, "ಅವಳಿಗೆ ಮೊದಲು ಫೋನು ಮಾಡಿ... ಈಗ್ಲೇ ಮನೆಗೆ ಬರ್ಬೇಕಂತೆ ಅಂತ ಹೇಳಿ."

'ಹೂಂ' ಎನ್ನುತ್ತಾ ಆಕೆ, ಶ್ವೇತಾಳ ಮನೆಯ ಫೋನಿಗೆ ಡಯಲ್ ಮಾಡಿದಳು. ಸ್ವಲ್ಪ ಹೊತ್ತಿನಲ್ಲೇ ಶ್ವೇತಾ, ಚೈತ್ರಾ ಇಬ್ಬರೂ ಆಟೋದಲ್ಲಿ ಬಂದಿಳಿದರು.

"ಏನೇ ನೀನು? ಹೇಳೋರು ಕೇಳೋರು ಯಾರೂ ಇಲ್ವಾ?... ಅಲ್ಲಿಗ್ಯಾಕೆ ಹೋಗಿದ್ದೆ?" ಶ್ವೇತಾ ಇದ್ದುದನ್ನು ಗಮನಿಸಿಯೂ ಕೇಳಿದ್ದ.

"ನೀನೊಬ್ಬ ಸೆಮಿ ಕಣೋ... ನಿನ್ನನ್ನ ಹೇಳಿ, ಕೇಳಿ ಹೋಗೋಕೆ ನಾನು ಚಿಕ್ಕೋಳಲ್ಲ, ನನ್ನಿಷ್ಟ..."

"ಏನು ನಿನ್ನ ಇಷ್ಟ?... ಇವತ್ತು ಆಫೀಸಿಗೆ ಬರ್ಲಿಲ್ಲವಂತೆ?... ರಾಜೀವ ಕೇಳ್ದ.." ಚೈತ್ರಾ ಶ್ವೇತಾಳ ಕಡೆ ನೋಡಿದಳು. ಶ್ವೇತಾ ಕಿರುನಗೆಯನ್ನು ನಕ್ಕಳು.

"ಓ..ಈಗ ನಾನು ಏನೇ ಮಾಡಿದ್ರೂ...ನಿನ್ನನ್ನ, ರಾಜೀವನ್ನ ಕೇಳಿ ಮಾಡ್ಬೇಕು..ಅನ್ನು."

"ಹೋಗ್ಲೀ ಬಿಡೇ, ಮಾತಿಗೆ ಮಾತು ಬೆಳೆಸ್ಬೇಡ, ನಾನು ಹೋಗ್ತೀನಿ..." ಹೊರಟವಳನ್ನು ಚೈತ್ರಾ ತಡೆದಳು.

"ಇಷ್ಟು ಹೊತ್ನಲ್ಲಿ ಒಬ್ಬಳೇ ಎಲ್ಲಿಗೆ ಹೋಗ್ತೀಯ?.. ಬೆಳಿಗ್ಗೆ ಹೋಗೂವಂತೆ...ಇಲ್ಲಿ ನಂಗೂ

ಬೋರು. ಕಂಪೆನಿ ಕೊಡು.."

"ಓ.ಕೇ. ಹೇಗೂ, ನನ್ನನ್ನ ಕೇಳೋರು, ಹೇಳೋರು ಯಾರೂ ಇಲ್ಲ." ಅವಳೂ ಕೈ ಮಾಡಿ ನುಡಿದಳು.

"ಬನ್ನಿ, ನಾನು ನಿಮ್ಮನ್ನು ನಿಮ್ಮ ಮನೆಗೆ ಡ್ರಾಪ್ ಮಾಡ್ತೀನಿ..." ಶರತ್ ಎಂದ.

"ಏನೂ ಬೇಡ. ಅವಳು ನನ್ನ ಫ್ರೆಂಡ್, ನಾನು ಹೇಳಿದ ಹಾಗೆ ಕೇಳ್ತಾಳೆ."

"ಸರಿ, ನಿಮ್ಮಿಷ್ಟ." ಅವನು ತನ್ನ ರೂಮಿಗೆ ರೂಮಿಗೆ ಹೊರಟು ಹೋಗಿದ್ದ. ಎಷ್ಟೋ ಹೊತ್ತಿನ ನಂತರ ಚಿದಾನಂದ ಮನೆಗೆ ವಾಪಸ್ಸಾಗಿದ್ದ. ಸೋಫಾದ ಮೇಲೆ ಕುಳಿತು ಮಾತನಾಡುತ್ತಿದ್ದ ಶ್ವೇತಾ ಅವನ ಕಡೆ ನೋಡಿ 'ಹಲೋ' ಎಂದಳು. ಚೈತ್ರಾ ನೋಡಿದರೂ ನೋಡದವಳಂತೆ ಉದಾಸೀನವನ್ನು ನಟಿಸಿದಳು. ಅದು ಅವನನ್ನು ತಟ್ಟಿತು. ಅವನು ಅದನ್ನು ನಿರೀಕ್ಷಿಸಿದ್ದರೂ, ಏನನ್ನೊ ಕಳೆದುಕೊಂಡ ಅನುಭವವಾಗಿತ್ತು...

ಶ್ವೇತಾ, ಚೈತ್ರಾಳ ರೂಮಿನಲ್ಲಿ ಮಲಗುವ ಸಿದ್ಧತೆಯಲ್ಲಿದ್ದಾಗ, ಶರತ್ ರೂಮಿಗೆ ಬಂದ. ತಂಗಿಯನ್ನು ಕರೆದ. "ನಾನು ನಿನ್ನ ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು." ಅಂತ ಕರೆದ.

"ಇಷ್ಟು ಹೊತ್ನಲ್ಲಿ? ನಿದ್ದೆ ಬರ್ತಿದೆ ನಂಗೆ... ಬೆಳಿಗ್ಗೆ ಮಾತನಾಡೋಣ."

"ಹೋಗೇ ಸುಮ್ಮನೇ...ಏನೋ ಮುಖ್ಯವಾದ ವಿಷಯವಿರ್ಬೇಕು." ಶ್ವೇತಾ ನುಡಿದಾಗ ಶರತ್ ಅವಳನ್ನು ಮೆಚ್ಚುಗೆಯಿಂದ ನುಡಿದ.

"ನಿನ್ನ ಸ್ನೇಹಿತೆಯಿಂದ ಕಲಿತ್ಕೋ.. ಕಾಮನ್‌ಸೆನ್ಸ್ ಬೇಕು."

"ಸರಿ, ನೀನೂ ಬಾರೇ..." ಅವಳನ್ನು ಎಳೆದಳು.

"ನಿಮ್ಮಿಬ್ಬರ ಮಧ್ಯೆ ನಾನ್ಯಾಕೆ?...ನಿಮ್ಮ ಸ್ವಂತ ವಿಷಯ..."

"ಸುಮ್ನೇ ಬಾರೇ..." ಅವಳು ಕರೆದಾಗ, ಶರತ್ ಸಮ್ಮತಿಯ ನೋಟವನ್ನು ಬೀರಿದ.

ಎಲ್ಲರೂ ಹಾಲಿನಲ್ಲಿ ಸೋಫಾದ ಮೇಲೆ ಕುಳಿತರು. "ರಾಜೀವ ಇವತ್ತು ನನ್ನ ಹತ್ರ ಮಾತಾಡ್ದ... ನೀನು ಅವನಿಗೆ ಮೆಚ್ಚುಗೆಯಾಗಿದೀಯಂತೆ...ಮದುವೆಯಾಗ್ತಾನಂತೆ.. ನಿನ್ನ ಅಭಿಪ್ರಾಯವೇನು?" ತಂಗಿಯನ್ನು ಪ್ರಶ್ನಿಸುವವನಂತೆ ಕೇಳಿದ. ಆದರೆ, ಒಳಗೊಳಗೇ ಅವನಿಗೆ ಖುಷಿಯಾಗಿದೆ ಎನ್ನುವುದು ಅವನ ಮುಖದಿಂದಲೇ ತಿಳಿಯುತ್ತಿತ್ತು."

"ನಿನಗೂ ಅದೇ ತಾನೇ ಬೇಕಾಗಿದ್ದುದು." ತಿರುಗುಬಾಣದಂತೆ ಉತ್ತರಿಸಿದಳು. ಅವನು ಕಕ್ಕಾಬಿಕ್ಕಿಯಾದ. ಶ್ವೇತಾಳ ಕಡೆ ನೋಡಿದ.

"ಅವಳ ಕಡೆ ಏನು ನೋಡ್ತೀಯ..? ನಾನು ಅವಳ ಹತ್ರ ಎಲ್ಲವನ್ನೂ ಹೇಳಿದೀನಿ."

"ಅಂದ್ರೇ... ನೀನೂ ರಾಜೀವನ್ನ ಪ್ರೀತಿಸ್ತಿದೀಯ ಅಂತನ್ನೂ...ನಿನಗೆ ಒಪ್ಪಿಗೆ ಇದ್ದರೆ ಅವನು ನಿನ್ಹತ್ರ ಮಾತಾಡ್ತಾನಂತೆ."

"ನಾಳೆ ನಾಡಿದ್ದರಲ್ಲಿ ನಾನೇ ಮಾತಾಡ್ತೀನಿ ಅವನ ಹತ್ರ.."

"ಅವನು ಅವಸರದಲ್ಲಿದಾನೆ, ಆದಷ್ಟು ಬೇಗ ಮಾತಾಡು. ನಿಧಾನ ಮಾಡ್ಬೇಡ.."

"ಅಂಥಾ ಅವಾಂತರ ಏನಂತೆ!.. ನಾನೇನು ಓಡಿ ಹೋಗ್ತೀನಾ?"

"ಅವನ ಹತ್ರವೂ ಹೀಗೆ ಎರ್‍ರಾಬಿರ್‍ರಿ ಮಾತಾಡ್ಬೇಡ. ಅವನು ಹೆದರಿ ಓಡಿ ಹೋಗ್ತಾನೆ.." ಶರತ್ ಶ್ವೇತಾಳ ಕಡೆ ನೋಡಿ ನಕ್ಕ.

"ಅದನ್ನೇ ತಾನೇ ನೀನು ಬಯಸೋದು" ಅವಳು ಮತ್ತೆ ನುಡಿದಳು.

"ನೋಡಿ ಶ್ವೇತಾ.. ಇವಳು ಹೇಗೆ ಮಾತಾಡ್ತಾಳೆ.. ನಾನು ಇವಳ ಅಣ್ಣ.. ಇವಳ ಒಳ್ಳೇದನ್ನೇ ಬಯಸ್ತೀನಿ ಅಲ್ವಾ?"

"ಒಳ್ಳೇದು ಯಾವುದು? ಕೆಟ್ಟದ್ದು ಯಾವುದು ಅಂತ ಗೊತ್ತಿಲ್ಲದ ವಯಸ್ಸೇನಲ್ಲ ನನ್ನದು. ಬಾರೇ ಮಾತು ಸಾಕು." ತಾನು ಎದ್ದು ನಿಂತಳು. ಶರತ್ ಹಲ್ಲು ಕಡಿದ. ಇವಳು ಎಷ್ಟಾಗಲೀ ಸ್ನೇಹಿತೆ ಇವಳು ಏನಂದುಕೊಳ್ಳಬಹುದು ಎನ್ನುವ ಆತಂಕ ಅವನ ಮುಖದಲ್ಲಿ ಕಂಡಿತು. ವಾತಾವರಣವನ್ನು ಹಗುರಗೊಳಿಸುವವನಂತೆ ನುಡಿದ.

"ನಿನಗೆ ಇಷ್ಟವಿಲ್ಲದಿದ್ರೆ ಹೇಳಿಬಿಡು. ಬಲವಂತ ಏನಿಲ್ಲ. ಅವನು ಹೇಳಿದ್ದನ್ನ ನಿಂಗೆ ಹೇಳಿದೆ ಅಷ್ಟೇ..."

"ಈಗ ಹೇಳೋದು ಕೇಳೋದು ಏನೂ ಬಾಕಿ ಇಲ್ಲ. ನನಗೂ ಅವನು ಮೆಚ್ಚುಗೆಯಾಗಿದಾನೆ. ಆದರೆ, ಮದುವೆಯಾಗ್ಬೇಕೋ ಬೇಡ್ವೋ ಅಂತ ತೀರ್ಮಾನ ತಗೋಬೇಕಾಗಿರುವವಳು ನಾನು..." ಅವಳು ರೂಮಿನ ಕಡೆಗೆ ಹೊರಟಳು. ಶರತ್ ಶ್ವೇತಾಳ ಕಡೆ ತಿರುಗಿದ.

"ನೀವಾದ್ರೂ ಅವಳಿಗೆ ತಿಳಿವಳಿಕೆ ಹೇಳಿ.. ರಾಜೀವ, ಶ್ರೀಮಂತ, ವಿದ್ಯಾವಂತ, ರೂಪವಂತ ಕೂಡಾ...ಅವನನ್ನು ಒಪ್ಪದೇ ಇರುವುದಕ್ಕೆ ಯಾವ ಕಾರಣವೂ ಇಲ್ಲ ಇವಳಿಗೆ."

"ನಾನು ಮಾತಾಡ್ತೀನಿ ಅವಳ ಹತ್ರ, ಯೂ ಡೋಂಟ್‌ವರಿ."

"ಥ್ಯಾಂಕ್ ಯೂ ಅಂಡ್ ಗುಡ್‌ನೈಟ್" ಎಂದ. ಶ್ವೇತಾ ಚೈತ್ರಾಳ ರೂಮಿಗೆ ಬಂದಳು. ರೂಮಿನ ಬಾಗಿಲನ್ನು ಭದ್ರ ಪಡಿಸಿಕೊಂಡರು.

"ಏನೇ ಅದು? ಶರತ್‌ಗೆ ಲೈನ್ ಹೊಡೀತಿರುವ ಹಾಗಿದೆ ನೀನು" ಸ್ನೇಹಿತೆಯನ್ನು ಚುಡಾಯಿಸಿದಳು.

"ಲೈನೂ ಇಲ್ಲ, ಎಂಥದೂ ಇಲ್ಲ. ಚೈತ್ರಾ ಒಪ್ಪದಿದ್ದರೆ, ನೀವು ಅವನನ್ನು ಮದುವೆಯಾಗ್ತೀರಾ ಅಂತ ಶರತ್ ಕೇಳಿದ್ರು." ಚೈತ್ರಾ ಗೊಳ್ಳನೆ ನಕ್ಕಳು.

"ರಾಜೀವನ್ನ ನೀನು ಮದುವೆಯಾದ್ರೆ ಇವನಿಗೇನು ಸಿಗುತ್ತೆ ಲೊಟ್ಟೆ?.. ಆಮೇಲೆ ಇವನು ತಲೆ ಬೋಳಿಸ್ಕೊಂಡು, ಕಾವಿ ಬಟ್ಟೆ ಉಟ್ಕೊಂಡು "ಹರಿದ್ವಾರಕ್ಕೆ ಹೋಗಬಹುದು."

"ಕಾವಿ ಬಟ್ಟೆ ಶರತ್‌ಗೆ ಒಂದು ಚೂರೂ ಒಪ್ಪುಲ್ಲ. ಯಂಗ್ ಆಗಿದಾನೆ, ಹ್ಯಾಂಡ್ಸಮ್ ಆಗಿದಾನೆ. ನೀನು ಪಾಪಿ ಕಣೇ.. ಅಣ್ಣನ ಬಗ್ಗೆ ನಿನಗೆ ಕರುಣೇನೇ ಇಲ್ಲ."

"ನೀನು ಇದೀಯಲ್ಲ ಕರುಣಾಮಯಿ, ಅವನಿಗೆ ಮಾರ್ಗತೋರು. ಈಗ ಬಿದ್ಕೋ.." ದೀಪವನ್ನು ಆರಿಸಿದಳು. ಶ್ವೇತಾ ಶರತ್ ಬಗ್ಗೆ ಯೋಚಿಸತೊಡಗಿದಳು. ಶ್ವೇತಾಳನ್ನು ಚೈತ್ರಾ ತಿವಿದಳು.

"ಚಿದಾನಂದ ಏನ್ಮಾಡ್ತಿದ್ದಾನೆ ಅಂತ ನೋಡ್ಕೊಂಡು ಬಂದ್ಬಿಡ್ತೀನಿ.." ಎದ್ದವಳನ್ನು ಶ್ವೇತಾ ಎಳೆದಳು.

"ಸುಮ್ನೇ ಬಿದ್ಕೋ.. ಇನ್ನು ಬಿಟ್ಟಿಲ್ವಾ ಅವನ ಮೋಹ?.. ಅವನಿಗೆ ನೀನು ಬೇಕಾಗಿಲ್ಲದ ಮೇಲೆ, ನಿನಗ್ಯಾಕೆ ಕುತೂಹಲ?"

"ಅವನಿಗೆ ನಿದ್ದೆ ಬರ್ತಿದ್ರೆ ನಿಜ ಹೇಳಿದಾನೆ ಅಂತ.. ನಿದ್ದೆ ಬಾರದೇ ಹೊರಳಾಡುತ್ತಿದ್ದರೆ ಸುಳ್ಳು ಹೇಳ್ತಿದಾನೆ ಅಂತ."

"ಸುಳ್ಳೋ ನಿಜವೋ? ಅವನನ್ನು ಬೇಡ್ಕೊಂಡು ಮದುವೆಯಾಗ್ತೀಯಾ ಛೀ..."

"ಇಲ್ಲ, ನಾನು ಅವನನ್ನು ಬೆಗ್ ಮಾಡುಲ್ಲ. ಆದರೆ ಅವನಿಗೆ ಬುದ್ಧಿ ಕಲಿಸದೇ ಬಿಡುಲ್ಲ, ನೋಡ್ತಿರು."

"ಈಗ ಅವನನ್ನು ದ್ವೇಷ ಮಾಡಿ ಏನೇ ಸಾಽಸ್ತೀಯ..? ಈಗ ಅವನ ಅಗತ್ಯ ನಿನಗಿದೆ. ಕೆಲವು ವಿಷಯಗಳಲ್ಲಿ ನಿನಗೆ ಅವನಿಂದ ಸಹಾಯ ಬೇಕಾಗುತ್ತೆ.. ಅಲ್ಲದೇ ಅವನು ನಿನ್ನ ಡ್ಯಾಡಿಯ ಕೇರ್ ಟೇಕರ್...ಅವನನ್ನು ನೀನು ದ್ವೇಷಿಸಬಾರದು.."

"ರೈಟ್.. ನೀನು ಹೇಳೋದೂ ಸರಿ...ಈಗ ನಿನ್ನ ಸಹಾಯದ ಜೊತೆಗೆ ನನಗೆ ಅವನ ಸಹಾಯವೂ ಬೇಕು...ಅವನು ತುಂಬಾ ಪತ್ತೇದಾರಿ ಕಾದಂಬರಿಗಳನ್ನು ಓದ್ತಾನೆ. ಅವನ ಹತ್ರ ಐಡಿಯಾಗಳು ಇರುತ್ವೆ... ನನಗೆ ಉಪಯೋಗವಾಗಬಹುದು.." ಮುಗುಳ್ನಕ್ಕಳು.

"ಇನ್ನು ಮಾತು ಸಾಕು. ಮಲಕ್ಕೋ...ಬೆಳಿಗ್ಗೆ ನಾನು ಬೇಗ ಎದ್ದು ಮನೆಗೆ ಹೋಗ್ಬೇಕು... ಅಣ್ಣ ಬಂದಿರ್ತಾನೋ ಇಲ್ವೋ..."

"ನಿನ್ನ ಅಣ್ಣನ ಕತೆ ಏನೇ?"

"ಅವನ ಕತೆ ಏನೂಂತ ಅವನಿಗೇ ಗೊತ್ತಿಲ್ಲ, ಅವನೊಬ್ಬ ದಂಡ ಪಿಂಡ. ಅಮ್ಮನಂತೂ ಅವನಿಗೆ ತಿಳುವಳಿಕೆ ಹೇಳೀ, ಹೇಳೀ ಸೋತು ಹೋದಳು."

"ನಿನ್ನ ಅಣ್ಣ ಒಂಥರಾ.. ನನ್ನ ಅಣ್ಣ ಒಂಥರಾ... ಹೋಗ್ಲೀ... ನಾನು ನಾಳೆ ರಾಜೀವನ ಹತ್ರ ಏನು ಮಾತಾಡ್ಲೇ?"

"ನನ್ನನ್ನ ಕೇಳಿದ್ರೆ...? ಅವನನ್ನು ಮದುವೆಯಾಗೋಕೆ ಹೊರಟಿರೋಳು ನೀನು..."

"ನಿಜ ಎಲ್ಲಾ ಹೇಳಿ ಬಿಡ್ಲಾ ಅಂತ ಅನ್ನಿಸ್ತಿದೆ ಕಣೇ.."

"ನೀನು ಲೂಸ್ ಕಣೇ.. ನಿನ್ನ ಅಣ್ಣನ್ನ ಪಾಪರ್ ಮಾಡ್ಬೇಕು ಅಂತ ಆಸೆ ಇದ್ರೆ ಹಾಗೇ ಮಾಡು... ಆಮೇಲೆ ನಿನಗೆ ಏನು ಬೆಲೆ ಇರುತ್ತೆ?.."

"ಏನೋ ಗೊತ್ತಿಲ್ಲ. ಸಿಕ್ಕಾಪಟ್ಟೆ ಕನ್‌ಫ್ಯೂಷನ್‌ನಲ್ಲಿದೀನಿ...ಆದಷ್ಟು ಬೇಗ ಈ ನಾಟಕ ಮುಗಿದು ಹೋಗಲಿ ಆಮೇಲೆ ನಾನು ಫ್ರೀ..." ಆಕಳಿಸಿದಳು.

* * *

"ಶ್ವೇತಾ, ಇವತ್ತು ಇಲ್ಲೇ ಇದ್ಬಿಡಿ... ರಾಜೀವಂಗೆ, ಅವರ ತಂದೆ ತಾಯಿಯನ್ನು ಕರ್ಕೊಂಡು ಬರೋಕೆ ಹೇಳ್ತೀನಿ." ಶರತ್ ನುಡಿದಾಗ, ಅವಳು ಚೈತ್ರಾಳ ಕಡೆ ನೋಡಿದಳು.

"ಅವರು ಇವತ್ತೇ ಬರೋದು ಬೇಡ, ನಾನು ಮೊದಲು ಅವನ ಹತ್ರ ಮಾತಾಡ್ಬೇಕು."

"ಇನ್ನೇನು ಉಳಿದಿದೆ? ನೀನು ಇನ್ನು ತೀರ್ಮಾನ ತಗೊಂಡಿಲ್ವಾ!.."

"ತಗೊಂಡಿದೀನಿ, ಆದರೆ ಕೆಲವು ಕಂಡೀಷನ್ಸ್‌ಗಳಿವೆ..."

"ಕಂಡೀಷನ್ಸ್ ಏನು?....ಅದಕ್ಕೇ ಅವನು ಒಪ್ಪದಿದ್ದರೇ?..." ಏನೂಂತ ನಂಗೆ ಹೇಳು."

"ಸರಿ, ನಿಂಗೂ ಹೇಳ್ತೀನಿ, ಬೇಗ ಎಲ್ಲಾ ಮುಗಿದ್ರೆ ಸಾಕಾಗಿದೆ. ಮೊದಲನೆಯದಾಗಿ, ಬೇಗ ಮದುವೆ ದಿನವನ್ನು ಗೊತ್ತು ಮಾಡು."

"ಅರೇ ವ್ಹಾ...ಮದುವೆಗೆ, ನಿಂಗೂ ಅವಸರವೇನೋ...?" ಶ್ವೇತಾ ಗಲ್ಲವನ್ನು ಹಿಂಡಿದಳು.

"ಪ್ಲೀಸ್...ಈ ಮಾತಿಗೆ ನೀನು ಬಾಯಿ ಹಾಕ್ಬೇಡ. ಎರಡನೆಯದು.. ಅದ್ದೂರಿಯಾದ ಮದುವೆ ಬೇಡ. ಸರಳವಾಗಿ ದೇವಸ್ಥಾನದಲ್ಲಿ ಮದುವೆಯಾಗಲಿ.."

"ಹೀಗೆ ಮಾಡಿದರೆ ಅವನಿಗೆ ಅನುಮಾನ ಬರುತ್ತೆ ಕಣೇ..."

"ಅವನು ನನ್ನನ್ನು ನಿಜವಾಗಿಯೂ ಪ್ರೀತಿಸುತ್ತಿರುವುದೇ ಆದ್ರೆ, ಈ ಕಂಡೀಷನ್‌ಗಳಿಗೆ ಅವನು ಒಪ್ಪಲೇ ಬೇಕು."

"ಅವನು ಒಪ್ಪದೇ ಇದ್ದರೇ...?"

"ನನಗೆ ಯಾವ ಲಾಸ್ ಇಲ್ಲ..."

"ನನಗೆ ತೊಂದರೆಯಾಗುತ್ತೆ...ನಮ್ಮ ನೆಂಟರಿಷ್ಟರಿಗೆ ಅನುಮಾನ ಬರುತ್ತೆ. ಖರ್ಚು ಎಷ್ಟಾದರೂ ಆಗಲಿ...ಮತ್ತೆ ಬರುತ್ತೆ..."

"ಮತ್ತೆ ಸಾಲ ಮಾಡ್ತೀಯಾ ಹಾಗಾದ್ರೆ...?

"ಮಾಡಿದ್ರಾಯ್ತು...ಮದುವೆಗೆ ಎಲ್ರೂ ಬರಬೇಕು. ಶರತ್ ತನ್ನ ತಂಗಿಯ ಮದುವೆಯನ್ನು ಅದ್ದೂರಿಯಾಗಿ ಮಾಡಿದ ಅಂತ ಎಲ್ರೂ ಹೊಗಳ್ಬೇಕು..."

"ಸಾಕು, ಸಾಕು.. ಇಲ್ಲಿ ನಿಂತು ಓಡಾಡುಕ್ಕೆ ಯಾರಿದಾರೆ? ನಮ್ಮ ಆಪ್ತರು ಯಾರಿಲ್ಲ."

"ಯಾಕಿಲ್ಲ! ಅನ್ನಪೂರ್ಣಮ್ಮ, ಚಿದಾನಂದ, ಅವನ ತಾಯಿ...ಈ ಶ್ವೇತಾ...ಎಲ್ಲರೂ ನಮ್ಮವರೇ...ನೀವಾದ್ರೂ ಹೇಳ್ರೀ.."

"ಏನೂ ಬೇಕಿಲ್ಲ, ಯಾರಿಗೂ ಕಷ್ಟವನ್ನು ಕೊಡಬೇಕಾಗಿಲ್ಲ.. ಈಗ ಇವರೆಲ್ಲಾ ನಮ್ಮವರಾ?"

"ಬೇರೆಯವರಿಗೆ ಕಷ್ಟವಾಗುತ್ತೆ ಅಂತ, ನಾನು ಸರಳವಾಗಿ ಮದುವೆ ಮಾಡುಲ್ಲ. ಇದರಿಂದ ಡ್ಯಾಡಿಗೆ ಅವಮಾನ ಮಾಡಿದ ಹಾಗಾಗುತ್ತೆ. ಅವರು ಸರಿಯಾಗಿದ್ದಿದ್ದರೆ, ಅವರ ಮುದ್ದಿನ ಮಗಳಿಗೆ ಅದ್ಧೂರಿಯಾಗಿ ಮದುವೆ ಮಾಡ್ತಿದ್ರೋ ಇಲ್ಲವೋ?.. ನನ್ನನ್ನ ಕೆಟ್ಟವನನ್ನಾಗಿ ಮಾಡ್ಬೇಡ, ನೀನು".

"ಮಹಾ ನೀನು, ಒಳ್ಳೆಯವನಾಗಿರೋದು, ಅಷ್ಟರಲ್ಲೇ ಇದೆ. ಹೀಗೆಲ್ಲಾ ಮಾತನಾಡಿ, ನನ್ನನ್ನ ಕನ್ವಿನ್ಸ್ ಮಾಡ್ತೀನಿ ಅಂತ ಅಂದ್ಕೋಬೇಡ. ಮದುವೆಯ ಗುಲ್ಲೆಬ್ಬಿಸಿದವನು ನೀನು. ಈ ಕಿತಾಪತಿ ನಿಂದು. ರಾಜೀವನ ಪತ್ನಿಯಾಗುವುದಷ್ಟೇ ಮುಖ್ಯ."

"ಹೀಗೆಲ್ಲ ಮಾತಾಡ್ಬೇಡ್ವೇ..ನೀನು ಬರೀ ರಾಜೀವನ ಹೆಂಡತಿಯಾಗಿ ಹೋಗ್ತಿಲ್ಲ. ಅವನ ತಂದೆ ತಾಯಿಯರಿಗೆ ಸೊಸೆಯಾಗ್ತೀಯ. ಅವರುಗಳು ಏನಂದುಕೊಳ್ತಾರೆ! ಅವರ ಘನತೆಗೆ ತಕ್ಕಂತೆ ಮದುವೆ ಮಾಡಿಕೊಡ್ಲಿ ಅಂತ ಅವರುಗಳ ನಿರೀಕ್ಷೆ ಇರುತ್ತೆ..."

"ಏನಾದ್ರೂ ಇದ್ಕೊಳ್ಳಲಿ, ನಾನು ರಾಜೀವನ ಹತ್ರ ಮಾತಾಡ್ತೀನಿ. ಇನ್ನು ಒಂದು ಮುಖ್ಯವಾದ ವಿಷಯ.. ನಾನು ಸೊಸೆಯಾಗಿ ಅವರ ಮನೆಗೆ ಹೋಗುಲ್ಲ. ಮನೆ ಅಳಿಯನಾಗಿ ಅವನೇ ಇಲ್ಲಿರ್ತಾನೆ?" ದೃಢ ನಿರ್ಧಾರ ಮಾಡಿದವಳಂತೆ ಹೇಳಿದಳು.

"ಏನಂದೆ?.. ಅವನು ಇಲ್ಲಿ ಇರೋದಾ? ಇಂಪಾಸಿಬಲ್.." ಶರತ್ ಕೂಗಿದ.

"ಏನು ಇಂಪಾಸಿಬಲ್? ನಾನು ಅವನನ್ನು ಒಪ್ಪಿಸ್ತೀನಿ."

"ಬೇಡ, ಈ ಕಂಡೀಷನ್‌ಗೆ ನಾನು ಒಪ್ಪುಲ್ಲ, ಬೇಕಾದ್ರೆ ಬೇರೆ ಒಂದು ಮನೆ ಮಾಡಿಕೊಂಡು ಅಲ್ಲಿರಿ..." ಎಂದು ಹೇಳಿ ಶರತ್ ಅವಳ ಎದುರಿನಿಂದ ಸರಿದು ಹೋಗಿದ್ದ. ಶ್ವೇತಾ ಚೈತ್ರಾಳ ಕಡೆ ತಿರುಗಿದಳು.

"ಈ ಬಿದ್ಹೋಗೋ ಮದುವೆಗೆ ಇಷ್ಟಾಕೆ ಕಂಡೀಷನ್ಸ್?.."

"ಇದಾ!...ಈ ಚಿದಾನಂದನ ಹೊಟ್ಟೆಯನ್ನು ಉರಿಸೋಕೆ...ನಾನು ರಾಜೀವನ ಜೊತೆ ಓಡಾಡೋದನ್ನ ಇವನು ನೋಡ್ಬೇಕು. ಹೊಟ್ಟೆ ಉರ್ಕೋಬೇಕು..."

"ಚಿದಾನಂದ ಏನೂ ಪ್ರತಿಕ್ರಿಯ ತೋರಿಸ್ದೇನೇ ಇದ್ದರೆ?..." ಅಷ್ಟರಲ್ಲಿ ಚಿದಾನಂದ ಕೆಳಗಿಳಿದು ಬಂದಿದ್ದ. ಇಬ್ಬರೂ ಮಾತನ್ನು ನಿಲ್ಲಿಸಿದರು. ಚೈತ್ರಾ ಮೂತಿ ಸೊಟ್ಟ ಮಾಡಿ ತನ್ನ ರೂಮಿಗೆ ಹೋದಳು. ಶ್ವೇತಾ ಅಲ್ಲೇ ನಿಂತಳು. ಆದರೆ ಚಿದಾನಂದ ಅಲ್ಲಿ ಮಾತಿಗೆ ನಿಲ್ಲಲಿಲ್ಲ.

* * *

ರಾಜೀವ ತನ್ನ ತಂದೆ ತಾಯಿಯರೊಂದಿಗೆ ಸಾಂಪ್ರದಾಯಿಕವಾಗಿ ಚೈತ್ರಾಳನ್ನು ನೋಡಲು ಬರುತ್ತಿರುವುದಾಗಿ ತಿಳಿಸಿದ್ದ. ಈ ವಿಷಯವನ್ನು ಚೈತ್ರಾ ಶ್ವೇತಾಳಿಗೆ ತಿಳಿಸಿದ್ದಳು. "ನೀನೂ ಬಂದ್ಬಿಡು, ನಾನೊಬ್ಬೇ ಆಗುತ್ತೆ.. ಏನೋ ಒಂಥರಾ ಮುಜುಗರ.." ಎಂದಿದ್ದಳು.

"ಏನು ಮುಜುಗರ! ಅವನೇನು ಹೊಸಬ್ನಾ?.. ಅಲ್ಲದೇ ವಧು ಪರೀಕ್ಷೆ ಏನೂ ನಡೆಯುಲ್ಲ. ಈಗಾಗ್ಲೇ ಅವನು 'ಎಸ್' ಅಂದಿದಾನಲ್ಲ. ಅವನ ಅಪ್ಪ, ಅಮ್ಮನಿಗೂ ಒಪ್ಪಿಗೆ ಇದ್ದೇ ಇರ್ಬೇಕು ತಾನೇ?"

"ಆದರೂ...."

"ಬೇಡ ಚೈತ್ರಾ.. ಇದು ನಿನ್ನ ಮದುವೆಯ ಸಮಯವಲ್ಲ. ಬರೀ ನೋಡುವುದಕ್ಕೇ ಅಂತ ಬರ್ತಾ ಇರೋದು. ಈಗ ನಾನು ಅಲ್ಲಿ ಇರುವುದು ಸರಿಯಲ್ಲ.. ಮದುವೇಲಿ ಬಂದು ಓಡಾಡ್ತೀನಿ, ಡೋಂಟ್ ವರಿ....."

"ರಾಜೀವ ನನ್ನನ್ನು ಮರೆತು, ನಿನ್ನನ್ನು ಮದುವೆಯಾಗಿ ಬಿಡುಲ್ಲ...ಅವನು ನನ್ನನ್ನ ಪ್ರೀತಿಸ್ತಿದಾನೆ, ಮದುವೆಯಾಗ್ತಿದಾನೆ.. ನಿಂಗೆ ಯಾವ ಛಾನ್ಸೂ ಇಲ್ಲ."

"ಅದಕ್ಕೇ ನಾನು ಬರುಲ್ಲ ಅಂತ ಅಂದಿದ್ದು..." ತಮಾಷೆ ಮಾಡಿ ನಕ್ಕಳು.

"ನಂಗೆ ಯಾರೂ ಇಲ್ಲ ಕಣೇ, ಒಂಟಿಯಾಗ್ಬಿಟ್ಟಿದೀನಿ ಅಂತ ಅನ್ನಿಸ್ತಿದೆ.. ನೀನಾದ್ರೂ ಬಂದಿದ್ರೆ ಚೆನ್ನಾಗಿರ್ತಿತ್ತು." ಮತ್ತೆ ಗೋಗರೆದಳು.

"ನೀನು ದಿಟ್ಟ ಹುಡುಗಿ. ಈಗ ಹೀಗ್ಯಾಕೆ ಆಡ್ತಿದೀಯ? ಶರತ್‌ನ ಕೇಳು ಅವನು ಹೂಂ ಅಂತಂದ್ರೆ ಬರ್ತೀನಿ."

"ಅವನನ್ನೇನು ಕೇಳೋದು!... ಇದು ನನ್ನ ನಿನ್ನ ವಿಷಯ, ನೀನು ನನ್ನ ಸ್ನೇಹಿತೆ."

"ಆದರೂ, ಶರತ್ ಮನೆಗೆ ಯಜಮಾನ. ಅವನೇ ಪ್ಲ್ಯಾನ್ ಮಾಡಿರುವುದು. ಏನಾದ್ರೂ ಏರುಪೇರು ಆದ್ರೆ,...ನಮ್ಮಿಬ್ಬರನ್ನು ಅವನು ಸುಮ್ಮನೆ ಬಿಡುಲ್ಲ.."

"ಶರತ್‌ಗ್ಯಾಕೆ ಹೆದರ್ತೀಯ?....ಏನೇ ಬಂದ್ರೂ ನಾನು ಮಾತಾಡ್ತೀನಿ. ನೀನು ಬಾ." ಎನ್ನುತ್ತಾ ಫೋನನ್ನು ಕೆಳಗಿಟ್ಟಳು. ಅಷ್ಟರಲ್ಲಿ ಶರತ್ ಅಲ್ಲಿಗೆ ಬಂದಿದ್ದ.

"ಮನೇಲಿ ಓಡಾಡುಕ್ಕೆ ಯಾರೂ ಇಲ್ಲ. ಚಿದಾನಂದನ ತಾಯಿಗೆ ಬನ್ನಿ ಅಂತ ಹೇಳ್ಬೇಕು.." ಎಂದ.

"ಏನೂ ಬೇಡ. ಅವರ್‍ಯಾಕೆ! ಅನ್ನಪೂರ್ಣಮ್ಮ ಇದಾರೆ, ಶ್ವೇತಾ ಬರ್ತಾಳೆ."

"ಶ್ವೇತಾ ಯಾಕೆ? ಅವಳು ಬೇಡ.. ಈಗಲೇ ಅವಳು ಅವರನ್ನು ಪರಿಚಯ ಮಾಡಿಕೊಳ್ಳುವುದು ಬೇಡ..."

"ಯಾಕೆ! ಏನಾಗುತ್ತೆ?.."

"ಯಾಕೆ, ಏನು ಎನ್ನೋದನ್ನ ಆಮೇಲೆ ಹೇಳ್ತೀನಿ..." ನಾನು ರಾಜೀವನ ಹತ್ರ ಮಾತಾಡ್ಬೇಕು. ನೀನೂ ಬರ್ತೀಯಾ? ಕೇಳಿದ.

"ಇಲ್ಲ, ನಂಗೆ ಅವನ ಹತ್ರ ಏನೂ ಮಾತಿಲ್ಲ...ನಾನು ಕೇಳೂದನ್ನೆಲ್ಲ ಕೇಳದ್ದಾಗಿದೆ. ನನ್ನ ಕಂಡೀಷನ್‌ಗಳಿಗೆ ಒಪ್ಪಿಕೊಂಡಿದಾನೆ.."

“ಇದು ಅತಿಯಾಯ್ತು ಚೈತ್ರಾ.. ನೀನು ಹೆಣ್ಣಾಗಿ ಹೀಗೆ ಕಂಡೀಷನ್‌ಗಳನ್ನು ನೇರವಾಗಿ ಅವನೊಡನೆ ಮಾತನಾಡಬಾರ್ದಾಗಿತ್ತು...”

“ಅವತ್ತು ನಾನು ಕೇಳ್ತೀನಿ ಅಂತ ಹೇಳಿದಾಗ ನೀನು ಸುಮ್ಮನಿದ್ದೆ..”

“ಆ ನಿನ್ನ ಸ್ನೇಹಿತೆ ಇದ್ಲು... ಅವಳ ಎದುರಿಗೆ ಗಲಾಟೆ ಯಾಕೆ ಅಂತ ಸುಮ್ಮನಾದೆ.”

“ಅವಳಿಗೆ ಎಲ್ಲಾ ಗೊತ್ತಿದೆ...ನನಗೆ ಅವಳ ಸಹಾಯ, ಸಹಕಾರ ಬೇಕಾಗಿದೆ. ನೀನು ಅಡ್ಡ ಮಾತಾಡ್ಬೇಡ.”

“ಏನಾದ್ರೂ ಮಾಡ್ಕೋ...ನೀನು ಮೊಂಡು...” ಎನ್ನುತ್ತಾ ರಾಜೀವನ ಛೇಂಬರ್‌ಗೆ ಬಂದ. ರಾಜೀವ ಅವನನ್ನು ಎದುರು ನೋಡ್ತಿದ್ದ. ಶರತ್ ಅವನ ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತ.

“ರಿಲಾಕ್ಸ್ ಶರತ್.. ಬಹಳ ಟೆನ್ಷನ್‌ನಲ್ಲಿರುವಂತಿದೆ. ನಿನ್ನ ತಂಗಿಯ ಮಾತಿಗೆ ನೀನ್ಯಾಕೆ ತಲೆ ಬಿಸಿ ಮಾಡ್ಕೋತೀಯ?.. ನಾನು ಹೇಗೆ ಕೂಲ್ ಆಗಿದೀನಿ ನೋಡು..”

“ಹಾಗಲ್ಲ ರಾಜೀವ್.. ಅವಳಿಗೆ ವಿವೇಕ ಸಾಲದು. ಏನೇನೋ ಆಡಿ ಬಿಡ್ತಾಳೆ. ನಿನ್ನ ತಂದೆ ತಾಯಿ ಏನಂದ್ಕೊಳ್ತಾರೆ?”

“ಅದನ್ನೆಲ್ಲ ನಾನು ನೋಡ್ಕೊಳ್ತೀನಿ.. ನಾನು ಚೈತ್ರಾ ಹಾಕಿರುವ ಕಂಡೀಷನ್ಸ್‌ಗೆ ಒಪ್ಪಿಕೊಂಡಿದೀನಿ ಅಂತದ್ಮೇಲೆ, ನಿಂಗ್ಯಾಕೆ ಭಯ?..”

“ಭಯ ಏನಿಲ್ಲ, ಇದು ಸರಿ ಅಲ್ಲ ಅಂತ ನನ್ನ ಭಾವನೆ!”

“ಏನು ಸರಿ ಇಲ್ಲ!.. ಚೈತ್ರಾ ಸರಳವಾಗಿ ಮದುವೆಯಾಗೋಣ ಅಂತ ಹೇಳಿದಾಳೆ. ಅದಕ್ಕೇ ನನ್ನ ಒಪ್ಪಿಗೆ ಇದೆ. ಸುಮ್ಮನೇ ದುಂದು ವೆಚ್ಚ ಯಾಕೆ?.. ಏನು ಖರ್ಚು ಮಾಡ್ಬೇಕು ಅಂತ ಇದ್ಯೋ, ಅದನ್ನು ಅವಳ ಹೆಸರಿನಲ್ಲಿಡು.. ಅಷ್ಟೇ ವೆರಿ ಸಿಂಪಲ್...”

“ಆ ವಿಷಯ ಅಲ್ಲ....”

“ನಿಂಗೆ, ನಾನು ಬಂದು, ನಿಮ್ಮ ಮನೆಯಲ್ಲಿ ಮನೆ ಅಳಿಯನಾಗಿರುವುದು ಇಷ್ಟವಿಲ್ಲ ಅಂತ ನಂಗೆ ಅರ್ಥವಾಗ್ತಿದೆ. ನನಗೂ ಅದು ಕಷ್ಟವೇ.. ಆದರೆ ಚೈತ್ರಾಳ ಆಸೆಯನ್ನು ನಾನು ಹೇಗೆ ತಿರಸ್ಕರಿಸಲಿ?...”

“ನಿನ್ನ ಪೇರೆಂಟ್ಸ್ ಇದಕ್ಕೆ ಒಪ್ತಾರಾ ರಾಜೀವ್?..”

“ಒಪ್ಪಿಸ್ತೀನಿ, ಚೈತ್ರಳಿಗೋಸ್ಕರ, ಆ ಮನೆಯನ್ನು ಬಿಟ್ಟು ಬರೋಕೂ ಸಿದ್ಧನಾಗಿದೀನಿ..”

“ಈಗ್ಲಿಂದ, ನೀನು, ಅವಳು ಹೇಳಿದ ಹಾಗೆ ಕೇಳಿದರೆ, ಅವಳು ನಿನ್ನ ತಲೆಯ ಮೇಲೆ ಹತ್ತಿ ಕುಳಿತು ಸವಾರಿ ಮಾಡ್ತಾಳೆ ಅಷ್ಟೇ...”

“ಮದುವೆಗೆ ಮೊದಲು ನಾನು ಅವಳು ಹೇಳಿದ ಹಾಗೆ ಕೇಳ್ತೀನಿ. ಮದುವೆಯಾದ ಮೇಲೆ, ನಾನು ಹೇಳಿದ ಹಾಗೆ ಅವಳು ಕೇಳುವಂತೆ ಬಗ್ಗಿಸ್ತೀನಿ.”

"ಅದು ಸುಲಭವಲ್ಲ, ಅವಳು ಹಠಮಾರಿ ಹೆಣ್ಣು."

"ನಂಗೆ, ಅಂಥಾ ಹಠಮಾರಿ ಹೆಣ್ಣುಗಳು ಅಂದ್ರೆ ಬಹಳ ಇಷ್ಟ.. ಅಂಥೋರ ಜೊತೆ ಸರಸ, ಸಲ್ಲಾಪ, ಜಗಳ ಕದನ ಎಲ್ಲಾ ಚೆನ್ನಾಗಿರುತ್ತೆ.. ನಿನಗೇ ಗೊತ್ತಾಗುತ್ತೆ. ನಾನು ನಿಮ್ಮ ಮನೇಲೇ ನಿಮ್ಮ ಕಣ್ಣೆದುರಿಗೇ ಇರ್ತೀನಲ್ಲ."

"ನಮ್ಮ ಮನೇಲಿ ನಿಂಗೆ ಅಡ್ಜಸ್ಟ್ ಆಗುಲ್ಲ ರಾಜೀವ.. ನಮ್ಮ ಮನೆಯಲ್ಲಿ ಹೆಚ್ಚು ಅನುಕೂಲಗಳಿಲ್ಲ. ಡ್ಯಾಡಿ ಬೇರೆ, ಹಾಸಿಗೆ ಹಿಡಿದು ಮಲಗಿದಾರೆ.. ನಿಂಗೆ ಬೇಸರವಾಗುತ್ತೆ.."

"ಬೇಸರ! ಇನ್ನು ಮುಂದೆ ಏನು ಬೇಸರ?.. ಚೈತ್ರಾ ನನ್ನೊಂದಿಗೆ ಇರ್ತಾಳಲ್ಲ. ನಾನು ಎಲ್ಲವನ್ನು ಅಡ್ಜಸ್ಟ್ ಮಾಡಿಕೊಳ್ತೀನಿ. ನೀನು ವರಿ ಮಾಡ್ಕೋಬೇಡ. ಆದರೆ, ಒಂದು ವಿಷಯ.. ಮದುವೆಯಾದ ರಾತ್ರಿಯಿಂದ ಒಂದು ವಾರ ಯಾವುದಾದ್ರೂ ಸೂಪರ್ ಡೀಲಕ್ಸ್ ಹೋಟೆಲ್ಲಿನಲ್ಲಿ ನಮಗೋಸ್ಕರ ಭರ್ಜರಿ ರೂಂನ್ನು ಬುಕ್ ಮಾಡಿಸು... ನಮಗೆ ಪ್ರೈವೆಸಿ ಬೇಕು. ಹಾಗೇ ಹನಿಮೂನ್‌ಗೆ ಎಲ್ಲಿಗೆ ಹೋಗ್ಬೇಕು ಅಂತ ನಿರ್ಧರಿಸಿ ಹೇಳ್ತೀನಿ.. ಆ ಅರೇಂಜ್‌ಮೆಂಟ್ಸ್ ಕೂಡಾ ನಿನ್ನದೇ... ನಮಗೋಸ್ಕರ ನೀನು ಇಷ್ಟನ್ನು ಮಾಡು ಸಾಕು.."

"ಇದೂ, ಚೈತ್ರಾಳ ಐಡಿಯಾ ತಾನೇ..?",

"ಎಸ್.. ನಿನ್ನ ತಂಗಿ ಬಹಳ ಸ್ಮಾರ್ಟ್..ನಾನು ಬಹಳ ಲಕ್ಕೀ..." ರಾಜೀವ ಹೆಮ್ಮೆಯಿಂದ ಹೇಳಿಕೊಂಡ. ಶರತ್ ಪೆಚ್ಚಾಗಿದ್ದ.

"ನೀನು ತುಂಬಾ ಬದಲಾಗಿ ಬಿಟ್ಟಿದೀಯ ರಾಜೀವ... ಒಂದು ಹುಡುಗಿಗೋಸ್ಕರ, ನಿನ್ನತನವನ್ನೇ.. ಹೀಗೆ ಕಳೆದುಕೊಳ್ತೀಯಲ್ಲಾ..."

"ಆ ಹುಡುಗಿ ಬೇರೆ ಯಾರೂ ಅಲ್ಲ. ನಿನ್ನ ತಂಗೀನೇ. ನೆನಪಿರಲಿ. ನೀನೂ ಒಂದು ಹುಡ್ಗೀನ ನೋಡ್ಕೋ. ಆಗ ನೀನೂ ಬದಲಾಗ್ತೀಯ..." ಎನ್ನುತ್ತಾ ಶರತ್‌ನ ಬೆನ್ನ ಮೇಲೆ ಹಗುರವಾಗಿ ಗುದ್ದಿ ಭುಜಗಳನ್ನು ಅಮುಕಿದ. ಶರತ್ ಆತಂಕಗೊಂಡ. ಇವನ ಮನಸ್ನಲ್ಲಿ ಏನಿದೆ? ಇವನು ಚೈತ್ರಾಳಿಗೆ ಮರುಳಾಗಿರುವುದು ನಿಜ. ಇವನ ಪ್ರೀತಿಗೆ ಸೋತು ಚೈತ್ರಾ ಇವನಿಗೆ ಶರಣಾಗಿ ಬಿಟ್ಟರೇ...ಆಗ ನನಗೇನು ಲಾಭ?... ಚೈತ್ರಾ ಡಬಲ್ ಕ್ರಾಸ್ ಮಾಡುತ್ತಿರಬಹುದೇ ಅಂತ ಅನ್ನಿಸಿದಾಗ, ಸಣ್ಣಗೆ ಬೆವರಿದ...ಅಲ್ಲಿಂದ ಹೊರಟು, ಸೀದಾ ಶ್ವೇತಾಳ ಮನೆಗೆ ಬಂದ.

ಅನಿರೀಕ್ಷಿತವಾಗಿ ಬಂದ ಶರತ್‌ನ ಕಂಡು ಚಕಿತಗೊಂಡರೂ, ಒಳಗೊಳಗೇ ಸಂತಸವಾಗಿತ್ತು. ತನ್ನನ್ನು ಹುಡುಕಿಕೊಂಡು ಒಬ್ಬ ಯುವಕ ಬರುವುದೆಂದರೇ!...ಅಲ್ಲದೇ ಏನೋ ಮುಖ್ಯವಾದ ವಿಷಯವಿರಲೇ ಬೇಕೆಂದುಕೊಂಡು, ಮುಗುಳ್ನಗುತ್ತಾ ಅವನನ್ನು ಸ್ವಾಗತಿಸಿದಳು. ಒಳಗೆ ಕುಳಿತವನಿಗೆ, ಕುಡಿಯಲು ಜ್ಯೂಸ್ ತಂದಿತ್ತಳು.

"ಮನೇಲಿ ಯಾರೂ ಇದ್ದಂತಿಲ್ಲ. ಒಬ್ಬರೇ ಇದೀರಾ!" ಕೇಳಿದ. ಅವಳು ಸಂದೇಹದಿಂದ ಅವನ ಕಡೆ ನೋಡಿದಳು. ಅವನು ಸಣ್ಣಗೆ ನಕ್ಕ. "ನಾನು ಸ್ವಲ್ಪ ಮಾತನಾಡಬೇಕಾಗಿತ್ತು. ಅದಕ್ಕೇ ಕೇಳಿದೆ" ಎಂದ.

"ಹೂಂ, ಆಡಿ ಪರವಾಗಿಲ್ಲ. ಅಮ್ಮ ಇನ್ನೂ ಸೋದರ ಮಾವನ ಮನೆಯಿಂದ ಬಂದಿಲ್ಲ. ಅಣ್ಣನೂ ಮನೇಲಿಲ್ಲ...ಒಬ್ಬರೇ ಬಂದಿದೀರಿ.. ಅದಕ್ಕೇ ಸ್ವಲ್ಪ ಅಚ್ಚರಿಯಾಗ್ತಿದೆ.."

"ಚೈತ್ರಾ, ತನ್ನ ಮದುವೆಯ ಬಗ್ಗೆ ನಿಮ್ಮ ಹತ್ರ ಏನೇನು ಹೇಳಿದಾಳೆ?"

"ಯಾಕೆ! ಅದನ್ನು ನೀವು ಅವಳನ್ನೇ ಕೇಳಬಹುದಲ್ಲ."

"ಅವಳ ಈ ಮದುವೆಗೆ ನಾನೇ ಕಾರಣ. ಆದರೆ ಈಗ ನನ್ನ ಪ್ಲಾನ್ ಸಕ್ಸಸ್ ಅಗುತ್ತೋ ಇಲ್ಲವೋ ಅಂತ ಆತಂಕ ಆಗ್ತಿದೆ. ಅವಳು ಎಲ್ಲವನ್ನು ಮರೆತು ಬಿಟ್ಟರೆ, ನಾನು ಭಿಕಾರಿ ಆಗ್ತೀನಿ." ಶ್ವೇತಾ ಅವನನ್ನೇ ತಿರಸ್ಕಾರದಿಂದ ನೋಡಿದಳು. "ಪ್ಲೀಸ್, ನೀವು ಹೀಗೆ ನೋಡ್ಬೇಡಿ, ನನಗೆ ಮೋಸ ಆಗಿದೆ... ಅದನ್ನು ವಸೂಲು ಮಾಡುವುದಷ್ಟೇ ನನ್ನ ಪ್ಲ್ಯಾನ್..."

"ಇದರಿಂದ ನಿಮ್ಮ ತಂಗಿಯ ಬಾಳು ಹಾಳಾಗುತ್ತೆ ಅಂತ ಅನ್ನಿಸಲಿಲ್ವಾ?"

"ಅವಳು ಎಚ್ಚರಿಕೆಯಿಂದ ಇದ್ದರೆ ಏನೂ ಹಾಳಾಗುವುದಿಲ್ಲ. ರಾಜೀವ ಅವಳನ್ನು ಅತಿಯಾಗಿ ಪ್ರೀತಿಸ್ತಿದಾನೆ. ಆ ಪ್ರೀತಿ ಮುಂದುವರೆಯಬಾರದು.. ಅವನು ಅವಳನ್ನು ದ್ವೇಷಿಸುವಂತಾಗಬೇಕು.. ನೀವು ಚೈತ್ರಾಳಿಗೆ ಇದನ್ನು ಮನವರಿಕೆ ಮಾಡ್ಕೊಡಿ."

"ಇದು ಮೋಸ ಅಲ್ವಾ! ಶರತ್..?"

"ಅವನು ನನಗೆ ಮೋಸ ಮಾಡಿದಾನೆ ಶ್ವೇತಾ..ಸುಮಾರು ಐವತ್ತು ಲಕ್ಷ ರೂಪಾಯಿ ಹಣವನ್ನು ತನ್ನ ಅಕೌಂಟ್‌ಗೆ ಹಾಕಿಕೊಂಡು ಬಿಟ್ಟಿದಾನೆ. ಕಂಪೆನಿ ಲಾಸ್‌ನಲ್ಲಿ ನಡೀತಿದೆ ಅಂತ ಹೇಳ್ತಾನೆ.. ಈಗ ನನ್ನ ಮನೆಗೇ ಬಂದು ಕೂರುವ ಆಲೋಚನೆಯಲ್ಲಿದಾನೆ.. ನಾನು ಮುಳುಗಿ ಹೋಗ್ತೀನಿ. ಮನೆ ನನ್ನ ಕೈ ಬಿಟ್ಟು ಹೋಗುತ್ತೆ."

"ಆದನ್ನು ವಾಪಸ್ಸು ಪಡೆಯೋಕೆ ಈ ಉಪಾಯ ಬೇಕಾಗಿತ್ತಾ?... ಲಾಯರ್ರು ಇದ್ರು, ಕೋರ್ಟು ಇದೆ. ಕೇಸು ಹಾಕಿದ್ರೆ ಅವನಿಗೆ ಜೈಲು ಶಿಕ್ಷೆ ಆಗ್ತಿತ್ತು..."

"ಕೇಸು ಹಾಕಿ ಫೈಟ್ ಮಾಡಲು ನನ್ನ ಹತ್ತಿರ ಹಣವಿಲ್ಲ. ಅಲ್ಲದೇ ನನ್ನ ಹತ್ತಿರ ಸಾಕ್ಷ್ಯಗಳಿಲ್ಲ. ಮೋಸಕ್ಕೆ ಪ್ರತಿ ಮೋಸ...ಚೈತ್ರಳಿಗೂ ಎಲ್ಲಾ ಅರ್ಥವಾಗಿದೆ..."

"ಸರಿ, ಈಗ ನಾನೇನು ಮಾಡ್ಬೇಕು! ಇದರಿಂದ ನಂಗೇನು ಲಾಭ?..."

"ಎಲ್ಲಾ ನಾನು ಅಂದುಕೊಂಡಂತೆ ನಡೆದರೆ, ನಾನು ನಿಮಗೆ ಎರಡು ಲಕ್ಷ ರೂಪಾಯಿಗಳನ್ನು ಕೊಡ್ತೀನಿ. ನೀವು ನಂಗೆ ಸಹಾಯ ಮಾಡ್ಬೇಕು..

"ನೋಡೋಣ, ನಾನು ಚೈತ್ರಳ ಹತ್ರ ಮಾತಾಡ್ತೀನಿ...ಒಂದು ವೇಳೆ ಅವಳು ರಾಜೀವನ ಜೊತೆ ಸಂಸಾರ ಮಾಡಿಕೊಂಡಿರಲು ಸಿದ್ಧಳಾಗಿದ್ದರೆ, ಅದನ್ನು ನಾನು ಕೆಡಿಸುವುದಿಲ್ಲ.."

"ಆಗ ನಾನು ಬಹಳ ಕೆಟ್ಟವನಾಗ್ತೀನಿ.." ಅವನು ಬೆರಳು ತೋರಿ ನುಡಿದಾಗ, ಅವಳು ನಕ್ಕಳು.

"ಹೀಗೆ ಬೆದರಿಸಿ, ಹೆದರಿಸಿ ಏನೂ ಮಾಡುಕ್ಕಾಗುಲ್ಲ ಶರತ್...ನೋಡೋಣ ಅವಳ

ಮನಸ್ನಲ್ಲಿ ಏನಿದೆ ಅಂತ... ಆದರೆ ನಿಮ್ಮ ಮನಸ್ನಲ್ಲಿ ಏನಿದೆ ಅಂತ ಮಾತ್ರ ತಿಳಿಯಿತು.''

''ನನ್ನ ಕೆಟ್ಟತನ ಏನೇ ಇರಲಿ, ಅದಕ್ಕೇ ರಾಜೀವನೇ ಕಾರಣ.. ರಾಜೀವನಿಂದ ನನ್ನ ಹಣ ನನಗೆ ವಾಪಸ್ಸು ಸಿಕ್ಕರೆ ಆಯಿತು.. ಆಮೇಲೆ ಅವನು ಹೇಗೇ ಇರಲಿ.. ಅವನು ಚೈತ್ರಳೊಂದಿಗೆ ಚೆನ್ನಾಗಿರಲಿ, ಬಿಡಲಿ, ನಾನು ಅವನ ಮಾತಿಗೆ ಹೋಗುವುದಿಲ್ಲ..''

''ನಿಮ್ಮ ಈ ಆದಾಯಕ್ಕೆ ಹುಡುಗಿಯರನ್ನು ಬಳಸಿಕೊಳ್ತಿದೀರಲ್ಲ, ಅದು ಸರಿಯಲ್ಲ.''

''ಇಂಥಾ ಕೆಲಸಗಳನ್ನು ಹುಡುಗಿಯರು ಜಾಣತನದಿಂದ ನಿಭಾಯಿಸ್ತಾರೆ ಅಂತ ಎಲ್ಲೋ ಓದಿದ ನೆನಪು. ಈ ಮದುವೆಯಿಂದ, ಐವತ್ತು ಲಕ್ಷ ರೂಪಾಯಿ, ನನ್ನ ಅಕೌಂಟ್‌ಗೆ ಬಂದು ಬಿದ್ದರೆ ಸಾಕು. ಅದರಲ್ಲಿ ಅರ್ಧ ಚೈತ್ರಾಳಿಗೆ... ನಿಮಗೆ ಎರಡು ಲಕ್ಷ.. ಖಂಡಿತಾ..''

''ನೋಡೋಣ, ನಾನು ಈಗ್ಲೇ ಏನನ್ನೂ ಹೇಳ್ಲಾರೆ..''

''ಸರಿ, ನಾನು ನಿಮಗೆ ಯೋಚಿಸುಕ್ಕೆ ಟೈಂ ಕೊಡ್ತೀನಿ. ನಂಗೆ ಇನ್ನೊಂದು ಲೋಟ ಜ್ಯೂಸ್ ಇದ್ದರೆ ಕೊಡಿ...'' ಎಂದು ಕೇಳಿದ. ಅವಳು ಫ್ರಿಜ್‌ನ ಬಾಗಿಲನ್ನು ತೆರೆದು ಲೋಟಕ್ಕೆ ಸುರಿಯುವುದನ್ನೇ ಗಮನಿಸುತ್ತಿದ್ದ.. ಅವನ ಕಣ್ಣು ಅವಳ ದೇಹದ ಮೇಲೆ ಹರಿದಾಡಿತು. ರಾಜೀವ ಹೇಳಿದ್ದ ಮಾತುಗಳು ನೆನೆಪಿಗೆ ಬಂದವು. ಆ ಹುಡುಗಿ ಇವಳೇ ಯಾಕಾಗಬಾರದು ಎನಿಸಿತು. ಹಣದ ಕೊರತೆಯಿಂದ ನಾನು ಈಗ ಬದಲಾಗಿದೀನಿ. ಹಣ ಸಿಕ್ಕ ಮೇಲೆ ಮತ್ತೆ ಬದಲಾಗ್ತೀನಿ. ನನಗೆ ಇವಳು ಸಹಾಯ ಮಾಡುತ್ತಾಳೆಂಬ ಭರವಸೆ ಹುಟ್ಟಿತು. ಅವಳು ಜ್ಯೂಸ್ ಲೋಟವನ್ನು ಅವನ ಮುಂದೆ ಹಿಡಿದಾಗ, ಅವನು ಅವಳ ಕೈಯನ್ನು ಹಿಡಿದ. ಲೋಟದಿಂದ ಜ್ಯೂಸ್ ತುಳುಕಿತ್ತು.

''ಶರತ್ ಇದೇನು ಮಾಡ್ತಿದೀರಿ!...ಅವಳು ಹಿಂದಕ್ಕೆ ಸರಿದಳು.''

''ಶ್ವೇತಾ...ನೀವು ನನಗೆ ಒಪ್ಪಿಗೆಯಾಗಿದೀರಿ.. ನನ್ನನ್ನು ಮದುವೆಯಾಗ್ತೀರಾ? ಕೇಳಿದ. ಅವಳು ಗಲಿಬಿಲಿಗೊಂಡಳು. ಯಾಕೆ ಅನುಮಾನಿಸ್ತಾ ಇದೀರಾ!.. ನಾನು ಇಷ್ಟವಾಗುವುದಿಲ್ವಾ!...''

''ಹಾಗಲ್ಲ, ಹೀಗೆ ದಿಢೀರನೆ ಕೇಳಿದ್ರೆ ನಾನು ಏನು ಹೇಳ್ಲಿ?..''

''ಹೌದು. ನಾನು ಇದ್ದಕ್ಕಿದ್ದಂತೆ ನನಗೆ ಅನ್ನಿಸಿದ್ದನ್ನು ಕೇಳಿದೆ. ನಾನು ಮತ್ತೆ ಬದಲಾಗುವಷ್ಟರಲ್ಲಿ ನಿಮ್ಮ ಒಪ್ಪಿಗೆ ಬೇಕು.. ನನಗೆ ಒಬ್ಬ ಸಂಗಾತಿಯ ಅಗತ್ಯವಿದೆ. ನನಗೋಸ್ಕರ ನೀವು ಒಪ್ಪಿದೀನಿ ಅಂತ ಹೇಳಿ. ನನ್ನ ಮನಸ್ಸಿಗೆ ಹಿತವೆನಿಸುತ್ತೆ..''

''ಶರತ್.. ನಾನೆಂದೂ ನಿಮ್ಮನ್ನು ಈ ದೃಷ್ಟಿಯಿಂದ ನೋಡಿರ್ಲಿಲ್ಲ...''

''ಸರಿ.. ನನ್ನನ್ನ ಮದುವೆಯಾಗುವ ಆಸೆ ಇಲ್ಲದಿದ್ರೆ ಬೇಡ.. ನನ್ನ ಸ್ನೇಹಿತೆಯಾಗಿರಿ ಸಾಕು.. ನನ್ನ ಮನದ ತುಮುಲಗಳನ್ನು ಹೇಳಿಕೊಳ್ಳಲು ನನಗೊಬ್ಬ ಆಪ್ತರು ಬೇಕು. ನನಗೆ ನಿಮ್ಮ ಸ್ನೇಹ ಬೇಕು..'' ಶ್ವೇತಾ ಸುಮ್ಮನೇ ಅವನನ್ನು ದಿಟ್ಟಿಸಿದಳು. ಇವನು ತನ್ನ ಬಳಿಯೂ ಏನಾದ್ರೂ ನಾಟಕ ಆಡುತ್ತಿರಬಹುದು ಎಂಬ ಭಾವನೆ ಮೂಡದಿರಲಿಲ್ಲ. ಅವಳ ಕೈಯಲ್ಲಿದ್ದ ಜ್ಯೂಸ್‌ನ ಲೋಟವನ್ನೆತ್ತಿಕೊಂಡು ಗಟಗಟನೆ ಕುಡಿದ. ಶಿಲೆಯಂತೆ ನಿಂತಿದ್ದವಳ ಭುಜವನ್ನು ಹಿಡಿದು

ಅಲುಗಾಡಿಸಿದ.

"ಸಾರೀ ಶ್ವೇತಾ, ಏನೇನೋ ಮಾತನ್ನಾಡಿ, ನಿಮ್ಮನ್ನ ಹೆದರಿಸಿಬಿಟ್ಟೆ..ಜ್ಯೂಸ್ ತುಂಬಾ ಚೆನ್ನಾಗಿತ್ತು. ಹೊಟ್ಟೆ ತಣ್ಣಗಾಯಿತು ಬರ್ತೀನಿ" ಎಂದು ಹೇಳಿ, ಮನೆಯಿಂದ ಹೊರಬಿದ್ದ. ಎಷ್ಟೋ ಹೊತ್ತಿನವರೆಗೂ ಶ್ವೇತಾ ಹಾಗೇ ನಿಂತಿದ್ದಳು.

* * *

ರಾಜೀವನ ತಂದೆ ತಾಯಿಗಳು ಅವನೊಂದಿಗೆ ಚೈತ್ರಳ ಮನೆಗೆ ಬಂದರು. ಚೈತ್ರಾ, ಉತ್ಸಾಹದಿಂದ ಅಲಂಕರಿಸಿಕೊಂಡಿದ್ದಳು. ರಾಜೀವನ ಆಯ್ಕೆ ಅವರಿಗೆ ಮೆಚ್ಚುಗೆ ಆಗಿತ್ತು. ಶರತ್ ಗಂಭೀರವನ್ನು ನಟಿಸಿದ್ದ. ರೂಮಿನೊಳಗೆ ಕುಳಿತಿದ್ದ ಶ್ವೇತಾ, ಶರತ್‌ನ ಚಡಪಡಿಕೆಯನ್ನು ಗಮನಿಸಿದ್ದಳು. ಶರತ್ ಬಗ್ಗೆ ಅಯ್ಯೋ ಎನಿಸಿತ್ತು. ಏನಾಗಿದೆ ಇವನಿಗೆ! ತಾನೂ ಹಾಳಾಗುತ್ತಿದಾನೆ. ತಂಗಿಯ ಬಾಳನ್ನೂ ಹಾಳು ಮಾಡುತ್ತಿದಾನೆ ಎಂದು ಅನ್ನಿಸದೇ ಇರಲಿಲ್ಲ. ತಿಂಡಿಯ, ಕಾಫಿಯ ಉಪಚಾರದ ನಂತರ ಅವರುಗಳು ವಾಪಸ್ಸು ಹೊರಟು ಹೋಗಿದ್ದರು. ಚೈತ್ರಾ ತನ್ನ ರೂಮಿಗೆ ಬಂದು, ಹೊಸ ರೇಷ್ಮೆ ಸೀರೆಯನ್ನು ಬಿಚ್ಚಿ, ಸೆಲ್ವಾರ್ ಕಮೀಜ್‌ನ್ನು ತೊಟ್ಟಳು.

"ನಿಂಗೆ ಸೀರೆ ಚೆನ್ನಾಗಿ ಒಪ್ಪುತ್ತೆ ಕಣೇ..."ಶ್ವೇತಾ ಹೊಗಳಿದ್ದಳು.

"ಸಾಕು ಹೊಗಳಿಕೆ, ಯಾಕೇ ನೀನು ಹೊರಕ್ಕೆ ಬರ್ಲಿಲ್ಲಾ!.."

"ರಾಜೀವ ಸುಮಾರಾಗಿದಾನೆ, ನಿನ್ನ ರೂಪಕ್ಕೆ ತಕ್ಕವನಲ್ಲ.."

"ನಂಗೊತ್ತು...ಅವನ ರೂಪ ಯಾರಿಗೆ ಬೇಕಾಗಿದೆ!.. ಅವನ ಬ್ಯಾಂಕ್ ಬ್ಯಾಲೆನ್ಸ್ ಎಷ್ಟಿದೆ ಅಂತ ತಿಳ್ಕೋಬೇಕಾಗಿದೆ...."

"ಅಂದ್ರೇ...ಅವನಿಗೆ ಮೋಸ ಮಾಡುಕ್ಕೆ ಸಿದ್ಧಳಾಗಿದೀಯ ಅಂತನ್ನು..."

"ಮೋಸ ಅಲ್ಲ ಕರ್ತವ್ಯ, ಡ್ಯಾಡಿಗೋಸ್ಕರ ನಾನು ಈ ಮಾತಿಗೆ ಒಪ್ಪಿಕೊಂಡಿದೀನಿ. ನನಗೂ ಮೋಸ ಆಗಿದೆ ಶ್ವೇತಾ.. ಈಗ ನಾನು ಹೇಗಿದ್ರೇನು?.."

"ಸಾಕು ನಟನೆ.. ಹಾಗಾದ್ರೆ ರಾಜೀವನ ಎದುರಿಗೆ ರಾಣಿಯ ಥರ ಮೆರೀಬೇಡ. ಕಸಗುಡಿಸೋಳ ಥರ ಪೋಸು ಕೊಡು." ಇಬ್ಬರೂ ನಕ್ಕರು.

"ನಿನ್ನ ಇಂಥಾ ಸಲಹೆ ನನಗೆ ಬೇಕಾಗಿಲ್ಲ. ನೀನು ನಿನ್ನ ಗಂಡನ ಎದುರಿಗೆ ಹೇಗೆ ಬೇಕಾದ್ರೂ ಇರು..ನಾನು ಪ್ರಶ್ನೆ ಕೇಳುಲ್ಲ.."

"ನೋಡೋಣ ಆ ಕಾಲ ಬಂದಾಗ.. ನಿನ್ನ ಅಣ್ಣನ ಚಡಪಡಿಕೆ ವಿಪರೀತ ಜಾಸ್ತಿಯಾಗಿದೆ. ಬಿ.ಪಿ. ಹೆಚ್ಚಾಗಿದೆ ಅಂತ ಅನ್ನಿಸುತ್ತೆ.."

"ಕೋತಿ ಥರ ಆಡ್ತಾನೆ, ಅವನಿಗೆ ನನ್ನ ಮೇಲೆ ನಂಬಿಕೆ ಇಲ್ಲ.. ಅದಕ್ಕೆ ತಕ್ಕ ಹಾಗೆ ರಾಜೀವನ ನಡೆವಳಿಕೆ.. ಮೋಸ ಆಗಿದೆ. ಲಾಸ್ ಆಗಿದೆ.. ಮುಂದೇನು ಗತಿ.. ಅಂತ ಅದಷ್ಟೇ ಅವನ ಚಿಂತೆ.."

"ರಾಜೀವ ನಿಜವಾಗಿಯೂ ಮೋಸ ಮಾಡಿದಾನೆ ಅಂತ ಅನ್ನಿಸುತ್ತಾ?.."

"ಅವನ ಮಾತ್ನಿಂದ ಹಾಗೇ ಅನ್ನಿಸುತ್ತೆ.. ಒಂದೊಂದ್ಸಾರಿ, ಶರತ್ ಬಗ್ಗೆ ಕೆಟ್ಟದಾಗಿ ಮಾತನಾಡಿ ಹೇಗೆ ನಗ್ತಾನೆ ಗೊತ್ತಾ?.."

"ಮತ್ತೇ? ಅಂಥೋನ ಜೊತೆ ಹೇಗಿರ್ತೀಯೆ?.. ನಿನ್ನನ್ನ ಮುಟ್ಟದೇ ಇರ್ತಾನಾ?"

"ಆ ಕಂಡೀಷನ್‌ನೂ ಹಾಕ್ತೀನಿ.. ಮೈ ಮುಟ್ಟಿದರೆ ಬರೆ ಹಾಕಿಸಿ ಬಿಡ್ತೀನಿ.. ಆಮೇಲೆ ಡೈವೋರ್ಸ್ ತಗೋತೀನಿ.."

"ಇದೆಲ್ಲಾ ನಾಟಕ ಅಂತ ಅವನಿಗೆ ತಿಳಿದಿದೆಯೋ ಏನೋ!.."

"ತಿಳಿದಿರಲಿ, ತಿಳಿಯದೇ ಇರಲಿ.. ಅವನಿಂದ ದೂರವಾಗಿ ಬರುವ ಉಪಾಯವನ್ನು ಹುಡುಕ್ಬೇಕು.. ಆ ಪತ್ತೇದಾರ ಪುರುಷೋತ್ತಮ ಇದಾನಲ್ಲ.. ಅವನು ಹೇಳಬಹುದು."

"ಯಾರೇ ಅದು? ಆ ಪುರುಷೋತ್ತಮ....."

"ಅವನೇ ಚಿದನಾಂದ.. ಅವನು, ನೀನು.. ಇಬ್ಬರೂ ಸೇರಿಕೊಂಡು, ಏನಾದರೂ ಸಖತ್ ಉಪಾಯವನ್ನು ಹುಡುಕಿ.. ರಾಜೀವನಿಗೆ ನನ್ನ ಮೇಲಿನ ಪ್ರೀತಿ ಕಡಿಮೆ ಆಗ್ಬೇಕು.. ಅವನಾಗಿಯೇ ನನಗೆ ಡೈವೋರ್ಸ್ ಕೊಡ್ಬೇಕು. ಹಾಗೆ ಪರಿಸ್ಥಿತಿ ಒದಗ್ಬೇಕು.."

"ಒದಗದಿದ್ದರೇ.." ಆಗೇನು ಮಾಡ್ತೀಯೆ?"

"ಅತ್ಮಹತ್ಯೆ ಮಾಡ್ಕೊಳ್ತೀನಿ. ಅದೊಂದೇ ದಾರಿ...."

"ನಿಜವಾಗಿಯೂ?.."

"ಹೂಂ, ನಿಜವಾಗಿಯೂ ನೀನೂ ಬರ್ತೀಯಾ?.."

"ಸಾರೀ.. ಇಲ್ಲಿ ನನಗಾಗಿ ಒಬ್ಬ ಕಾಯ್ತಾ ಇದಾನೆ.. ಅಲ್ಲಿಗೆ ಹೇಗೆ ಬರಲಿ?.."

"ಯಾರೇ ಅವನು?.."

"ಸಧ್ಯಕ್ಕೆ ಸಸ್ಪೆನ್ಸ್, ನಿಧಾನವಾಗಿ ಹೇಳ್ತೀನಿ.."

"ಹೇಳ್ದಿದ್ರೆ ಕತ್ತೆ ಬಾಲ.. ಈಗ ಚಿದಾನಂದನ ಹತ್ರ ಮಾತ್ನಾಡು.."

"ಅವನ ತಾಯಿ ಬಂದಿದಾರಾ?.."

"ಬಂದಿದ್ರೆ ಕಾಣ್ತಿರಲಿಲ್ವಾ!.... ಬಂದಿಲ್ಲ ಅಂತ ಕಾಣುತ್ತೆ.."

"ಮದುವೆ ಹೊತ್ತಿಗಾದ್ರೂ ಬರ್ಲಿ.. ಮನೇಲಿ ಜನರೇ ಇಲ್ಲ.."

"ಬಂದರೆ ಬರಲಿ, ಬಿಟ್ಟರೆ ಬಿಡಲಿ. ನನಗೆ ಆಸಕ್ತಿ ಇಲ್ಲ. ಈಗ ಚಿದಾನಂದನ ಹತ್ರ ಮಾತನ್ನಾಡಿ, ಅವನು ಏನು ಹೇಳ್ದ ಅಂತ ನಂಗೆ ಹೇಳು." ಅವಳನ್ನು ರೂಮಿನಿಂದ ಕಳಿಸಿದಳು.

* * *

ಈ ಮೊದಲೇ ನಿಷ್ಕರ್ಷೆಯಾಗಿದ್ದಂತೆ, ರಾಜೀವ, ಚೈತ್ರಾಳಿಗೆ ದೇವಸ್ಥಾನದಲ್ಲಿ ದೇವರ ಸಮ್ಮುಖದಲ್ಲಿ, ಹಾರವನ್ನು ಹಾಕಿದ. ಅವಳಿಂದ ಹಾರವನ್ನು ಹಾಕಿಸಿಕೊಂಡ. ಮಂಗಳ ಸೂತ್ರವನ್ನು ಕಟ್ಟುವ ನೆಪದಲ್ಲಿ, ಅವಳ ಬಿಳಿಕೊರಳ ಮೇಲೆ ಕೈಯಾಡಿಸಿದ. ಅವಳಿಗೆ ಮೈಮೇಲೆ ಮುಳ್ಳುಗಳೆದ್ದಂತಾಗಿತ್ತು. "ರಾಜೀವ್ ಪ್ಲೀಸ್.. ಎಂದಿದ್ದಳು ಅವನೊಬ್ಬನಿಗೇ ಕೇಳುವಂತೆ.

'ಸಾರಿ'-ಎಂದು ಹೇಳಿ, ಅವನು ಗಂಟಲಲ್ಲೇ ನಕ್ಕಿದ್ದ. ಅರ್ಚಕರ ಮನೆಯಲ್ಲೇ ಎಲ್ಲರಿಗೂ ಕಾಫಿ ತಿಂಡಿಯ ಉಪಚಾರವಾಗಿತ್ತು. ರಾಜೀವನ ತಂದೆ ತಾಯಿ, ತಂಗಿಯರು, ಅವರ ಗಂಡಂದಿರು, ಮಕ್ಕಳು ಇಷ್ಟೇ ಜನ. ಈ ಕಡೆಯೂ ಅಷ್ಟೇ.. ಶ್ವೇತಾ ತನ್ನ ತಾಯಿ ಹಾಗೂ ಅಣ್ಣನೊಂದಿಗೆ ಬಂದಿದ್ದಳು. ಚಿದಾನಂದ ಮನೆಯಲ್ಲೇ ಇದ್ದ. ಮಂದಾಕಿನಿ ಹಾಗೂ ಅನ್ನಪೂರ್ಣಮ್ಮ ಮುಹೂರ್ತದ ಸಮಯಕ್ಕೆ ಬಂದಿದ್ದರು.

ಶರತ್, ಏನೋ ಅವಮಾನವಾದವನಂತೆ ಚಡಪಡಿಸಿದ್ದ. ನಂತರ ಎಲ್ಲರೂ ಲಂಚ್‌ಗೆಂದು ಬುಕ್ ಮಾಡಿದ್ದ ಹೋಟೆಲ್ಲಿಗೆ ಬಂದರು. ಅಲ್ಲಿಂದ ಸೀದಾ ಎಲ್ಲರೂ ಚೈತ್ರಾಳ ಮನೆಗೆ ಬಂದರು. ಶರತ್‌ನ ಮಾತಿಗೆ ಒಪ್ಪಿ, ಮಂದಾಕಿನಿಯೇ, ರಾಜೀವನ ತಾಯಿಗೆ, ತಂಗಿಯರಿಗೆ ಸೀರೆಗಳನ್ನು ಉಡುಗೊರೆಯನ್ನಾಗಿ ನೀಡಿದಳು. ಅವರು ಇವರುಗಳಿಗಾಗಿ ಏನನ್ನು ತಂದಿರಲಿಲ್ಲ. ಮಂದಾಕಿನಿಗೆ ಪಿಚ್ಚೆನ್ನಿಸಿತ್ತು. ಮಂಗಳ ಕಾರ್ಯಕ್ಕೆ ಬರಿಗೈಯಲ್ಲಿ ಬರುವುದೆಂದರೆ.. ಯಾಕೋ ಶಕುನವಾಗಲೀ, ರೀತಿಯಾಗಲಿ ಸರಿ ಹೋಗಲಿಲ್ಲವೆಂದು ಮನ ಅಳುಕಿತ್ತು.

ರಾಜೀವ ತನ್ನ ತಂಗಿಯರೊಂದಿಗೆ ತನ್ನ ಮನೆಗೆ ಹೊರಟ. ಚೈತ್ರಳನ್ನು ಕರೆಯಲೆಂದು ಅವಳಿದ್ದೆಡೆಗೆ ಬಂದ. ಶ್ವೇತಾಳೊಡನೆ ಪಿಸುದನಿಯಲ್ಲಿ ಮಾತನಾಡುತ್ತಿದ್ದ ಚೈತ್ರಾ ಅವಳನ್ನು ಒಳಗೇ ಬಿಟ್ಟು ಹೊರಕ್ಕೆ ಬಂದಳು.

"ಈಗ ನಮ್ಮ ಮನೆಗೆ ಹೋಗೋಣ.. ಅಲ್ಲಿಂದ ನಮಗಾಗಿ ಸಿದ್ಧ ಪಡಿಸಿರುವ ಹನಿಮೂನ್ ರೆಸಾರ್ಟ್‌ಗೆ ಹೋಗೋಣ.."

"ನಾನು ಡ್ಯಾಡೀನ ಮಾತೇ ಆಡ್ಲಿಲ್ಲ.. ಬನ್ನಿ.. ಅವರನ್ನು ನೋಡಿ ಮಾತನಾಡಿಸ್ಕೊಂಡು ಬರೋಣ.. ಶ್ವೇತಾ.. ನನ್ನ ಕಿಟ್‌ಬ್ಯಾಗ್ ರೆಡಿ ಮಾಡೇ ಪ್ಲೀಸ್.." ಎಂದು ಹೇಳಿ ಅವನೊಂದಿಗೆ ಮಹಡಿಯನ್ನೇರಿದಳು. ಹೆಜ್ಜೆಯ ಸಪ್ಪಳ ಕೇಳಿಸಿತ್ತು. ಬಾಗಿಲ ಬಳಿ ನೆರಳು ಬಿದ್ದಿತ್ತು. ಕೈಯಲ್ಲಿದ್ದ ಪುಸ್ತಕವನ್ನು ಪಕ್ಕಕ್ಕಿಟ್ಟು ಚಿದಾನಂದ ಎದ್ದು ನಿಂತ.

"ನಮಸ್ಕಾರ ಸಾರ್" ಎಂದ ರಾಜೀವನ ಕಡೆ ತಿರುಗಿ.

"ಏನ್ರೀ ಫಂಕ್ಷನ್‌ಗೆ ಬರ್ಲೇ ಇಲ್ಲ ನೀವು.. ಚೈತ್ರಾಳ ಅಣ್ಣ ಅಂತ ಪರಿಚಯ ಹೇಳಿಕೊಂಡಿದ್ರಿ.. ಆದಿನ.." ಅವನು ಅವಳ ಕಡೆ ತಿರುಗಿ ನೋಡಿ ನಕ್ಕ.

"ಹೇಗೆ ಬರ್ತಾರೆ ರಾಜೀವ್.." ಡ್ಯಾಡೀನ ಬಿಟ್ಟು ಬರೋಕೆ ಆಗ್ತಿತ್ತಾ?" ಅವಳು ಚಿದಾನಂದನ ಕಡೆ ತಿರುಗಿ ವ್ಯಂಗ್ಯವಾಗಿ ಆಡಿದಳು. ಅವನು ತಲೆ ತಗ್ಗಿಸಿದ್ದ. ಚೈತ್ರಾ ಡ್ಯಾಡಿಯ ಬಳಿ ನಿಂತು ಎರಡು ಹನಿ ಕಣ್ಣೀರನ್ನು ಸುರಿಸಿದಳು. ರಾಜೀವ ಅವಳ ಭುಜದ ಮೇಲೆ ಕೈಯನ್ನಿಟ್ಟ, ಚೈತ್ರಾ ಕಣ್ಣುಗಳನ್ನೊರೆಸಿಕೊಂಡು ಚಿದಾನಂದನ ಕಡೆ ನೋಡಿದಳು.

"ಹೊರಡೋಣ ಹೊತ್ತಾಗುತ್ತೆ.." ರಾಜೀವನೆಂದ. ಅವನು ಅವಳನ್ನು ತನ್ನ ಭುಜಕ್ಕೊರಗಿಸಿಕೊಂಡೇ ನಡೆದ. ಚೈತ್ರಾ ಚಿದಾನಂದನ ಕಡೆ ತಿರುಗಿ ನೋಡಿದಳು. ಅಲ್ಲಿ ಯಾವ ಭಾವವಿತ್ತು ಎಂದು ಅವಳಿಂದ ಗುರುತಿಸಲಾಗಿರಲಿಲ್ಲ. ಮೆಟ್ಟಿಲ ಬಳಿ ಕೆಳಗೆ ನಿಂತಿದ್ದ ಶರತ್ ಅವಳ ಕಡೆ ನೋಡಿದ. ಅವಳು ರಾಜೀವನಿಂದ ಸರಿದು ನಿಂತಳು.

* * *

ನವದಂಪತಿಗಳಿಗೆಂದು ಹೂಗಳಿಂದ ಅಲಂಕೃತಗೊಂಡಿದ್ದ ಕಾರು ಸಿದ್ಧವಾಗಿತ್ತು. ರಾಜೀವ, ಚೈತ್ರಾ ಮನೆಯಿಂದ ಹೊರಟರು. ತಂಗಿಯರು, ಅವರ ಗಂಡಂದಿರು ಇಬ್ಬರಿಗೂ ಶುಭವನ್ನು ಹಾರೈಸಿದರು. ಡ್ರೈವರ್ ಹಿಂದಿನ ಬಾಗಿಲನ್ನು ತೆರೆದ. ಇಬ್ಬರೂ, ಕಾರನ್ನೇರಿದರು. ಕಾರು, ಕಾಂಪೌಂಡನ್ನು ದಾಟಿ, ಹನಿಮೂನ್ ರೆಸಾರ್ಟ್‌ಗೆ ಹೋಗುವ ದಾರಿಯತ್ತ ಸಾಗಿತು.

ಹನಿಮೂನ್ ರೆಸಾರ್ಟ್ ಸುಮಾರು ಮೂವತ್ತು ಕಿ.ಮೀಟರ್ ದೂರದಲ್ಲಿತ್ತು. ರಾಷ್ಟ್ರೀಯ ಹೆದ್ದಾರಿಯಲ್ಲಿ ಸಾಗುವಾಗ, ತೋಪುಗಳ ನಡುವೆ ಮತ್ತೆ ಎಂಟು ಹತ್ತು ಕಿಲೋ ಮೀಟರ್ ದೂರದಷ್ಟು ಹೋಗಬೇಕಾಗಿತ್ತು. ರಾಜೀವ ಅವಳ ಭುಜವನ್ನು ಬಳಸಿ, ಪಿಸುದನಿಯಲ್ಲಿ ಏನನ್ನೋ ಹೇಳುತ್ತಿದ್ದ. ಅವಳಿಗೆ ಅವನ ಮಾತುಗಳ ಮೇಲೆ ಧ್ಯಾನವಿರಲಿಲ್ಲ. ಯಾವುದೋ ಟೆನ್ಷನ್‌ನಲ್ಲಿರುವಂತೆ ಅನ್ನಿಸುತ್ತಿತ್ತು.

"ಯಾಕೆ ಚೈತ್ರಾ..ಭಯಾನಾ?.. ನಾನು ನಿನ್ನ ಗಂಡ ಕಣಮ್ಮಾ.. ನಾನು ನಿನ್ನನ್ನು ಯಾವುದೇ ರೀತಿಯಲ್ಲಿ ಬಲವಂತ ಪಡಿಸುವುದಿಲ್ಲ.." ಅವನು ವಿಶ್ವಾಸದಿಂದ ತೋಳನ್ನು ಅಮುಕಿದ್ದ. ಅವಳು ಉತ್ತರಿಸದೇ ಸುಮ್ಮನೇ ನಕ್ಕಿದ್ದಳು.

ಹೆದ್ದಾರಿಯಿಂದ ಪಕ್ಕಕ್ಕೆ ತಿರುಗುವ ರಸ್ತೆಗೆ ಕಾರು ಧಾವಿಸುತ್ತಿದ್ದಂತೆ, ಡ್ರೈವರ್‌ು ಸರ್ರನೆ ಬ್ರೇಕ್ ಹಾಕಿದ. ಇಬ್ಬರೂ ಮುಗ್ಗರಿಸಿದ್ದರು. "ಏನಾಯ್ತಪ್ಪಾ?" ರಾಜೀವ ಭಯದಿಂದ ಕೇಳಿದ್ದ.

"ಯಾವುದೋ ಕಾರು ಅಡ್ಡ ಬಂದು ನಿಂತು ಬಿಟ್ಟಿದೆ ಸಾರ್.. ಗೊತ್ತಾಗ್ಲೇ ಇಲ್ಲ"

"ಏನಂತೆ? ವಿಚಾರಿಸು.." ಎಂದು ಹೇಳಿದ. ಡ್ರೈವರ್‌ು ಕಾರನ್ನು ನಿಲ್ಲಿಸಿ ಕೆಳಗಿಳಿದು ನಿಂತಿದ್ದ ಕಾರಿನ ಬಳಿಗೆ ಹೋದ.. ಅವನಿನ್ನೂ ಹಿಂತಿರುಗಿರಲಿಲ್ಲ. ಎಲ್ಲಿದ್ದರೋ ಒಂದು ನಾಲ್ಕಾರು ಗೂಂಡಾಗಳು ಕಾರನ್ನು ಸುತ್ತುವರೆದರು. ರಾಜೀವ ಗಾಬರಿಗೊಂಡ.

"ಜಗ್ಗಣ್ಣಾ.. ಜಗ್ಗಣ್ಣಾ.." ಅವನು ಡ್ರೈವರನ್ನು ಕರೆದ. ಆದರೆ ಅವನ ಸುಳಿವಿಲ್ಲ. ಸುತ್ತುವರೆದಿದ್ದವರು ಬಲವಂತವಾಗಿ ಕಾರಿನಲ್ಲಿ ನುಸುಳಿದರು. ಒಬ್ಬ ಡ್ರೈವರನ ಸೀಟಿನಲ್ಲಿ ಕುಳಿತ. ಕಾರು, ತೋಪುಗಳ ನಡುವೆ ಸಂದುಗೊಂದಿನಲ್ಲಿ ಓಡಿತು. ರಾಜೀವ.. ಹೆಲ್ಪ್ ಹೆಲ್ಪ್ ಎಂದು ಕಿರುಚಿದ.. ಮರಗಳ ಮಧ್ಯೆ ಕಾರನ್ನು ನಿಲ್ಲಿಸಿ, ರಾಜೀವನನ್ನು ಹೊರಕ್ಕೆ ಎಳೆದು, ಅವನ ಮೂಗಿಗೆ ಏನ್ನನೋ ಸೋಕಿಸಿದರು. ಯಾರೋ ಕಾಲಿಗೆ ಬಲವಾಗಿ ಏಟನ್ನು ಕೊಟ್ಟರು.. ಏನಾಗ್ತಿದೆ ಅಂತ ತಿಳಿದುಕೊಳ್ಳುವಷ್ಟರಲ್ಲಿ ಅವನಿಗೆ ಜ್ಞಾನ ಹೋಗಿತ್ತು.

ರಾಜೀವನಿಗೆ ಜ್ಞಾನ ಬಂದಾಗ, ತಾನು ಯಾವುದೋ ಆಸ್ಪತ್ರೆಯಲ್ಲಿದೀನಿ ಎಂದು ಅರಿವಾಯಿತು. ಕಾಲು ಹೊಡೆತ ಬಿದ್ದ ಕಡೆ ನೋಯುತ್ತಿತ್ತು. ನಡೆದ ಘಟನೆ ನಿಧಾನವಾಗಿ ನೆನಪಿಗೆ ಬಂತು.. ಅಲ್ಲಿ ಕುಳಿತಿದ್ದ ನರ್ಸನ್ನು ಕೇಳಿದ.

"ನನ್ನನ್ನ ಇಲ್ಲಿಗೆ ಯಾರು ಕರೆ ತಂದ್ರು!.. ನನ್ನ ಹೆಂಡತಿ ಎಲ್ಲಿ! ಡ್ರೈವರ‍್ರು ಎಲ್ಲಿ ಹೋದ ಅಂತ.." ಅವರ‍್ಯಾರೂ ಕಾಣ್ತಿಲ್ಲವಲ್ಲ" ತಡವರಿಸುತ್ತಾ ಕಷ್ಟದಿಂದ ಕೇಳಿದ.

"ನನಗೆ ವಿವರಗಳು ಗೊತ್ತಿಲ್ಲ. ನೀವು ಡಾಕ್ಟರ ಹತ್ರ ಮಾತಾಡಿ" ಎಂದು ಬಿಟ್ಟಳು. ಅವಳೇ ಹೋಗಿ ಡಾಕ್ಟರನ್ನು ಕರೆ ತಂದಳು. ರಾಜೀವ ನಡೆದ ವಿಷಯವನ್ನು ತಿಳಿಸಿದ.

"ನನ್ನ ಹೆಂಡತಿಗೆ ಏನಾಯ್ತು?... ನಾನು ಅವಳನ್ನು ನೋಡ್ಬೇಕು" ಅಂತಂದ.

"ಇಲ್ಲಿಗೆ ನಿಮ್ಮನ್ನ ಮಾತ್ರ ಕರೆತಂದಿದ್ರು...ನಿಮ್ಮನ್ನು ಇಲ್ಲಿಗೆ ಸೇರಿಸಿ ಹೊರಟು ಹೋದ್ರು.. ಅವರ ಅಡ್ರೆಸ್ ಇದೆ.. ನೀವು ಬೇಕಾದ್ರೆ ಮಾತನಾಡಬಹುದು" ಎಂದರು.

"ನಾನು ಶರತ್ ಹತ್ರ ಮಾತಾಡ್ಬೇಕು.." ಎಂದು ಹೇಳಿದ. ಸಿಸ್ಟರ್ ಫೋನನ್ನಿತ್ತಳು.

ರಾಜೀವ ಡಯಲ್ ಮಾಡಿ ಶರತ್ ಹತ್ತಿರ ಮಾತನಾಡಿದ.

"ಶರತ್ ಒಂದು ಆಕ್ಸಿಡೆಂಟ್ ನಡೆದು ಹೋಗಿದೆ. ಚೈತ್ರನ್ನ ಯಾರೋ ಕಿಡ್ನಾಪ್ ಮಾಡಿದಾರೆ. ನಾನು ಹೈವೇ ಹತ್ತಿರವಿರುವ ನರ್ಸಿಂಗ್ ಹೋಂನಲ್ಲಿದೀನಿ. ಬೇಗ ಬಾ-ಈಗ್ಲೇ ಈ ವಿಷಯವನ್ನು ನನ್ನ ತಂದೆ ತಾಯಿಗೆ ತಿಳಿಸಬೇಡ" ಅಂತಂದ.

"ನಾನು ಈಗ್ಲೇ ಬರ್ತೀನಿ. ಪೋಲಿಸ್ ಕಂಪ್ಲೆಂಟ್ ಕೊಟ್ಟಿದೀಯಾ?" ಕೇಳಿದ್ದ.

"ಇಲ್ಲ, ನನಗೆ ಜ್ಞಾನ ಬಂದದ್ದು ಈಗಲೇ.. ನೀನು ಬರ್ತಾ ಪೋಲೀಸರನ್ನು ಕರ‍್ಕೊಂಡು ಬಾ. ನಾನು ಅವರ ಹತ್ರ ಮಾತಾಡ್ಬೇಕು" ಅಂತಂದ.

"ಎಷ್ಟೋ ಹೊತ್ತಿನ ಬಳಿಕ ಶರತ್, ಪೋಲಿಸ್ ಇನ್‌ಸ್ಪೆಕ್ಟರೊಂದಿಗೆ ಬಂದ. ಕೂಲ್ ಆಗಿದೀಯಲ್ಲ.." ರಾಜೀವ ಕೇಳಿದ.

"ಆತಂಕ ಆಗ್ದೇ ಇರುತ್ತಾ ರಾಜೀವ? ನಾನು ಇನ್ಸ್‌ಪೆಕ್ಟರ್ ಹತ್ರ ಮಾತಾಡಿದೀನಿ. ನಿನಗೂ ಪೆಟ್ಟಾಗಿದೆ. ನಿನ್ನ ಡ್ರೈವರ್ ಎಲ್ಲಿದಾನೆ?.. ಎಲ್ಲವನ್ನು ಇನ್ಸ್‌ಪೆಕ್ಟರ್‌ಗೆ ಹೇಳು." ರಾಜೀವ ಪೋಲಿಸ್ ಇನ್ಸ್‌ಪೆಕ್ಟರ್‌ಗೆ ನಡೆದ ಘಟನೆಯನ್ನು ವಿವರಿಸಿದ. ತಾನು ಕಂಡ ಗೂಂಡಾಗಳ ಬಗ್ಗೆ ವಿವರಣೆಯನ್ನು ನೀಡಿದ.. ಒಂದೇ ಸಮನೆ ಮಾತನಾಡಿ ಆಯಾಸಗೊಂಡ.

"ಆಯಾಸ ಮಾಡ್ಕೋಬೇಡ ರಾಜೀವ.. ನಾನು ಡಾಕ್ಟರ ಹತ್ರ ಮಾತಾಡ್ತೀನಿ. ಅವರು ಒಪ್ಪಿದರೆ, ನಿನ್ನನ್ನು ಡಿಸ್ಚಾರ್ಜ್ ಮಾಡಿಸ್ಕೊಂಡು ಹೋಗ್ತೀನಿ."

"ನನ್ನನ್ನ ನಮ್ಮ ಮನೆಗೆ ಕರ‍್ಕೊಂಡು ಹೋಗು.." ಎಂದಷ್ಟೇ ಹೇಳಿದ. ಇನ್ಸ್‌ಪೆಕ್ಟರ್ ಅವನಿಂದ ಹೇಳಿಕೆಯನ್ನು ತೆಗೆದುಕೊಂಡು ಹೊರಟು ಹೋಗಿದ್ದರು. ಶರತ್ ಡಾಕ್ಟರನ್ನು ಭೇಟಿಯಾದ.

"ಇವರಿಗೆ ಹೆಚ್ಚಿಗೆ ಪೆಟ್ಟಾಗಿಲ್ಲ. ಕಾಲಿಗೆ ಹೆಚ್ಚು ಏಟು ಬಿದ್ದಿದೆ. ಆದರೆ ಶಾಕ್ ಆಗಿದೆ.

ಟೆನ್ಷನ್‌ಗೆ, ನಿದ್ದೆ ಬರದೇ ಹೊರಳಾಡಬಹುದು. ಕೋಪ ಬಂದರೆ ಬಾಯಿಗೆ ಬಂದಂತೆ ಬೈಯಬಹುದು.. ಯಾಕೆ ಹೀಗಾಯ್ತು! ಅವರಿಗೆ ಯಾರ ಮೇಲಾದರೂ ಅನುಮಾನ ಇದೆಯಾ ಅಂತ ಕೇಳಿ ತಿಳಿದುಕೊಳ್ಳಿ..'' ಶರತ್ ಓರೆಗಣ್ಣಿನಿಂದ ಡಾಕ್ಟರ ಕಡೆ ನೋಡಿದ.

''ಇನ್ನೆರಡು ದಿನ ಅವರು ಇಲ್ಲಿರಲಿ. ನಾವು ನೋಡಿಕೊಳ್ತೀವಿ.. ಆಮೇಲೆ ಡಿಸ್ಚಾರ್ಜ್ ಮಾಡ್ತೀನಿ. ಅವರು ಕೆಲವು ದಿನ ರೆಸ್ಟ್‌ನಲ್ಲಿರಬೇಕಾಗುತ್ತೆ. ಅಪಹೃತವಾಗಿರುವ ಹೆಂಡತಿ ವಾಪಸ್ಸು ಬಂದರೆ, ಅವರು ಬೇಗ ರಿಕವರ್ ಆಗ್ತಾರೆ..''

''ಆದರೆ, ಈಗಾಗಲೇ ಒಂದು ರಾತ್ರೆ ಕಳೆದು ಹೋಗಿದೆ. ಅಪಹರಣಕಾರರು ಫೋನನ್ನೇ ಮಾಡಿಲ್ಲವಲ್ಲ.. ನನ್ನ ತಂಗಿ ಸುರಕ್ಷಿತವಾಗಿದಳೋ ಇಲ್ವೋ ಅಂತ ಅನುಮಾನ ಬರ್ತಿದೆ..''

''ಪೋಲಿಸ್ ಕಂಪ್ಲೆಂಟ್ ಕೊಟ್ಟಿದ್ದಾಗಿದೆಯಲ್ಲ. ಈಗಾಗಲೇ ಅವರು ಹುಟುಕಾಟವನ್ನು ನಡೆಸುತ್ತಿರುತ್ತಾರೆ.. ನೀವು ಧೈರ್ಯವಾಗಿರಿ.'' ಡಾಕ್ಟರು ಸಮಾಧಾನವನ್ನು ಹೇಳಿದರು.

ಶರತ್, ಮತ್ತೊಮ್ಮೆ ರಾಜೀವನ ಬಳಿ ಮಾತನಾಡಿ, ''ನಾನು ಮತ್ತೆ ಬರ್ತೀನಿ'' ಎಂದ.

''ನೀನು ಪದೇ ಪದೇ ಏನೂ ಬರಬೇಕಾಗಿಲ್ಲ ಆದಷ್ಟು ಬೇಗ ಅವಳನ್ನು ಹುಡುಕಿಸು. ಅವಳು ನನ್ನ ಹೆಂಡ್ತೀ ಕಣೋ.. ಅವಳೊಂದಿಗೆ ಒಂದು ರಾತ್ರಿಯನ್ನು ಕೂಡಾ ನಾನು ಕಳೆದಿರಲಿಲ್ಲ. ಪಾಪಿಗಳು ಕಿಡ್ನಾಪ್ ಮಾಡಿದಾರೆ.. ಅವಳು ಹೇಗಿದಾಳೋ.. ಅವಳ ಗತಿ ಏನಾಗಿದೆಯೋ?''

''ರಾಜೀವ ಸಮಾಧಾನ ಮಾಡ್ಕೋ, ಚೈತ್ರಾಳನ್ನು ಹುಡುಕಿಸುವ ಜವಾಬ್ದಾರಿ ನಂದು. ಎರಡು ದಿನಗಳ ನಂತರ ಡಿಸ್ಚಾರ್ಜ್ ಮಾಡ್ತೀನಿ ಅಂತ ಅಂದಿದಾರೆ.. ನಿನಗೆ ಏನೇ ಬೇಕಿದ್ರೂ, ನನ್ನ ಮೊಬೈಲ್‌ಗೆ ಫೋನು ಮಾಡು..'' ಎಂದು ಹೇಳಿ ಅಲ್ಲಿಂದ ಹೊರಟಿದ್ದ.

ಅಲ್ಲಿಂದ ಸೀದಾ ಶ್ವೇತಾಳ ಮನೆಗೆ ಬಂದ. ಶ್ವೇತಾ ಅವನಿಗಾಗಿಯೇ ಕಾಯುತ್ತಿದ್ದಳು. ''ನೀವು ಏನೂ ವರಿ ಮಾಡ್ಕೋಬೇಡಿ ಶರತ್.. ಎಲ್ಲಾ ಸರಿ ಹೋಗುತ್ತದೆ ಎಂದು ಸಮಾಧಾನ ಹೇಳಿದಳು. ಅವನು ಆ ರಾತ್ರಿ ಅವಳ ಮನೆಯಲ್ಲಿಯೇ ಉಳಿದುಕೊಂಡ. ಚಿದಾನಂದನಿಗೆ ಫೋನು ಮಾಡಿ, ವಿಷಯವನ್ನು ತಿಳಿಸಿದ. ಈ ವಿಷಯವನ್ನು ಬೇರೆ ಯಾರಿಗೂ ಹೇಳ್ಬೇಡಿ'' ಎಂದು ಎಚ್ಚರಿಕೆ ನೀಡಿದ. ಶ್ವೇತಾ ಅವನನ್ನು ತನ್ನೆಡೆಗೆ ಆಕರ್ಷಿಸಿ, ದೇಹ ಸುಖವನ್ನು ನೀಡಿದಳು.

* * *

ವಿಷಯ ತಿಳಿದ ಕೂಡಲೇ ಗಾಬರಿಯಿಂದ, ರಾಜೀವನ ತಂದೆ ತಾಯಿಯರು ಮಗನನ್ನು ನೋಡಲು ಬಂದಿದ್ದರು. ಕಣ್ಣು ಮುಚ್ಚಿ ಮಲಗಿದ್ದ ಮಗನನ್ನು ಸುನಂದ ಎಬ್ಬಿಸಿದಳು. ''ಇದೇನೋ ರಾಜೀವ ಏನಾಗಿ ಹೋಯ್ತೋ.. ನಿನ್ನ ಮದುವೆಯ ದಿನವೇ ಹೀಗೆ ನಡೆದಿದೆ ಇದನ್ನು ನೋಡಿದರೆ, ಯಾರೋ ನಿನಗಾಗದವರು ಬೇಕು ಅಂತಲೇ ಈ ಕೆಲಸ ಮಾಡಿದಾರೆ..'' ತನ್ನ ಅನುಮಾನವನ್ನು ಪ್ರಕಟಿಸಿದಳು.

''ಇಲ್ಲಮ್ಮ, ಇದೊಂದು ಆಕಸ್ಮಿಕ, ನನಗಾಗದವರು ಯಾರಿದಾರೆ?'' ತಾಯಿಯನ್ನು ಸಮಾಧಾನಗೊಳಿಸಲು ಹಾಗೆ ನುಡಿದಿದ್ದರೂ, ಅವನ ಮನಸ್ಸು, ತನಗಾಗದವರು ಯಾರು ಅಂತ

ಲೆಖ್ಖ ಹಾಕುತ್ತಿತ್ತು.

"ಚೈತ್ರಳಿಗೆ, ಯಾರಾದರೂ ಬಾಯ್‌ಫ್ರೆಂಡ್ಸ್‌ಗಳಿದ್ದರೋ ಏನೋ? ನೀನು ಸರಿಯಾಗಿ ವಿಚಾರಿಸದೇ, ಅವಳ ರೂಪಕ್ಕೆ ಮರುಳಾಗಿ, ದುಡುಕಿ ಮೋಸಹೋದೆ.."

"ಇಲ್ಲಮ್ಮ, ಚೈತ್ರಾ ಅಂಥ ಹುಡುಗಿ ಅಲ್ಲ.. ಅವಳು ಪ್ರೀತಿಸಿದ್ದು ನನ್ನನ್ನೇ.." ಆದರೆ ಇದ್ದರೂ ಇರಬಹುದು ಎಂದುಕೊಂಡ, ಅವನ ಕಣ್ಣ ಮುಂದೆ ಚಿದಾನಂದನ ಮುಖ ಬಂದು ನಿಂತಿತ್ತು.

"ಎಂಥಾ ಕೆಲಸವಾಗಿ ಹೋಯ್ತಲ್ಲ, ದುಷ್ಕರ್ಮಿಗಳು ಅವಳನ್ನು ಸುಮ್ಮನೆ ಬಿಟ್ಟಿರ್ತಾರಾ?.. ಪೋಲಿಸರು ಏನಂತಾರೆ?"

"ಅವರ ಕೆಲಸವನ್ನು ಅವರು ಮಾಡ್ತಿದಾರೆ. ಕಿಡ್ನಾಪರ್ಸ್‌ಗೆ ದುಡ್ಡು ಬೇಕಾಗಿದ್ದರೆ ಫೋನು ಮಾಡ್ತಾರೆ. ನನ್ನನ್ನ ಆದಷ್ಟು ಬೇಗ ಮನೆಗೆ ಕರ್‍ಕೊಂಡು ಹೋಗೆ."

"ಸರಿಯಪ್ಪಾ.. ಡಾಕ್ಟರ ಹತ್ರ ಮಾತನಾಡ್ತೀನಿ. ನೀನು ಚಿಂತಿಸ್ಬೇಡ. ನಿನ್ನ ಜೊತೆಗೆ ನಾವು ಇದೀವಿ." ಮಗನ ತಲೆಗೂದಲ ಮೇಲೆ ಬೆರಳುಗಳನ್ನಾಡಿಸಿದಳು.

"ಚಿಂತೆ ಆಗ್ದೇ ಇರುತ್ತೇನಮ್ಮ. ಚೈತ್ರಾ ನನ್ನ ಪತ್ನಿ. ಅವಳು ಎಲ್ಲಿದಾಳೋ ಹೇಗಿದಾಳೋ ಅಂತ ಯೋಚಿಸಿದ್ರೆ ಭಯ ಆಗುತ್ತಮ್ಮ.. ನನ್ನ ಕಾಲನ್ನು ಮುರಿದು, ಜ್ಞಾನ ತಪ್ಪಿಸಿ, ಅವಳನ್ನು ಅಪಹರಿಸಿಕೊಂಡು ಹೋಗಿದಾರೆ.. ಡ್ರೈವರ್ರು ಬದುಕಿದಾನೋ ಇಲ್ಲವೋ ಗೊತ್ತಾಗ್ಲಿಲ್ಲ. ಯಾಕಮ್ಮ ಹೀಗಾಯ್ತು?.."

"ನಾನು ಏನಾದ್ರೂ ಆಡಿದ್ರೆ ನಿಂಗೆ ಇಷ್ಟವಾಗುಲ್ಲ ರಾಜೀವ.. ಅವಳ ಕಾಲ್ಗುಣ ಚೆನ್ನಾಗಿರ್ಲಿಲ್ಲ ಅಂತ ಕಾಣುತ್ತೆ.. ಜಾತಕ ಗೋತ್ರ ಒಂದನ್ನೂ ನೋಡ್ಲಿಲ್ಲ.. ಅವಳನ್ನು ಮದುವೆಯಾಗ್ಬೇಡ ಅಂತ ನಾವು ಹೇಳಿದ್ದಿದ್ರೆ ಒಪ್ಕೋತಿದ್ಯಾ?.. ನಿಮಗೆಲ್ಲಾ ಪ್ರೀತಿ ಪ್ರೇಮವೇ ಹೆಚ್ಚು. ಏನೇನು ಮಾಡ್ಕೊಂಡಿರ್ತೀರೋ.. ನಿನ್ನ ಆಫೀಸ್ನಲ್ಲೇ ಕೆಲಸ ಮಾಡ್ತಿದ್ಲು.. ಶರತ್‌ನ ತಂಗಿ. ಮನೇಲಿ ಹೇಳೋರು ಕೇಳೋರು ಅಂತ ಹಿರಿಯರು ಯಾರೂ ಇರ್ಲಿಲ್ಲ.." ಏನೇನು ದೋಷಗಳಿದ್ವೋ..?"

"ಸುಮ್ನಿರಮ್ಮ ನನ್ನನ್ನು ರೇಗಿಸ್ಬೇಡ.. ನನ್ನ ಅವಳ ಸಂಬಂಧ ಪವಿತ್ರವಾಗಿತ್ತು. ನಾನು ಅವಳ ಮೈ ಮುಟ್ಟಿರಲಿಲ್ಲ. ಮದುವೆಯ ರಾತ್ರಿಗೆ ಅಂತ ನನ್ನ ಪ್ರೇಮವನ್ನು ಜೋಪಾನವಾಗಿ ಮೀಸಲಾಗಿಟ್ಟಿದ್ದೆ.."

"ಮುಗೀತಲ್ಲ ಈಗ?.. ಅವಳು ಇನ್ನು ಪವಿತ್ರವಾಗಿ ಎಲ್ಲಿ ಉಳಿದಿರ್ತಾಳೆ?" ತಾಯಿ ವಿಷದ ಬೀಜವನ್ನು ಬಿತ್ತಿದ್ದಳು. ರಾಜೀವನ ಮುಖ ಕಪ್ಪಿಟ್ಟಿತ್ತು. ಎಂಥಾ ಸ್ಥಿತಿ ಬಂತು, ಗಂಡನಾಗಿ ಅವಳನ್ನು ರಕ್ಷಿಸಲಾಗಲಿಲ್ಲ. ಇನ್ನು ಮುಂದೆ?... ಮುಂದೇನು ಎಂಬ ಪ್ರಶ್ನೆಗೆ ಉತ್ತರ ಸಿಕ್ಕುವಂತಿರಲಿಲ್ಲ...

* * *

ಡಿಸ್ಚಾರ್ಜ್ ಆಗಿ ಮನೆಯನ್ನು ತಲುಪಿದ ಕೂಡಲೇ ರಾಜೀವ ಶರತ್‌ಗೆ ಫೋನು ಮಾಡಿದ. ಎಲ್ಲಿದೀಯ! ಈಗ್ಲೇ ಮನೆಗೆ ಬಾ ನಾನು ನಿನ್ನ ಹತ್ರ ಮಾತಾಡ್ಬೇಕು'' ಅಂತಂದ. ಶರತ್ ಹೆದರಿದ. ಶ್ವೇತಾಳಿಗೆ ಫೋನು ಮಾಡಿದ.

''ಹೋಗಿ ಮಾತಾಡಿ ಶರತ್. ಇಲ್ದಿದ್ರೆ ಅವರಿಗೆ ಅನುಮಾನ ಬರುತ್ತೆ..'' ಎಂದಳು. ಶರತ್ ಸ್ವಲ್ಪ ಹೊತ್ತಿನಲ್ಲೇ ರಾಜೀವನ ಮನೆಗೆ ಬಂದ. ರಾಜೀವನ ಮುಖ ಕೆಟ್ಟು ಹೋದದನ್ನು ಕಂಡ. ಸ್ವಲ್ಪ ಕಳವಳ ಉಂಟಾಗಿತ್ತು.

''ಕಿಡ್ನಾಪ್ ಮಾಡಿದೋರು ನಂಗೆ ಫೋನು ಮಾಡಿದ್ದರು..''

''ಹೌದಾ! ಏನಂದ್ರು?.. ಚೈತ್ರಾಳ ಹತ್ರ ಮಾತಾಡಿದ್ಯಾ?..

''ಇಲ್ಲ.. ನೀನೇನು ಮಾಡ್ತಿದೀಯ?.. ನಿನ್ನ ತಂಗಿ ಕಿಡ್ನಾಪ್ ಆಗಿದಾಳೆ ಎನ್ನುವ ಆತಂಕ, ನಿನ್ನ ಮುಖದಲ್ಲಿ ನಂಗೆ ಕಾಣ್ತಾನೇ ಇಲ್ಲ..''

''ಆತಂಕ ಆಗ್ತಿಲ್ಲ ಅಂತ ನೀನ್ಹೇಗೆ ಹೇಳ್ತೀಯ?.. ಪೋಲಿಸರು ಏನಂತಾರೆ?''

''ಪೋಲಿಸರನ್ನ ಮನೆಗೆ ಕರೆಸೋದು ಬೇಡ, ಅದಕ್ಕೇ ನಿನಗೆ ಫೋನು ಮಾಡಿದೆ.. ಅವರು ಐವತ್ತು ಲಕ್ಷ ಕ್ಯಾಷನ್ನ ಕೇಳ್ತಿದಾರೆ, ಗೊತ್ತಾ?..''

''ಕೊಟ್ಬಿಟ್ಟು ನಿನ್ನ ಹೆಂಡ್ತೀನ ಬಿಡಿಸ್ಕೋ, ಇನ್ನೇನು ಮಾಡುಕ್ಕೆ ಆಗುತ್ತೆ..?''

''ಐವತ್ತು ಲಕ್ಷ!.. ನೀನೇ ಯಾಕೆ ಕೊಡಬಾರದು! ಅವಳು ನಿನ್ನ ತಂಗಿಯೇ ತಾನೇ?.. ಹೇಗಾದರೂ ಹಣಾನ ಒದಗಿಸು.. ನಾನು ಆಮೇಲೆ ಕೊಡ್ತೀನಿ..''

''ನಾನೆಲ್ಲಿಂದ ತರ್ಲಿ ರಾಜೀವ.. ನಿನ್ನ ಹೆಂಡ್ತಿಗಾಗಿ ನೀನು ಇಷ್ಟೂ ಮಾಡುಕ್ಕೆ ಆಗುಲ್ವಾ!..''

''ಇಲ್ಲ, ಶರತ್.. ಅವರು ಮತ್ತೆ ಫೋನು ಮಾಡಿದ್ರೆ ಹೇಳಿಬಿಡ್ತೀನಿ, ಏನಾದ್ರೂ ಮಾಡ್ಕೊಳ್ಳಿ.. ನಾನು ಒಂದು ಬಿಡಿಗಾಸನ್ನು ಕೊಡುಲ್ಲ ಅಂತ..''

''ರಾಜೀವ ಏನು ಮಾತಾಡ್ತಿದೀಯ.. ಚೈತ್ರನ ಮೇಲೆ ನಿಂಗೆ ಪ್ರೀತಿ ಇಲ್ವಾ!'' ಅವರುಗಳು ಅವಳನ್ನು ಮುಗಿಸಿಬಿಡ್ತಾರೆ..''

''ಸರಿ ಹಾಗಾದ್ರೆ, ಅವಳು ನಿನಗೆ ತಂಗಿ ಕೂಡಾ.. ನಾನು ಅವಳನ್ನು ಮದುವೆಯಾಗಿದ್ರೂ ಅವಳ ಮೈ ಮುಟ್ಟಿರ್ಲಿಲ್ಲ.. ಹೆಂಡತಿಯಿಂದ ಸಿಗುವ ಸುಖ ಕೂಡಾ ನಂಗೆ ಸಿಕ್ಕಲಿಲ್ಲ.. ಈಗ ಈ ಹಣೇ ಬರಹ.. ನಾನು ಇಪ್ಪತ್ತೈದು ಲಕ್ಷಕ್ಕೆ ಅವರನ್ನು ಒಪ್ಪಿಸ್ತೀನಿ, ನೀನು ಕೊಟ್ಟು ನಿನ್ನ ತಂಗೀನ ಬಿಡಿಸ್ಕೋ..''

''ಇಪ್ಪತ್ತೈದು ಲಕ್ಷ? ನಾನೆಲ್ಲಿಂದ ತರ್ಲೋ ರಾಜೀವ.. ನನ್ನ ಅಕೌಂಟ್‌ನಲ್ಲಿ ಎಷ್ಟು ಹಣ ಇದೆ ಅಂತ ನಿಂಗೇ ಗೊತ್ತು. ಮನೆಯ ಮೇಲೆ ಸಾಲ ತಗೊಂಡಿದೀನಿ..''

''ಇದಕ್ಕೆಲ್ಲ ನಾನೇನು ಹೇಳಲಿ!.. ನಿನ್ನ ತಂಗಿಯ, ಮಾನ, ಪ್ರಾಣ, ಹೆಚ್ಚು ಅಂತ ನಿನಗೆ ಅನ್ನಿಸ್ತಿಲ್ವಾ!..''

"ಅನ್ನಿಸುತ್ತೆ ರಾಜೀವ.. ಆದರೆ ನನ್ನ ಕೈಯಲ್ಲಿ ಹಣವಿಲ್ಲ. ನೀನೇ ಹೇಗಾದ್ರೂ ಹೊಂದಿಸು. ನಿಧಾನವಾಗಿ ನಾನು ತೀರಿಸ್ತೀನಿ.."

"ನಿನ್ನನ್ನ ಹೇಗೆ ನಂಬಲಿ!.. ಬಾಂಡ್ ಪೇಪರ್ ಮೇಲೆ ಬರೆದುಕೊಡು."

"ಈ ಹೊತ್ನಲ್ಲೂ ಬಿಸಿನೆಸ್ ಮೈಂಡ್ ನಿಂದು... ನೀನು ನಿಜವಾಗ್ಲಿಯೂ ಅವಳನ್ನು ಪ್ರೀತಿಸ್ತಿದೀಯ ಅಂತ ನಂಗೆ ಅನ್ನಿಸ್ತಿಲ್ಲ, ಅವಳು ಮೋಸ ಹೋದ್ಲು ಅಷ್ಟೇ.."

"ನಂಗೆ ಮೋಸ ಆದದ್ದು ನಿಂಗೆ ಕಾಣುಲ್ವಾ!.. ಪ್ರೀತಿಸಿದೆ, ಮದುವೆಯಾದೆ.. ಒಂದು ರಾತ್ರಿ ಕೂಡ ಅವಳ ಜೊತೆ ಮಲಗಲಿಲ್ಲವಲ್ಲೋ..?" ರಾಜೀವ ಪದೇ ಪದೇ ಈ ಮಾತುಗಳನ್ನಾಡಿದಾಗ, ಶರತ್‌ಗೆ ಯೋಚನೆ ಆಗಿತ್ತು....ಸುಮ್ಮನೇ ನಿಂತ.

"ಏನು ಯೋಚಿಸ್ತಾ ನಿಂತು ಬಿಟ್ಟೆ. ಪೋಲಿಸ್ ಸ್ಟೇಷನ್‌ಗೆ ಹೋಗಿ, ಕಿಡ್ನಾಪ್ ಮಾಡಿರೋರು ಐವತ್ತು ಲಕ್ಷ ರೂಪಾಯಿಗಳನ್ನು ಕೇಳಿದಾರೆ.. ಈಗೇನ್ಮಾಡೋದು ಅಂತ ಕೇಳ್ಕೊಂಡು ಬಾ.. ಹಾಗೇ ಅವರ ಕೈಗೆ ಒಂದಿಷ್ಟು ನೋಟುಗಳನ್ನು ತುರುಕು, ಚುರುಕಾಗ್ತಾರೆ.."

"ಹಣ..ಹಣ.. ನನ್ನ ಹತ್ರವೇ ಎಲ್ಲಾ ಖರ್ಚು ಮಾಡಿಸ್ಬೇಕು ಅಂತ ನೀನು ನಿರ್ಧರಿಸಿರುವ ಹಾಗಿದೆ, ಯಾಕೆ ಹೀಗೆ ಮಾತಾಡ್ತಿದೀಯ!.."

"ನನ್ನ ತಲೆ ಕೆಟ್ಟು ಹೋಗಿದೆ ಶರತ್.. ಈಗ ಹೆಚ್ಚು ಹೊತ್ತು ನನ್ನ ಎದುರಿಗೆ ನಿಂತ್ಕೋ ಬೇಡ. ಹೊರಟು ಹೋಗು. ಪೋಲಿಸರು, ಏನಂದ್ರು! ಏನಾಯ್ತು ಅಂತ ಫೋನಿನಲ್ಲಿ ತಿಳಿಸ್ತಿರು. ಈಗ ಹೋಗು.."

ಅಲ್ಲಿಂದ ಬೇಗ ಹೋದರೆ ಸಾಕು ಎಂದು ಕಾಯುತ್ತಿದ್ದ ಶರತ್, ಅಲ್ಲಿಂದ ಹೊರಟು ಬಿಟ್ಟ. ರಾಜೀವನ ಮಾತುಗಳು ಅನುಮಾನ ಹುಟ್ಟಿಸುವಂತಿದೆ. ಅವನಿಗೆ ನನ್ನ ಮೇಲೆ ಅನುಮಾನ ಬಂದಿರಬಹುದೇ ಎಂಬು ಸಂಶಯ ಕಾಡಿತು. ತಾನೀಗ ಪೋಲಿಸ್ ಸ್ಟೇಷನ್‌ಗೆ ಹೋದರೆ, ಅವರುಗಳು ಏನು ಪ್ರಶ್ನೆ ಕೇಳುವರೋ, ತನ್ನ ಉತ್ತರ ತನ್ನನ್ನು ಎಲ್ಲಿ ಸಿಕ್ಕಿಸಿ ಬಿಡುವುದೋ ಎಂದು ಹೆದರಿ ತನ್ನ ಮನೆಗೆ ಬಂದು ಬಿಟ್ಟ. ಶ್ವೇತಾಳಿಗೆ ಫೋನು ಮಾಡಿ, ಈಗಲೇ ಮನೆಗೆ ಬಾ ಅಂತ ಕರೆದ. ಅವಳು ಬರಲು ಒಪ್ಪಲಿಲ್ಲ.

"ಅಲ್ಲಿ ನಿಮ್ಮ ಮನೇಲಿ, ಚಿದಾನಂದ, ಅನ್ನಪೂರ್ಣಮ್ಮ ಇರ್ತಾರೆ, ಚೈತ್ರಾ ಮನೇಲಿ ಇಲ್ಲದಿರುವಾಗ ನಾನು ಅಲ್ಲಿಗೆ ಬರುವುದು ಸರಿ ಅಲ್ಲ. ಅಲ್ಲದೇ ಅವರುಗಳಿಗೆ ಚೈತ್ರಾ ಕಿಡ್ನಾಪ್ ಆಗಿದಾಳೆ ಅಂತ ಸಹ ಗೊತ್ತಿರಲಾರದು ಅಲ್ವಾ!.."

"ಏನೋ ನಂಗೊತ್ತಿಲ್ಲ." ಎಂದು ಹೇಳಿ ಲೈನ್ ಕಟ್ ಮಾಡಿದ್ದ.

ಅಲ್ಲಿಂದ, ತಂದೆಯನ್ನು ನೋಡುವ ನೆವ ಮಾಡಿಕೊಂಡು ಅವರು ಮಲಗಿದ್ದ ರೂಮಿಗೆ ಬಂದ. ಪುಸ್ತಕವನ್ನೋದುತ್ತಾ ಕುಳಿತಿದ್ದ ಚಿದಾನಂದ ಎದ್ದು ನಿಂತ.. ಕಣ್ಣು ಮುಚ್ಚಿ ಮಲಗಿದ್ದ ತಂದೆಯ ಮುಖವನ್ನೇ ನೋಡಿದ. ಮನಸ್ಸು ಕಲ್ಲಾಗಿತ್ತು. ಇಷ್ಟೆಲ್ಲಾ ನಡೆಯುವುದಕ್ಕೆ ಇವರೇ ಕಾರಣ. ಇವರು ಸರಿಯಾಗಿದ್ದಿದ್ರೆ, ತನಗೆ ಯಾವ ಜವಾಬ್ದಾರಿಯೂ ಇರುತ್ತಿರಲಿಲ್ಲ. ಮನಸ್ಸು

ಕೆಟ್ಟ ಆಲೋಚನೆಗಳ ದಾರಿಯನ್ನು ಹಿಡಿಯುತ್ತಿರಲಿಲ್ಲ ಎಂದೆನಿಸಿತ್ತು. ಚೈತ್ರಾಳ ಕಡೆಗೆ ಮನಸ್ಸು ತಿರುಗಿತ್ತು.. ಈ ಗೊಂದಲದಲ್ಲಿ ಚೈತ್ರಾ ಮನೆಗೆ ವಾಪಸ್ಸು ಬರದೇ ಇದ್ದರೇ ಅಂತ ಅನ್ನಿಸಿದಾಗ, ಎದೆಯ ಬಡಿತ ತೀವ್ರಗೊಂಡಿತ್ತು.. ಹೀಗೆಲ್ಲಾ ಆಗಲು, ರಾಜೀವನೂ ಕಾರಣ.. ಅವನನ್ನು ಸುಮ್ಮನೇ ಬಿಡಬಾರದು.. ಆದರೆ ತಾನು ಯಾವ ರೀತಿಯಲ್ಲೂ ಸಿಕ್ಕಿಕೊಳ್ಳಬಾರದು ಅಂತಂದುಕೊಂಡ. ಈ ವಿಷಯದಲ್ಲಿ ತನಗೆ ಯಾರು ನೆರವಾಗಬಲ್ಲರು?.. ಚಿದಾನಂದ ಆಪ್ತನಾಗಬಲ್ಲನೆ?.. ಅವನಿಗೆ ಎಲ್ಲವನ್ನೂ ತಿಳಿಸುವುದು ಎಷ್ಟರ ಮಟ್ಟಿಗೆ ಕ್ಷೇಮ ಎಂದು ಯೋಚಿಸುತ್ತಿದ್ದ.. ಫೋನು ರಿಂಗಾಗಿತ್ತು. ಬೆಚ್ಚಿ, ರಿಸೀವರ್‌ನೆತ್ತಿಕೊಂಡ. ಅತ್ತಲಿಂದ ರಾಜೀವ ಮಾತಾಡಿದ್ದ.

"ಮನೆಗ್ಯಾಕೆ ಫೋನು ಮಾಡ್ದೆ!.. ಏನು ವಿಷಯ?" ಬಿರುಸಾಗಿ ಕೇಳಿದ.

"ಮನೇಲಿ ಕೂತ್ಕೊಂಡು ಏನು ಮಾಡ್ತಿದೀಯ ಶರತ್..? ಈ ಹೊತ್ನಲ್ಲಿ ನಿಂಗೆ ಆತಂಕವಾಗ್ತಿಲ್ವಾ?.." ಎತ್ತರದ ಧ್ವನಿಯಲ್ಲಿ ಕೇಳಿದ್ದ.

"ನೀನು ಕಿರುಚ್ಬೇಡ.. ಡ್ಯಾಡಿಗೆ ಹುಶಾರಿರಲಿಲ್ಲ.. ಡಾಕ್ಟರು ಬಂದಿದಾರೆ. ಇನ್ನೊಂದು ಸ್ವಲ್ಪ ಹೊತ್ತು ಬಿಟ್ಟು ಮಾತಾಡ್ತೀನಿ.. ಈಗ ಫೋನನ್ನಿಡು.." ಇವನೂ ಕೂಗಾಡಿದ್ದ.

"ಸರಿ, ಇನ್ನೈದು ನಿಮಿಷ ಬಿಟ್ಟು ನಾನೇ ಮಾತಾಡ್ತೀನಿ. ನೀನು ಮಾಡುಲ್ಲ ಅಂತ ನಂಗೆ ಗೊತ್ತು.." ರಾಜೀವನ ಧ್ವನಿಯಲ್ಲಿ ಸಿಟ್ಟು ಇದ್ದುದನ್ನು ಗಮನಿಸಿದ. ರಿಸೀವರ್‌ನ್ನಿಟ್ಟು ಕೆಳಗಿಳಿದು ಬಂದ. "ನೀನು ಆಪ್ತ ಸ್ನೇಹಿತನಾಗಿ, ಮೋಸ ಮಾಡದೇ ಇದ್ದಿದ್ದರೆ, ನಾನೇ ನನ್ನ ತಂಗಿಯನ್ನು, ಪ್ರೀತಿ ವಿಶ್ವಾಸದಿಂದ ಮದುವೆ ಮಾಡಿಕೊಡ್ತಿದ್ದೆ" ಎಂದು ತನ್ನಲ್ಲೇ ಹೇಳಿಕೊಂಡು ಕೆಳಗಿಳಿದು ಬಂದು ಕುಳಿತ. ಹತ್ತು ನಿಮಿಷಗಳ ನಂತರ ಮತ್ತೆ ಫೋನು ರಿಂಗಾಗಿತ್ತು.

"ಶರತ್, ನಿಂಗೆ ಆತಂಕವೇ ಆಗ್ತಿಲ್ವಾ ಅಂತ.. ಪೋಲಿಸ್ ಸ್ಟೇಷನ್‌ಗೆ ನೀನು ಯಾಕೆ ಹೋಗ್ಲಿಲ್ಲ?.. ನನ್ನ ಕಾಲಿನ ಮೂಳೆ ಮುರಿದೇ ಇದ್ದಿದ್ರೆ, ನಾನೇ ಹೋಗ್ತಿದ್ದೆ. "ಚೈತ್ರಾಳ ಪ್ರಾಣಕ್ಕೆ ಏನಾದ್ರೂ ಅಪಾಯ ಒದಗಿದ್ರೆ ನಾನು ನಿನ್ನನ್ನು ಸುಮ್ಮನೇ ಬಿಡುಲ್ಲ."

"ಅರೇ..ನಾನೇನ್ಮಾಡ್ದೆ!.. ನೀನು ಹೀಗೆ ಅನಾವಶ್ಯಕವಾದ ಮಾತನ್ನಾಡುವುದನ್ನು ಕೇಳಿದ್ರೆ ನಂಗೆ ನಿನ್ಮೇಲೇ ಅನುಮಾನ ಬರ್ತಿದೆ.. ಪೋಲಿಸ್ ಕಂಪ್ಲೆಂಟ್ ಕೊಟ್ಟಿದ್ದಾಗಿದೆಯಲ್ಲ ಅವರು ನೋಡ್ಕೋತಾರೆ ಬಿಡು.."

"ಹಾಗೆ ಕೈ ಕಟ್ಟಿ ಕೂತಿರುಕ್ಕೆ ನನ್ನ ಕೈಲಿ ಆಗುಲ್ಲ ಶರತ್.. ಈಗ ಸ್ವಲ್ಪ ಹೊತ್ತಿನ ಕೆಳಗೆ ಕಿಡ್ನಾಪರ್ ಮತ್ತೆ ಫೋನು ಮಾಡಿದ್ದ.. ಮೂವತ್ತು ಲಕ್ಷ ರೂಪಾಯಿಗೆ ಒಪ್ಪಿಸಿದೀನಿ. ಆದಷ್ಟು ಬೇಗ ಹಣಕ್ಕೆ ವ್ಯವಸ್ಥೆ ಮಾಡು..." ಎಂದ.

"ಇಷ್ಟು ಬೇಗ ನಿನ್ನ ಮಾತಿಗೆ ಅವರು ಒಪ್ಪಿಕೊಂಡರು ಅಂತಂದ್ರೆ, ಅವರು ನಿನ್ನ ಕಡೆಯವರೇ ಇರ್ಬೇಕು.. ಇಲ್ಲ ನಿನ್ನದೇ ಕೈವಾಡವಿರಬಹುದಾ?"

"ಅದೇ ಮಾತನ್ನ ನಾನು ನಿನಗೆ ತಿರುಗಿಸಿ ಹೇಳಿದರೆ?.. ನೀನೆಷ್ಟು ಸಾಚಾ ಅಂತ ನಂಗೆ ಚೆನ್ನಾಗಿ ಗೊತ್ತು.. ನಿನಗೆ ನಿನ್ನ ತಂಗಿಯ ಮೇಲೆ ಪ್ರೀತಿ ಇರ್ಲಿಲ್ಲ.. ನೀನೇ ಯಾಕೆ ಈ ಕಿಡ್ನಾಪ್

ಮಾಡಿಸಿರಬಾರದು? ನನ್ನನ್ನ ಕೆಟ್ಟವನನ್ನಾಗಿ ಮಾಡುಕ್ಕೆ?'' ಶರತ್ ಬೆವೆತು ಹೋದ.

''ಛೀ..ಎಂಥಾ ಕೆಟ್ಟ ಆಲೋಚನೆ ನಿನ್ನದು?''

''ಈ ಅನುಮಾನಗಳಿಗೆ ಪುರಾವೆ ಸಿಕ್ಕ ದಿನ ನಾನು ನಿನ್ನನ್ನು ಸುಮ್ಮನೆ ಬಿಡುವುದಿಲ್ಲ.''

''ನೀನು ಹೀಗೆಲ್ಲಾ ನನ್ನ ಹತ್ರ ಮಾತಾಡಿದೆ. ಅನುಮಾನ ಪಟ್ಟೆ ಅಂತ ತಿಳಿದರೆ, ಚೈತ್ರಾ, ನಂಗೆ ಅವಮಾನ ಮಾಡ್ದ ಅಂತ ನಿನ್ನನ್ನು ತರಾಟೆಗೆ ತಗೋತಾಳೆ ಅಷ್ಟೇ..''

''ಮೊದಲು ಅವಳು ವಾಪಸ್ಸು ಬರಲಿ, ಅವಳು ನಿನ್ನ ಪರವೋ, ನನ್ನ ಪರವೋ ಅಂತ ಅವಳೇ ತಿಳಿಸ್ತಾಳೆ.. ಮೊದಲು ನಿಯತ್ತಿದ್ದರೆ, ನಿನ್ನ ತಂಗಿಯನ್ನು ಕಾಪಾಡು, ಅವರು ಕೇಳಿದಷ್ಟು ಹಣಕ್ಕೆ ವ್ಯವಸ್ಥೆ ಮಾಡು.''

''ರಾಜೀವ, ಆ ಕಿಡ್ನಾಪರ್ಸ್ ನಂಬರನ್ನು ನನಗೆ ಕೊಡು. ನಾನು ಅವರ ಹತ್ರ ಮಾತಾಡ್ತೀನಿ.'' ರಾಜೀವ ಕೆಟ್ಟದಾಗಿ ನಕ್ಕ.

''ಸ್ವಲ್ಪವಾದ್ರೂ ಕಾಮನ್ ಸೆನ್ಸ್ ಬೇಡ್ವಾ ಶರತ್, ಕಿಡ್ನಾಪ್ ಮಾಡ್ದೋರು ಯಾರಾದ್ರೂ, ಅವರ ಫೋನಿನ ನಂಬರನ್ನಾಗಲೀ, ವಿಳಾಸವನ್ನಾಗಲೀ ನಮಗೆ ಕೊಡ್ತಾರಾ? ಅವರುಗಳು ಮತ್ತೆ ಫೋನು ಮಾಡಿದಾಗ, ನಾನು ಅವರಿಗೆ ನಿನ್ನ ನಂಬರನ್ನು ಕೊಡ್ತೀನಿ. ನೀನು ಹಣಕ್ಕೆ ವ್ಯವಸ್ಥೆ ಮಾಡಿದೀಯ ಅಂತಲೂ ಹೇಳ್ತೀನಿ.''

''ಒಂದೆರಡು ದಿನಗಳ ಸಮಯವಾದ್ರೂ ಬೇಕಲ್ಲೋ ರಾಜೀವ...''

''ನಿನ್ನ ತಂಗಿ ಕಣ್ಮರೆಯಾಗಿ ನಾಲ್ಕು ದಿನಗಳಾಯ್ತು.. ಟೈಂ ಕೇಳ್ತಾನೇ ಇದ್ದರೆ ಹೆಣವಾಗಿ ವಾಪಸ್ಸು ಬರ್ತಾಳೆ ಅಷ್ಟೇ..''

''ಹೀಗೆಲ್ಲಾ ಮಾತಾಡ್ಬೇಡ ನೀನು.. ನಂಗೆ ದುಃಖವಾಗುತ್ತೆ.''

''ಸರಿ, ನಾನೂ ಸಮಯ ಕೊಡಿ ಅಂತ ಕೇಳ್ತೀನಿ.. ಹಾಗೇ ನಿನ್ನ ಫೋನು ನಂಬರನ್ನು ಕೊಡ್ತೀನಿ.. ಅವಿವೇಕದಿಂದ ಎಲ್ಲಾ ಹಾಳು ಮಾಡ್ಬೇಡ..''

''ಇಲ್ಲ, ರಾಜೀವ, ಥ್ಯಾಂಕ್ಸ್..'' ರಾಜೀವ ಮಾತನ್ನು ಮುಗಿಸಿದ್ದ. ಈ ಎಲ್ಲಾ ಸಂಭಾಷಣೆಗಳನ್ನು ಚಿದಾನಂದ ಎಚ್ಚರಿಕೆಯಿಂದ ಕೇಳಿಸಿಕೊಂಡಿದ್ದ.

* * *

''ರಾಜೀವ, ಅಪಹರಣಕಾರರು ಫೋನು ಮಾಡಿದ್ದರು. ಊರಾಚೆ ಇರುವ ಪಾಳು ಬಿದ್ದಿರುವ ದೇವಸ್ಥಾನದ ಹಿಂದೆ ಇರುವ ಬಾವಿಯ ಹತ್ತಿರ ಸಾಯಂಕಾಲ ಐದು ಗಂಟೆಯ ಹೊತ್ತಿಗೆ ಬರ ಹೇಳಿದ್ದಾರೆ. ನೀನೂ ಬರ್ತೀಯಾ?'' ಶರತ್ ಕೇಳಿದ್ದ.

''ಯಾವ ದೇವಸ್ಥಾನವೋ, ಯಾವ ಪಾಳು ಬಾವಿಯೋ, ನೀನೇ ಹೋಗಿ ಎಲ್ಲವನ್ನೂ ಕ್ಲಿಯರ್ ಮಾಡ್ಕೊಂಡು ಬಾ.. ನೀನೇ ತಾನೇ ಹಣ ಕೊಡ್ತಾ ಇರೋನು.. ಅವರಿಗೆ ನಿನ್ನ ಗುರುತುಗಳನ್ನು ಹೇಳಿದೀಯ ತಾನೇ.. ನಿನಗೆ ಒಬ್ಬನಿಗೇ ಹೋಗುಕ್ಕೆ ಭಯ ಆದರೆ, ಚಿದಾನಂದನನ್ನು

ಕರ್‍ಕೊಂಡು ಹೋಗು.. ಬಾಡಿಗಾರ್ಡ್ ಆಗಿರ್ತಾನೆ.''

''ಸರಿ, ಹಾಗೇ ಮಾಡ್ತೀನಿ, ಅವಳನ್ನು ಸೀದಾ ನಿನ್ನ ಮನೇಗೇ ಕರ್‍ಕೊಂಡು ಬರ್ತೀನಿ.''

''ಬೇಡ ಶರತ್.. ಸಧ್ಯಕ್ಕೆ ಅವಳು ನಿನ್ನ ಮನೇಲೇ ಇರಲಿ.. ಅವಳು ಆ ಶಾಕ್‌ನಿಂದ ಹೊರಕ್ಕೆ ಬರಲಿ. ಅಲ್ಲದೇ ಇಲ್ಲಿಗೆ ಬಂದು ಏನು ಮಾಡ್ತಾಳೆ? ನಾನೂ ಕಾಲು ಮುರಿದುಕೊಂಡು ಮಲಗಿದೀನಿ. ನನ್ನ ಮೈಂಡೂ ಸರಿಯಾಗಿಲ್ಲ..''

''ಹೀಗೆ ಮಾತಾಡ್ಬೇಡ ರಾಜೀವ, ಭಯ ಆಗುತ್ತೆ..''

''ಮತ್ತಿನ್ನೇನು ಆರತಿ ಮಾಡಿ, ಸ್ವಾಗತ ಕೋರ್‍ಲಾ.. ನನ್ನ ತಲೆ ಕೆಟ್ಟು ಹೋಗಿದೆ.''

''ಅವಳು ನಿನ್ನನ್ನು ನೋಡ್ಬೇಕು. ನಿನ್ಹತ್ರ ಮಾತಾಡ್ಬೇಕು ಅಂತ ಹಠ ಹಿಡಿದ್ರೆ?..''

''ತಿಳುವಳಿಕೆ ಹೇಳು. ನಾಲ್ಕು ದಿನ ಕಳೀಲಿ.. ಸುಧಾರಿಸಿಕೊಳ್ಳಲಿ. ಪೋಲಿಸರು ಬಂದು ವಿಚಾರಿಸ್ತಾರೆ. ಈ ಗಲಾಟೆಯೆಲ್ಲಾ ಮುಗೀಲಿ.. ಆಮೇಲೆ ನಾನೇ ಅವಳ ಹತ್ರ ಮಾತಾಡ್ತೀನಿ.''

''ಅವಳು ಕುಗ್ಗಿ ಹೋಗ್ತಾಳೆ ಕಣೋ...'' ಈಗ ನಿನ್ನ ಬೆಂಬಲ ಬೇಕು ಅವಳಿಗೆ..''

''ನನಗೆ ಎಲ್ಲಾ ಗೊತ್ತು. ನಾನು ದಡ್ಡನಲ್ಲ. ನಾನು ಹೇಳಿದಷ್ಟನ್ನು ಕೇಳು'' ಎಂದು ಹೇಳಿ ರಿಸೀವರ್‌ನ ಕುಕ್ಕಿದ್ದ. ಚಿದಾನಂದ ಶಬ್ಧವಾಗದಂತೆ ರಿಸೀವರ್‌ನ್ನಿಟ್ಟು, ಶರತ್ ಮಹಡಿ ಹತ್ತಿ ಬರುವನೇನೋ ಎಂದು ಅವನಿಗಾಗಿ ಕಾದ. ಆದರೆ ಶರತ್ ಮಹಡಿ ಹತ್ತಿ ಬರಲಿಲ್ಲ.

ಅಲ್ಲಿಂದ ಸೀದಾ ಶ್ವೇತಾಳ ಮನೆಗೆ ಬಂದ. ಬಾಗಿಲನ್ನು ತೆರೆದ ಶ್ವೇತಾ ಮುಗುಳ್ನಗುತ್ತಾ ಸ್ವಾಗತಿಸಿದಾಗ ಅವನು ಅಚ್ಚರಿಗೊಂಡ. ಒಳ ಬಂದವನಿಗೆ ಮತ್ತು ಅಚ್ಚರಿ ಕಾದಿತ್ತು.

''ಅರೇ! ಚೈತ್ರಾ..ನೀನಿಲ್ಲಿ! ಎಲ್ಲಿಂದ ಬಂದ್ಯೇ?''

''ನಾನೆಲ್ಲಿಗೆ ಹೋಗಿದ್ದೆ? ಇಲ್ಲೇ ಇದ್ದೆ ನಿನಗೆ ಗೊತ್ತಾಗ್ಲಿಲ್ಲ ಅಷ್ಟೇ..''

''ಮತ್ತೆ.. ಯಾಕೆ ಸತಾಯಿಸ್ದೆ!.. ನನ್ನೆದುರಿಗೆ ಬಂದು ನನ್ಹತ್ರ ಮಾತಾಡಿದ್ದಿದ್ರೆ ನಿನ್ನ ಗಂಟೇನು ಹೋಗ್ತಿತ್ತು?'' ಶ್ವೇತಾ ಕೂಡಾ ನೀನು ಇಲ್ಲಿದೀಯ ಅಂತ ಹೇಳಲಿಲ್ಲ.''

''ಹೀಗೆಲ್ಲಾ ಮಾತಾಡ್ಬೇಡ. ನಾನೀಗ ರಾಜೀವನ ಪತ್ನಿ.. ಅದ್ಸರಿ, ನೀನು ಇಲ್ಲಿಗೆ ಬಂದಿದ್ದನ್ನು ರಾಜೀವನ ಕಡೆಯವರ್‍ಯಾರೂ ನೋಡ್ಲಿಲ್ಲ ತಾನೇ?..''

''ನಂಗೇನ್ಗೊತ್ತು! ಆದರೆ ಅವನಿಗೆ ಅನುಮಾನ ಬಂದಿದ್ರೂ ಬಂದಿರಬಹುದು. ಏನೇನೋ ಕೇಳ್ದ.. ಅದ್ಸರಿ.. ಶ್ವೇತಾ ಹೇಳಿದ್ಲು. ಇದು ನಿನ್ನದೇ ಪ್ಲ್ಯಾನ್ ಅಂತ. ಆದರೆ ಮೊದಲು ಅಂದುಕೊಂಡಿದ್ದೇ ಬೇರೆ ಅಲ್ವಾ?'' ಅದನ್ಯಾಕೆ ಬದಲಾಯಿಸ್ದೆ!

''ಹಾಗೇ ಇದ್ದಿದ್ರೆ.. ಇಷ್ಟು ಹೊತ್ತಿಗೆ ನಾವು ನಮ್ಮ ಹನಿಮೂನ್ ಮುಗಿಸಿಕೊಂಡು ಬರುವ ಸಮಯ ಆಗ್ತಿತ್ತು. ಈಗ ನಾನು ಇನ್ನೂ ಸೇಫ್ ಆಗಿದೀನಿ.'' ಅವಳು ನಕ್ಕಳು.

''ಅವನಿಗೆ ಅದೇ ಕೋಪ.. ನೀನು ಅವನಿಗೆ ಹೀಗೆ ಮೋಸ ಮಾಡ್ಬಾರ್ದಾಗಿತ್ತು.''

''ಇದರಲ್ಲಿ ಮೋಸ ಏನು! ನನ್ನನ್ನು ನಾನು ರಕ್ಷಿಸಿಕೊಂಡೆ....ನನಗೆ ಅವನ ಮೇಲೆ ನಂಬಿಕೆ

ಇರಲಿಲ್ಲ.''

''ಅವನು ನಿನ್ನನ್ನು ಪ್ರೀತಿಸ್ತಾನೆ ಕಣೇ...ಹೋಗ್ಲಿ ಇಷ್ಟು ಬೇಗ ಈ ಎಲ್ಲಾ ವ್ಯವಸ್ಥೆ ಹೇಗೆ ಮಾಡ್ದೆ?.. ನಿಂಗೆ ಯಾರು ಸಹಾಯ ಮಾಡಿದ್ರು..''

''ಇನ್ಯಾರು ಈ ಶ್ವೇತಾ..ಹಾಗೂ ಇವಳ ಅಣ್ಣ ಗಿರಿ. ಅವನ ಕಡೆಯ ಗೂಂಡಾಗಳು ಒಂದಿಬ್ರು....'' ನೀನು ಎಲ್ಲರಿಗೂ ಹಣ ಕೊಡ್ತೀನಿ ಅಂತ ಹೇಳಿದ್ಯಂತಲ್ಲ.'' ಮತ್ತೂ ಸೇರಿಸಿದಳು.

ಅವರ್‍ಯಾರೂ ನಿಂಗೆ ತೊಂದರೆ ಕೊಡ್ಲಿಲ್ಲ ತಾನೇ...ಶ್ವೇತಾ, ನಿನ್ನ ಅಣ್ಣ ನಿಂಗೆ ಸಹಾಯ ಮಾಡ್ದ ಅಂತ ಯಾಕೆ ಹೇಳ್ಲಿಲ್ಲ. ಯಾರೋ ಪರಿಚಯದವರು ಅಂತ ಹೇಳ್ದೆ...''

''ನೀವು ಊಹಿಸಬಹುದಾಗಿತ್ತು ಅಲ್ವಾ ಶರತ್. ನಿಮ್ಮ ಆಲೋಚನೆಗಳೇ ಬೇರೆ ಇತ್ತು.''

''ನನ್ನ ತಲೆ ಟೆನ್ಷನ್‌ನಿಂದ ತುಂಬಿ ಹೋಗಿತ್ತು. ರಾಜೀವ ಬೇರೆ ಏನೇನೋ ಮಾತಾಡ್ತಿದ್ದ. ಅವನೇನಾದ್ರೂ ಅನುಮಾನ ಹೆಚ್ಚಾಗಿ ಪೋಲಿಸ್ ಕಂಪ್ಲೆಂಟ್ ಕೊಟ್ಟರೆ ಅನ್ನುವ ಭಯ ಕಾಡ್ತಿತ್ತು. ಒಂದೊಂದ್ಸಲ ಅವನೇ ಏನಾದ್ರೂ ಕಿತಾಪತಿ ಮಾಡ್ತಿದಾನಾ ಅನ್ನೋ ಸಂಶಯ ಬರ್ತಿತ್ತು. ಯಾರಿಗೂ ಹೇಳುಕ್ಕಿಲ್ಲ, ಅನುಭವಿಸುಕ್ಕಿಲ್ಲ.''

''ಅದಕ್ಕೇ ಇಲ್ಲಿಗೆ ಓಡಿ ಓಡಿ ಬರ್ತಿದ್ಯಾ?'' ಶರತ್ ಕೆಂಪಾದ. ಶ್ವೇತಾ ನಾಚಿದಳು. ಚಿದಾನಂದನ ಹತ್ರ ಮಾತನ್ನಾಡಬಹುದಾಗಿತ್ತಲ್ಲ..''

''ಅವನ ಹತ್ರ ಏನ್ಮಾತು? ಅವನಿಗೇನಾದ್ರು ತಿಳಿದಿದ್ರೆ, ಡ್ಯಾಡೀನ ನೋಡ್ಕೊಳ್ಳೋದನ್ನಾ ಬಿಟ್ಟು ನನ್ನ ಹಿಂದೆ ಮುಂದೆ ಸುತ್ತುತ್ತಿದ್ದ. ಪತ್ತೇದಾರಿ ಕೆಲಸ ಮಾಡ್ತಿದ್ದ. ಪತ್ತೇದಾರಿ ಕಾದಂಬರಿಗಳನ್ನ ಓದಿದ ಮಾತ್ರಕ್ಕೆ ಪತ್ತೇದಾರನಾಗಲು ಸಾಧ್ಯವಿಲ್ಲ.''

ಶ್ವೇತಾ ಸರ್‍ರನೆ ಚೈತ್ರಾಳ ಮುಖ ನೋಡಿದಳು. ಅವಳು ಸುಮ್ಮನಿರು ಎನ್ನುವಂತೆ ಕಣ್ಣು ಸಂಜ್ಞೆ ಮಾಡಿದಳು. ರಾಜೀವನ್ನ ನೋಡೋಕೆ ಯಾವಾಗ ಹೋಗ್ತೀಯೆ?.. ಪಾಪ ಕಾಲು ಮುರಿದುಕೊಂಡು ಮಲಗಿದಾರೆ.. ಹಾಗೇ ಅಪ್ಸೆಟ್ ಆಗಿರ್ತಾರೆ.. ನಿನ್ನನ್ನ ಕಂಡರೆ ಸಮಾಧಾನವಾಗಬಹುದು..''

''ಇಲ್ಲ, ಅವನು ಇವಳನ್ನು ಈಗಲೇ ನೋಡಿ ಮಾತನಾಡಿಸುವ ಮೂಡ್‌ನಲ್ಲಿಲ್ಲ. ಸಧ್ಯಕ್ಕೆ ಅವಳು ನಿಮ್ಮ ಮನೇಲಿರ್‍ಲಿ ಅಂತಂದ.''

''ಒಳ್ಳೇದೇ ಆಯ್ತು.''

''ಏನು ಒಳ್ಳೇದಾಯ್ತು.. ನೀನು ನನ್ನ ಮನೇಲಿ ಇದ್ದರೆ ನಂಗೇನು ಲಾಭ?''

''ಲಾಭವೋ ನಷ್ಟವೋ.. ಸಧ್ಯಕ್ಕೆ ಸುಮ್ನಿರುವುದೇ ಒಳ್ಳೇದು.. ಈಗ ನಾನು ನಿನ್ನ ಜೊತೆ ಬರ್‍ಲೋ.. ಇನ್ನು ಒಂದೆರಡು ದಿನ ಇಲ್ಲೇ ಇರ್‍ಲೋ..''

''ಇಲ್ಲೇ ಇರು. ನೀನು ಗಂಡನ ಜೊತೇಲಿದೀಯ ಅಂತ, ಚಿದಾನಂದ, ಅನ್ನಪೂರ್ಣಮ್ಮ ಇಬ್ರೂ ತಿಳ್ಕೊಂಡಿದಾರೆ.. ಸಮಯ ನೋಡಿ ಬರೂವಂತೆ.. ಆದರೆ, ರಾಜೀವನ ಹತ್ರ ಮಾತ್ರ ಮಾತನ್ನಾಡ್ತಾ ಇರು. ನೀನೇ ದೂರ ಇದ್ದು ಬಿಡ್ಬೇಡ.''

"ಸರಿ, ನಾನು ಇಲ್ಲಿದೀನಿ ಅಂತ ಅವನಿಗೆ ಹೇಳ್ಬೇಡ. ಶ್ವೇತಾಳಿಗೆ ತೊಂದರೆ ಆಗುತ್ತೆ."

"ನನಗೆ ಅಷ್ಟೆಲ್ಲಾ ಗೊತ್ತಾಗುತ್ತೆ." ಶ್ವೇತಾ ಸ್ನೇಹಿತೆಯ ಕಡೆ ನೋಡಿ ಮುಗುಳ್ನಕ್ಕಳು. "ನಿಮ್ಮಣ್ಣ ಎಲ್ಲಿ? ದಿನಾ ಇಲ್ಲಿಗೆ ಬರ್ತಿದ್ನಾ?" ಶರತ್ ಸಂಶಯದಿಂದ ಕೇಳಿದ.

"ಹೂಂ ಬಂದರೆ ಬಂದ, ಇಲ್ದಿದ್ರೆ ಇಲ್ಲ. ಅವನ ಬಿಸಿನೆಸ್ಸೇ ಬೇರೆ...ಅವನಿಂದಾಗಲೀ ಅವನ ಸ್ನೇಹಿತರಿಂದಾಗಲೀ, ನಿಮ್ಮ ತಂಗಿಗೆ ಏನೂ ತೊಂದರೆ ಆಗುಲ್ಲ. ನಾನು ಗ್ಯಾರಂಟಿ ಕೊಡ್ತೀನಿ. ಆದರೆ, ಅವನಿಗೆ ಸ್ವಲ್ಪ ಹಣ ಕೊಡಬೇಕಾಗುತ್ತದೆ....ನಿಧಾನವಾಗಿ ಕೊಡಿ. ಅವನು ಅವಸರ ಪಡಿಸುಲ್ಲ."

"ಥ್ಯಾಂಕ್ಸ್ ಶ್ವೇತಾ...." ಎಂದಷ್ಟೇ ಹೇಳಿದ. ಚೈತ್ರಾ ಸ್ನೇಹಿತೆಯೊಡನೆ ಏನೇನು ಮಾತನಾಡಿದಳೋ, ಒಬ್ಬರ ಎದುರಿಗೆ ಒಬ್ಬರನ್ನು ಕೇಳುವುದು ಬೇಡ ಎಂದುಕೊಂಡು ಸುಮ್ಮನಾದ.

* * *

ರಾತ್ರಿ ಸುಮಾರು ಹತ್ತು ಗಂಟೆಯ ಹೊತ್ತಿಗೆ ಮೊಬೈಲ್ ಫೋನು ಸದ್ದು ಮಾಡಿತು. ಶ್ವೇತಾ ನೋಡಿದಳು. ಶರತ್ ಇಲ್ಲೇ ಫೋನನ್ನು ಬಿಟ್ಟು ಹೋಗಿದಾರೆ. ರಾಜೀವ್ ಕಾಲ್ ಮಾಡಿದಾರೆ. ಈಗ ಏನ್ಮಾಡೋದು?"

"ರಿಸೀವ್ ಮಾಡು. ಏನಂತಾನೆ ಅಂತ ಕೇಳು..."

"ಇದುವರೆಗೂ, ನಾನು ಪಿಕ್ಚರ್‌ನಲ್ಲಿಲ್ಲ. ನೀನೇ ತಗೋ, ಮಾತಾಡು" ಶ್ವೇತಾ ಫೋನನ್ನು ಅವಳ ಕೈಗಿತ್ತಳು....

"ಹಲೋ ..ರಾಜೀವ್..ಹೇಗಿದೀರಿ?" ಕುಗ್ಗಿದ ಧ್ವನಿಯಲ್ಲಿ ಕೇಳಿದಳು.

"ಯಾರು ಚೈತ್ರಾನಾ?...ಶರತ್ ಎಲ್ಲಿ?... ಯಾವಾಗ್ಬಂದೆ?"

"ಅವನೆಲ್ಲೋ ಹೊರಗೆ ಹೋಗಿದಾನೆ.. ರಾಜೀವ್, ಹುಶಾರಾಗಿದೀರಿ ತಾನೇ.. ಹೀಗೆಲ್ಲಾ ಯಾಕಾಯ್ತು? ನಾನೇನು ತಪ್ಪು ಮಾಡಿದ್ದೆ?" ಅಳುವ ಧ್ವನಿಯಲ್ಲಿ ಕೇಳಿದಳು.

"ನಿನ್ನ ತಪ್ಪು ಏನಿಲ್ಲ ಚೈತ್ರಾ.. ಆದದ್ದನ್ನೆಲ್ಲ ಮರೆಯುಕ್ಕೆ ಪ್ರಯತ್ನ ಪಡು. ಶರತ್ ಬಂದ್ಮೇಲೆ ನನ್ಹತ್ರ ಮಾತನಾಡುಕ್ಕೆ ಹೇಳು.."

"ನನ್ಹತ್ರ ಮಾತನಾಡುಕ್ಕೆ ಇಷ್ಟವಿಲ್ವಾ ರಾಜೀವ್?"

"ಏನು ಮಾತಾಡ್ಲೀ ಚೈತ್ರಾ... ನಡೆದಿರುವ ಘಟನೆಯ ಬಗ್ಗೆ ಕೆದಕಿ ಕೇಳಿದರೆ, ನಿನ್ನ ದುಃಖ ಹೆಚ್ಚಾಗುಲ್ವಾ?.. ಪೋಲಿಸ್ ಇನ್‌ಸ್ಪೆಕ್ಟರ್ ಬಂದು ಕೇಳಿದ್ರೆ, ಏನೇನು ನಡೀತು ಅಂತ ಎಲ್ಲವನ್ನು ಚಾಚೂ ತಪ್ಪದೇ ಹೇಳು.. ನಿನಗೆ ಯಾರ ಮೇಲಾದ್ರೂ ಅನುಮಾನವಿದ್ದರೆ, ಹೆದರಬೇಡ ಹೇಳು..."

"ಈಗ ಏನು ಹೇಳಿ ಏನು ಪ್ರಯೋಜನ?.. ಪೋಲಿಸರು ಏನ್ಮಾಡ್ತಾರೆ? ಕಳೆದು ಹೋದ ಮಾನ ಮತ್ತೆ ವಾಪಸ್ಸು ಬರುತ್ತಾ?.." ಶ್ವೇತಾಳ ಕಡೆ ನೋಡಿ ನಕ್ಕ.

"ಅದನ್ನೆಲ್ಲಾ ನಿಧಾನವಾಗಿ ಮಾತನಾಡೋಣ. ಈಗ ರೆಸ್ಟ್ ತಗೋ.. ಬೇಗ ಈ ಶಾಕ್‌ನಿಂದ ಹೊರಕ್ಕೆ ಬಾ.." ಎಂದು ಹೇಳಿ ಮಾತನ್ನು ಮುಗಿಸಿದ್ದ. ಚೈತ್ರಾ ಸ್ನೇಹಿತೆಯ ಕಡೆ ತಿರುಗಿ ಹುಬ್ಬುಗಳನ್ನೆತ್ತಿದ್ದಳು.

"ಬಹಳ ಚೆನ್ನಾಗಿ ನಾಟಕ ಆಡ್ತೀಯ ಕಣೇ.. ನಿನಗೆ ಅವಾರ್ಡ್ ಕೊಡ್ಬೇಕು."

"ಅವಾರ್ಡು ಗಿವಾರ್ಡು ಏನೂ ಬೇಡ. ಈ ಗೊಂದಲದಿಂದ ಹೊರಬಂದು, ಸ್ವತಂತ್ರವಾಗಿ ಜೀವನ ನಡೆಸಿದ್ರೆ ಸಾಕು...ನನಗೆ ಶರತ್ ಮೇಲೆ ಕೋಪ ಬರುತ್ತೆ."

"ಶರತ್ ಬಹಳ ಹೆಲ್ಪ್‌ಲೆಸ್ ಆಗಿದಾರೆ.. ಯಾಕೆ ಅಂತ ನಂಗೂ ಅರ್ಥವಾಗುಲ್ಲ."

"ಈ ಸಮಯದಲ್ಲಿ ನೀವಿಬ್ಬರೂ ಬಹಳ ಕ್ಲೋಸ್ ಆಗಿರುವಂತಿದೆ.." ಚುಡಾಯಿಸಿದಳು.

"ಹಾಗೇನಿಲ್ಲ" ಅಂತ ಹೇಳಿದ್ದರೂ ಅವಳು ನಾಚಿದ್ದಳು.

* * *

ಒಂದೆರಡು ದಿನಗಳ ನಂತರ ಚೈತ್ರಾ ತನ್ನ ಮನೆಗೆ ವಾಪಸ್ಸಾಗಿದ್ದಳು. ಅನ್ನಪೂರ್ಣಮ್ಮ ಸಂತಸದಿಂದ ಬರಮಾಡಿಕೊಂಡರು. "ಒಬ್ಬಳೇ ಬಂದ್ಯಾಮ್ಮಾ...ರಾಜೀವ ಬರಲಿಲ್ವಾ?" ಕೇಳಿದ್ದರು.

"ಇಲ್ಲ" ಅವರು ಊರಲ್ಲಿಲ್ಲ ಎಂದು ಸುಳ್ಳು ಹೇಳಿದ್ದಳು. ತಂದೆಯನ್ನು ನೋಡಿ ಮಾತನಾಡಿಸಿ ಬರುತ್ತೇನೆಂದು ಮಹಡಿ ಹತ್ತಿದಳು. ಚಿದಾನಂದ ಅವಳನ್ನು ನೋಡಿ ನಕ್ಕಂತೆ ಮಾಡಿದ. ಮಾತನಾಡಿಸುವ ಧೈರ್ಯ ಮಾಡಲಿಲ್ಲ. ಇವಳೇ ಮಾತನಾಡಿಸಿದಳು.

"ಏನು ಆನಂದ್? ನನ್ನನ್ನು ಮರತೇ ಬಿಟ್ಟಿರುವ ಹಾಗಿದೆ.." ಎಂದಳು.

"ಹಾಗೇನಿಲ್ಲ. ಮಾತನಾಡಿಸ್ಬೇಕೋ, ಬೇಡ್ವೋ ಅಂತ ಯೋಚಿಸ್ತಿದ್ದೆ."

"ಪರವಾಗಿಲ್ಲ, ಮಾತನಾಡಿಸಿ. ನಾನೀಗ ರಾಜೀವನ ಪತ್ನಿ. ನಾನು ನಿಮ್ಮ ತಂಟೆಗೆ ಬರುವುದಿಲ್ಲ. ನಿಮ್ಮ ತಾಯಿ ಏನಂತಾರೆ? ನಿಮ್ಮ ಮದುವೆ ಯಾವಾಗ?"

"ಅಮ್ಮ ಸಧ್ಯದಲ್ಲೇ ಬರ್ತಾಳೆ.. ನಾನೂ ಅವಳ ಜೊತೆಯಲ್ಲಿ ಹೋಗೋಣಾಂತ ಇದೀನಿ."

"ಇಲ್ಲಿ ನಮ್ಮ ಡ್ಯಾಡೀನ ಯಾರು ನೋಡ್ಕೋತಾರೆ?.."

"ಬೇರೆ ಯಾರನ್ನಾದ್ರೂ ಗೊತ್ತು ಮಾಡಿಕೊಳ್ಳಬಹುದಲ್ಲ.. ನೀವು ಹೇಗಿದೀರಿ?"

"ಹೇಗೋ ಇದೀನಿ.. ಆದರೆ ನಿಮ್ಮ ಉಪಾಯ ಸಕ್ಸಸ್ ಆಗೋವರ್‍ಗೂ ನೀವು ಎಲ್ಲಿಗೂ ಹೋಗುವಂತಿಲ್ಲ... ಇದೆಲ್ಲಾ ಗುಟ್ಟಾಗಿ ಉಳಿಯದಿದ್ದರೆ, ನಾವೆಲ್ಲರೂ ಪೋಲಿಸರನ್ನು ಎದುರಿಸಬೇಕಾಗುತ್ತದೆ....ರಾಜೀವಂಗೆ ಅನುಮಾನ ಬಂದರೆ, ನಮ್ಮನ್ನೆಲ್ಲ ಸುಮ್ಮನೇ ಬಿಡ್ತಾನಾ?"

"ಹಾಗಾದ್ರೆ...ಮುಂದೇನು?..."

"ಮುಂದೆ ಏನು ಕಾದಿದೆಯೋ.. ಬಿಡಿ...." ಎನ್ನುತ್ತಾ ತಂದೆಯ ಬಳಿಗೆ ಬಂದಳು. ಅವರ ಕೈ ಹಿಡಿದು ಕಣ್ಣೀರ ಹನಿಗಳನ್ನುದುರಿಸಿದಳು. "ಸಾರಿ ಡ್ಯಾಡಿ.. ಏನೇನೋ ನಡೀತಿದೆ.. ನೀವು

ಸರಿಯಾಗಿದ್ದಿದ್ರೆ ಹೀಗೆ ಖಂಡಿತಾ ಆಗ್ತಿರ್ಲಿಲ್ಲ.. ಅಮ್ಮ ನಮ್ಮನ್ನು ಬಿಟ್ಟು ಹೋದ್ಲು.. ನಾನು ಅನಾಥೆಯಾಗ್ಬಿಟ್ಟೆ.'' ಚಿದಾನಂದ ದೂರ ನಿಂತು ಸುಮ್ಮನೇ ನೋಡಿದ.

''ಏನೇ, ನೀನು ಇಲ್ಲಿದೀಯಾ.. ಎಲ್ಲಿ ಹೋದ್ಯೋ ಅಂತ ಗಾಬರಿಯಾಯ್ತು..'' ಎನ್ನುತ್ತಾ ಶರತ್ ರೂಮಿನೊಳಕ್ಕೆ ಬಂದ...

''ಇನ್ನೆಲ್ಲಿಗೆ ಹೋಗ್ಲೀ.. ನಿನ್ನ ಮನೆಯೇ ನಂಗೆ ಶಾಶ್ವತ'' ಎಂದಳು.

''ಹಾಗೆಲ್ಲ ಮಾತಾಡ್ಬೇಡ.. ರಾಜೀವ ನಿನ್ನನ್ನ ಕೇಳ್ತಾ ಇದ್ದ.'' ಎಂದು ಹೇಳಿ ಕಣ್ಣು ಸಂಜ್ಞೆ ಮಾಡಿ ಅವಳನ್ನು ಸುಮ್ಮನಿರುವಂತೆ ಹೇಳಿದ. ಇಬ್ಬರೂ ಕೆಳಗಿಳಿದು ಬಂದರು.

''ನಾಳೆಯ ದಿನ, ನಿನ್ನನ್ನ ರಾಜೀವನ ಮನೆಗೆ ಕರ್ಕೊಂಡು ಹೋಗ್ತೀನಿ. ನಾವು ಸುಮ್ಮನಿದ್ದು ಬಿಟ್ರೆ ಅವನಿಗೆ ಅನುಮಾನ ಬರುತ್ತೆ.''

''ನೀನೇ ಹೋಗಿ ಮಾತನಾಡ್ಕೊಂಡು ಬಾ...ನಂಗೆ ಏನೂ ಬೇಕಾಗಿಲ್ಲ.''

''ಏನೇ ಹೀಗಂತೀಯಾ?... ಅವನ ಸಂಬಂಧವನ್ನು ಹೀಗೆ ಕಳಚಿಕೊಳ್ಳುಕ್ಕೆ ಆಗುತ್ತಾ? ಆಮೇಲೆ ಏನೂ ಇಲ್ಲ, ಕೈಗೆ ಚಿಪ್ಪು..''

''ಚಿಪ್ಪೂ ಇಲ್ಲ, ಚಮಚವೂ ಇಲ್ಲ, ಅವನೇ ಬಂದು ನನ್ನನ್ನು ಕರ್ಕೊಂಡು ಹೋಗ್ಲೀ.''

''ಅವನು ಬರುಲ್ಲ. ಕಾಲು ಮೂಳೆ ಮುರಿದಿದೆ.. ಈಗ ನೀನು ಹೋಗಿ ನೋಡಿ ಮಾತನಾಡಿಸುವುದು ನಿನ್ನ ಧರ್ಮ.. ಅವನ ತಂದೆ ತಾಯಿ ಏನಂದ್ಕೊಳ್ತಾರೆ?''

''ಅವನು ನನ್ನನ್ನು ಪ್ರೀತಿಸಿದ, ಮದುವೆಯಾದ.. ನನ್ನನ್ನು ಕರ್ಕೊಂಡು ಹೋಗುಕ್ಕೆ ಅವನೇ ಬರಲಿ. ನಾನಾಗಿಯೇ ಹೋಗುಲ್ಲ..''

''ಹಠ ಮಾಡ್ಬೇಡ ಚೈತ್ರಾ... ಡೈವೋರ್ಸ್ ಸಿಗುವವರೆಗೂ ಅವನ ಜೊತೆ ಸಂಬಂಧ ಇಟ್ಟುಕೊಳ್ಳಬೇಕಾಗುತ್ತೆ. ಬೇಕಿರಲಿ, ಬೇಡವಾಗಿರಲಿ ಎಲ್ಲವನ್ನು ಸಹಿಸಿಕೊಳ್ಳಬೇಕಾಗುತ್ತೆ.''

''ನಿಂದೊಳ್ಳೆ ಕಾಟ ಆಯ್ತಲ್ಲ... ನಾನು ಫೋನಿನಲ್ಲಿ ಮಾತನಾಡಿ ನಿಜವನ್ನು ಹೇಳಿಬಿಡ್ತೀನಿ.

''ಹಾಗೇನಾದ್ರೂ ಮಾಡಿದ್ರೆ ಕೊಂದು ಹಾಕಿ ಬಿಡ್ತೀನಿ ಅಷ್ಟೆ. ನನಗೆ ಸಿಗಬೇಕಾದ ಹಣ ನನಗೆ ಸಿಕ್ಕ ಮೇಲೆ ಏನು ಬೇಕಾದ್ರೂ ಮಾಡ್ಕೋ...''

''ನೋಡಿದ್ಯಾ ನಿನ್ನ ಬಣ್ಣ ಹೇಗೆ ಬಯಲಾಗ್ತಿದೆ.. ನೀನೆಂಥಾ ಅಣ್ಣನೋ?''

''ಅಣ್ಣನೂ ಶತ್ರುವಾಗಬಲ್ಲ. ರಾಜೀವನ ಹತ್ರ, ನಾವಿಬ್ರೂ ಜಗಳ ಆಡ್ತೀವಿ ಅಂತ ಹೇಳಿದ್ಯಂತೆ.. ನಿನಗೆ ನನ್ನ ಮೇಲೆ ಪ್ರೀತಿ ಇದೆಯಾ?..''

''ಹಾಗಾದ್ರೆ ಈಗ ನಾವು ಮಾಡ್ತಿರುವುದು ಏನು?''

''ಷಟಪ್ ಚೈತ್ರಾ.. ಸೀರಿಯಸ್ ಆಗಿರು.. ಈಗ ನಾವು ಹುಶಾರಾಗಿರಬೇಕು.. ನಾನು ಅವನ ಹಣಕ್ಕೆ ಆಸೆ ಪಡ್ತಿಲ್ಲ. ನಂಗೆ ಸಿಗಬೇಕಾದ್ದಕ್ಕೆ ಒದ್ದಾಡ್ತಿದೀನಿ..''

“ಹಾಗಾದ್ರೆ ಮುಂದೇನು!...

“ರಾಜೀವನ ಹತ್ರ ಸ್ನೇಹವನ್ನಿಟ್ಕೋ.. ಅವನ ಮನಸ್ನಲ್ಲಿ ಏನಿದೆ ಅಂತ ತಿಳ್ಕೋ.. ಆಮೇಲೆ ಅದಕ್ಕೆ ತಕ್ಕಂತೆ ಪ್ಲ್ಯಾನ್ ಮಾಡಬಹುದು. ಆಗ ಈಗ ಫೋನ್ನಲ್ಲಿ ಮಾತನಾಡಿ ಅವನ ಆರೋಗ್ಯ ಹೇಗಿದೆ ಅಂತ ವಿಚಾರಿಸು...” ಚೈತ್ರಾ ತುಟಿಯನ್ನು ಸೊಟ್ಟ ಮಾಡಿದಳು.

“ಚೈತ್ರಾ ಕೆಲಸಕ್ಕೆ ಹೋಗಿ ಬರುವುದಾಗಿ ಹೇಳಿದಾಗ ಶರತ್ ವಿರೋಸಿದ. ಎಲ್ರಿಗೂ ಈಗ ನೀನು ರಾಜೀವನ ಪತ್ನಿ ಅಂತ ಗೊತ್ತಿದೆ.. ಹಾಗೇ ನಡೆದ ವಿಷಯವೂ ಗೊತ್ತಿದೆ. ಏನೇನೊ ಕೇಳಬಹುದು. ನಿನ್ನ ಹಿಂದೆ ಆಡಿಕೊಳ್ಳಬಹುದು. ಅದೆಲ್ಲಾ ಚೆನ್ನಾಗಿರುಲ್ಲ.”

“ಮತ್ತೇ? ಮನೇಲಿ ಹೀಗೆ ಕೂತ್ಕೊಂಡು ಏನ್ಮಾಡ್ಲಿ?.. ಬೇಜಾರಾಗುಲ್ವಾ..”

“ಶ್ವೇತಾನ್ನ ಕರೆದು ಮಾತನ್ನಾಡು. ಅವಳ ಜೊತೆ ಷಾಪಿಂಗ್ ಹೋಗು..”

“ಷಾಪಿಂಗ್! ಈಗ ನಂಗೆ ಏನು ಬೇಕಾಗಿದೆ? ಎಲ್ಲಾ ಇದೆಯಲ್ಲ, ನಾನು ಬೇರೆ ಕಡೆ ಎಲ್ಲಾದ್ರೂ ಕೆಲಸಕ್ಕೆ ಸೇರಿಕೊಳ್ತೀನಿ. ನಂಗೆ ದುಡ್ಡು ಬೇಕು.. ಶ್ವೇತಾಂಗೆ ಕೊಡ್ಬೇಕು. ಅವಳ ಅಣ್ಣಂಗೆ ಕೊಡ್ಬೇಕು.. “ರಾಜೀವನೂ ಕೊಟ್ಟಿಲ್ಲ ಅಂತ ಹೇಳ್ದೆ ನೀನು.”

“ಅದಕ್ಕೆಲ್ಲ ಬೇರೆ ವ್ಯವಸ್ಥೆ ಮಾಡೋಣ. ಮೊದಲು ರಾಜೀವನ ಹತ್ರ ಮಾತಾಡು. ಅವನ ಕಡೆಯಿಂದ ದುಡ್ಡು ಸಿಗಲೇ ಬೇಕು. ಇಲ್ಲದಿದ್ರೆ, ಇಷ್ಟೆಲ್ಲಾ ನಾಟಕ ಆಡಿ ಏನು ಪ್ರಯೋಜನ?.. ನಾನು ನಿನ್ನ ಜೊತೆಗೆ ಬರ್ತೀನಿ. ರಾಜೀವನ ಮನೆಗೆ ಹೋಗೋಣ..”

“ಹೋಗ್ಲೇಬೇಕಾ?.. ಅವನ ತಂದೆ ತಾಯಿ, ಅಲ್ಲೇ ಇರು ಅಂತ ಬಲವಂತ ಮಾಡಿದ್ರೆ, ನಾನು ಅಲ್ಲಿ ಮಾತ್ರ ಇರುಲ್ಲ.”

“ಇದ್ದರೆ ಏನೂ ಆಗುಲ್ಲ. ಅದು ನಿನ್ನ ಅತ್ತೆ ಮನೆ. ಅಲ್ಲಿ ಇರಲು ನಿನಗೆ ಪೂರಾ ಹಕ್ಕಿದೆ. ಅವರು ಏನೂ ಆಡುವಂತಿಲ್ಲ.”

“ನಾನು ಕೇರ್ ಮಾಡುಲ್ಲ, ಯಾವಾಗ ಹೋಗೋಣ?” ಶರತ್ ಅಚ್ಚರಿಯಿಂದ ಅವಳ ಕಡೆ ನೋಡಿದ. “ಈ ನಾಟಕವೆಲ್ಲ ಬೇಗ ಮುಗಿದರೆ ಸಾಕಾಗಿದೆ.”

“ಹೌದು, ಎಲ್ಲಾ ಮುಗಿಯಲೇ ಬೇಕು” ತನ್ನಲ್ಲೇ ಎಂಬಂತೆ ಶರತ್ ಹೇಳಿಕೊಂಡು ಸಿದ್ಧನಾದ. ಚೈತ್ರಾ, ಸರಳವಾಗಿ ಅಲಂಕರಿಸಿಕೊಂಡು ಅವನೊಡನೆ ಹೊರಟಳು.

* * *

ರಾಜೀವನ ತಂದೆ ತಾಯಿ ಅವಳನ್ನು ಮೌನವಾಗಿ ಸ್ವಾಗತಿಸಿದರು. ಚೈತ್ರಾಳಿಗೆ ಮುಜುಗರವೆನಿಸಿತ್ತು. ಆಕೆಯೊಡನೆ ಸಲುಗೆ ಇರಲಿಲ್ಲ. ಮದುವೆ ನೆರವೇರಿದ ದಿನದಂದು ಕೆಲವಾರು ಗಂಟೆಗಳ ಕಾಲವನ್ನು ಅಲ್ಲಿ ಕಳೆದಿದ್ದಳಷ್ಟೇ. ಆದರೆ ಅವರು ಉಭಶುಭ ಎಂದಿರಲಿಲ್ಲ. ಏನನ್ನೋ ಕಳೆದುಕೊಂಡವರಂತೆ ಕೆಟ್ಟ ಮುಖವನ್ನು ಹಾಕಿಕೊಂಡಿದ್ದರು. ಚೈತ್ರ ಈ ರೀತಿಯ ಸ್ವಾಗತವನ್ನು ಊಹಿಸಿರಲಿಲ್ಲವಾದರೂ, ಅಚ್ಚರಿಯಾಗಲಿಲ್ಲ ಅವಳಿಗೆ. ತಾನೂ ಮೌನವಾಗಿದ್ದು

ಬಿಟ್ಟಳು. ಮೌನ ಅಸಹನೀಯವೆನಿಸಿತ್ತು. ಶರತ್ ಎದ್ದು "ಬಾ ರಾಜೀವನ್ನ ಮಾತನಾಡಿಸೋಣ" ಎನ್ನುತ್ತಾ ಅವನ ರೂಮಿಗೆ ಅವಳನ್ನು ಕರೆದೊಯ್ದ.

ಮಂಚದ ಮೇಲೆ ಕುಳಿತು, ಗೋಡೆಗೆ ಒರಗಿ, ಏನೋ ಪುಸ್ತಕವನ್ನು ಓದುತ್ತಿದ್ದವನು ಇತ್ತ ತಿರುಗಿದ. ಬಲವಂತವಾಗಿ ನಕ್ಕು 'ಕೂತ್ಕೋ' ಅಂತಂದ. ಅವಳು ಮಂಚದ ತುದಿಯಲ್ಲಿ ಕುಳಿತಳು. ಇಬ್ಬರಿಗೂ ಏನೂ ಮಾತಿಲ್ಲವೆಂಬಂತೆ ಮೌನವಾಗಿದ್ದರು.

"ನೀವಿಬ್ರೂ ಮಾತಾಡ್ತಾ ಇರಿ. ನಾನು ಬರ್ತೀನಿ" ಎಂದ ಶರತ್ .

"ಶರತ್, ತಡೀ.. ಚೈತ್ರಾಳನ್ನು ನಿನ್ನ ಜತೆಯಲ್ಲಿ ಕರ್ಕೊಂಡು ಹೋಗು" ಎಂದ ರಾಜೀವ. ಚೈತ್ರಾ ಅವನ ಕಡೆ ತಿರುಗಿದಳು. ಹೌದು, ಚೈತ್ರಾ, ನಿನ್ನ ಮಾನಸಿಕ ಸ್ಥಿತಿ ಸರಿಯಿಲ್ಲ ಅಂತ ನಿನ್ನ ಮುಖವೇ ಹೇಳ್ತಿದೆ.. ಈ ಪರಿಸರ, ಈ ಮನೆ ನಿನಗೆ ಹೊಸದು... ನೀನು ಎಲ್ಲಿ ಹೇಗಿರ್ತೀಯಾ?"

"ಇವಳು ನಿನ್ನ ಪತ್ನಿ, ಇದು ಇವಳು ವಾಸ ಮಾಡಬೇಕಾದ ಮನೆ."

"ಹೌದು, ಪರಿಸ್ಥಿತಿ ನೆಟ್ಟಗಿಲ್ಲವಲ್ಲ. ಅಮ್ಮನಿಗೆ ಮುಜುಗರವಾಗುತ್ತೆ. ಚೈತ್ರಳಿಗೆ ಹಿಂಸೆ ಆಗುತ್ತೆ."

"ಹಿಂಸೆ ಏನು?.. ಅವಳಿಗೀಗ ನಿನ್ನ ಹಾಗೂ ನಿನ್ನ ಮನೆಯವರ ಬೆಂಬಲ ಬೇಕು, ಇನ್ನೆಲ್ಲಿಗೆ ಹೋಗ್ತಾಳೆ?"

"ಸಧ್ಯಕ್ಕೆ ನಿಮ್ಮ ಮನೇಲಿರ್ಲಿ ಶರತ್. ನಿಧಾನವಾಗಿ ನಾನು ಕರೆಸಿಕೊಳ್ತೀನಿ."

"ಅಂದ್ರೇ.. ಇವಳು ಈಗ ನಿಂಗೆ ಬೇಡ....ಇದೇನಾ ನಿನ್ನ ಪ್ರೀತಿ...?"

"ಪ್ರೀತಿ ಬೇರೆ ಮಾತು. ನಿನಗೆ ಅರ್ಥವಾಗುಲ್ಲ. ನೀನೇ ಹೇಳು, ಒಂದು ವೇಳೆ ನಿನಗೆ ಮದುವೆಯಾಗಿದ್ದು, ಅವಳೊಡನೆ ಇಂಥಾ ಘಟನೆ ನಡೆದಿದ್ದರೆ,....ನಿನ್ನ ಪರಿಸ್ಥಿತಿಯೂ ಹೀಗೇ ಇರ್ತಿತ್ತು."

"ಇವಳ ಎದುರಿಗೇ ಹೀಗೆಲ್ಲಾ ಮಾತಾಡ್ಬೇಡ ರಾಜೀವ. ಇವಳನ್ನು ಮದುವೆಯಾಗಿದೀಯ.. ಇವಳೊಡನೆ ಬಾಳ್ವೆ ನಡೆಸು.. ಇಲ್ಲದಿದ್ದರೆ ಇವಳ ಜೀವನ ಅಸಹನೀಯವಾಗುತ್ತೆ.. ಎಲ್ಲವನ್ನು ಮರೆತು ಸಹಕರಿಸು. ಎಲ್ಲವೂ ಮೊದಲಿನಂತಾಗಲಿ.."

"ನೀನು ಇಷ್ಟು ಮಾತನಾಡ್ತಿದೀಯ.. ಇವಳು ಬಾಯನ್ನೇ ಬಿಟ್ಟಿಲ್ಲ.. ಎಲ್ಲವೂ ಮೊದಲಿನಂತಾಗಲು ಸಮಯಬೇಕು.. ತಕ್ಷಣಕ್ಕೇ ನಡೆದುದನ್ನೆಲ್ಲ ಮರೆಯಲು ನನ್ನಿಂದ ಆಗ್ತಿಲ್ಲ. ಐ ಆಮ್ ಸಾರೀ..." ಥ್ಯಾಂಕ್ಸ್ ಶರತ್... ನಿನ್ನ ತಂಗಿಯನ್ನು ಬಿಡಿಸಿ ತಂದಿದ್ದಕ್ಕೆ...."

"ಇದರಲ್ಲಿ ಇವಳ ತಪ್ಪೇನಿದೆ?... ನಿಂಗೇ ಗೊತ್ತಲ್ಲ. ಹಣವನ್ನು ಕೊಟ್ಟಿಲ್ಲ ನೀನು.."

"ಸಾಕು ಶರತ್, ಇನ್ನು ಮಾತು ಬೇಡ...ರಾಜೀವನ ಮನಸ್ಸಲ್ಲಿ ಏನಿದೆ ಅಂತ ನಾನು ಊಹಿಸಬಲ್ಲೆ. ನಾನು ಪವಿತ್ರವಾಗಿದೀನಿ ಅಂತ ಸರ್ಟಿಫಿಕೇಟನ್ನು ತಂದು ತೋರಿಸಿದರೂ ಇವರಿಗೆ

ನಂಬಿಕೆ ಬರುಲ್ಲ ಅಲ್ವಾ ರಾಜೀವ್?.." ಮಧ್ಯದಲ್ಲಿ ಚೈತ್ರಾ ಕೇಳಿದಳು.

"ಹಾಗಲ್ಲ ಚೈತ್ರಾ... ಯಾರಾದರೂ ಏನನ್ನೂ ಕೇಳಿದ್ರೆ.. ನಿಂಗೆ ಕಷ್ಟವಾಗುಲ್ವಾ?.."

"ನೀವು ನನ್ನೊಂದಿಗೆ ಇಲ್ಲದಿದ್ದರೆ, ನಂಗೆ ಕಷ್ಟವಾಗುತ್ತೆ.. ಬೇಡಬಿಡಿ"

"ಹಾಗಲ್ಲ ಚೈತ್ರಾ.."

"ಪರವಾಗಿಲ್ಲ ಬಿಡಿ ರಾಜೀವ್, ನಾನು ಇದನ್ನ ಊಹಿಸಿರಲಿಲ್ಲ."

"ರಾಜೀವ, ಅವಳು ಇಲ್ಲಿರಲಿ, ನಿಂಗೂ ಸಹಾಯವಾಗುತ್ತೆ.."

"ನನಗೀಗ ಯಾರ ಸಹಾಯವೂ ಬೇಡ. ನನ್ನ ಪಾಡಿಗೆ ನನ್ನನ್ನ ಬಿಟ್ಟರೆ ಅದೇ ದೊಡ್ಡ ಸಹಾಯ.. ನನ್ನ ಮನಃಸ್ಥಿತಿ ನಿಂಗೆ ಅರ್ಥವಾಗ್ತಿಲ್ಲವಲ್ಲ, ಭಾವನೆಗಳು ಸುಟ್ಟು ಹೋಗಿವೆ."

"ಎಲ್ಲಾ ಅರ್ಥವಾಗ್ತಿದೆ ರಾಜೀವ. ಆದರೆ ನೀನು ಈಗ ಹೀಗೆ ಮಾತನಾಡುವಂತಿಲ್ಲ. ಇವಳನ್ನು ಮದುವೆಯಾಗಿದೀಯ. ನೀನೇ ಹೀಗಾಡಿದರೆ, ಇವಳ ಜೀವನ ನರಕವಾಗುತ್ತೆ. ನಿನ್ನ ಸಹಕಾರವಿಲ್ಲದಿದ್ದರೆ ಇವಳು ಹೇಗೆ ಬದುಕಿರ್ತಾಳೆ..? ಇವಳಿಗೆ ದ್ರೋಹ ಮಾಡ್ಬೇಡ. ಇದರಲ್ಲಿ ಇವಳ ತಪ್ಪಾದ್ರೂ ಏನಿದೆ?" ಕ್ರಮೇಣ ಎಲ್ಲಾ ಸರಿ ಹೋಗುತ್ತದೆ."

"ಮತ್ತೆ ಮತ್ತೆ ಇದನ್ನೇ ಆಡ್ಬೇಡ ಶರತ್. ಎಲ್ಲಾ ಮೊದಲಿನಂತಾಗಲು, ನನಗೂ ಸ್ವಲ್ಪ ಸಮಯಬೇಕು. ಇವಳ ತಪ್ಪಿಲ್ಲ ನಿಜ. ಆದರೆ ನನ್ನ ಅಸಹಾಯಕತೇನೂ ಅರ್ಥ ಮಾಡ್ಕೋ.. ಚೈತ್ರಾ ನೀನಾದ್ರೂ ಹೇಳು ಇವನಿಗೆ.."

"ನನ್ನ ಎದುರಿಗೇ ನೀವು ಇಷ್ಟು ಹೇಳ್ತಿರುವಾಗ, ನಿಮ್ಮ ಮನಸ್ಸಿನಲ್ಲೇನಿದೆ ಅಂತ ಅರ್ಥವಾಗದಿರುವಷ್ಟು ದಡ್ಡಿ ನಾನಲ್ಲ. ನಾನೀಗ ಹೋಗ್ತಾ ಇದೀನಿ. ನೀವೇ ಬಂದು ನನ್ನನ್ನು ಕರೆಯುವರೆಗೂ ಈ ಮನೆಗೆ ಬರುವುದಿಲ್ಲ, ಶರತ್ ಹೊರಡು ಸುಮ್ಮನೇ... ಬೇಡ್ಕೋ ಬೇಡ." ಚೈತ್ರಾ ಎದ್ದು ಹೊರಕ್ಕೆ ಬಂದಳು. ಶರತ್ ತಲೆ ತಗ್ಗಿಸಿ ಅವಳ ಹಿಂದೆ ನಡೆದ. ಹೊರಗೆ ಹಾಲಿನಲ್ಲಿ ಕುಳಿತಿದ್ದ ಅವನ ತಂದೆ ತಾಯಿ ಏಳಲೂ ಇಲ್ಲ. ಏನನ್ನೂ ಆಡಲಿಲ್ಲ.. ಚೈತ್ರಾ ಅವರ ಕಡೆ ತಿರುಗದೇ, ವೆರಾಂಡವನ್ನು ದಾಟಿದಳು.

* * *

"ಚೈತ್ರಾ ತಪ್ಪು ಮಾಡಿದಳು. ಅಲ್ಲೇ ಇರ್ತೀನಿ ಅಂತ ಹಠ ಹಿಡಿಯಬೇಕಾಗಿತ್ತು. ಅಲ್ಲೇ ಉಳಿದುಕೊಂಡಿದ್ದರೆ, ಯಾರೂ ಮನೆಯಿಂದಾಚೆ ದಬ್ಬುತ್ತಿರಲಿಲ್ಲ ಎಂದೆನಿಸಿತು ಶರತ್‌ಗೆ. ಆದರೆ ಅವಳೊಡನೆ ಹೇಳಲು ಹಿಂಜರಿದ. ಈಗ ಇವಳ ಮನಸ್ನಲ್ಲಿ ಏನಿದೆಯೊ? ಮದುವೆ ಮಾಡ್ಕೊಂಡ್ಮೇಲೆ, ನಾಲ್ಕು ದಿನವಾದ್ರೂ ಅವನ ಜೊತೇಲಿ ಇಲ್ಲದಿದ್ರೆ, ಗಂಡ ಹೆಂಡತಿ ಅಂತ ಯಾರನ್ನುತ್ತಾರೆ...ನಾಲ್ಕು ದಿನ ಕಳೀಲಿ, ಮತ್ತೆ ಇವಳನ್ನು ಅವರ ಮನೆಗೆ ಕಳಿಸುವ ಪ್ರಯತ್ನ ಮಾಡ್ತೀನಿ." ಎಂದುಕೊಂಡ. ಇಲ್ಲದಿದ್ರೆ ಎಲ್ಲವೂ ವ್ಯರ್ಥವಾದಂತೆ ಅಂತೆನ್ನಿಸಿತ್ತು.

ಚೈತ್ರಾ, ಏನೂ ನಡೆದಿಲ್ಲವೆಂಬಂತೆ ಸುಮ್ಮನಾಗಿದ್ದಳು. ಆದರೆ ಅಗತ್ಯಕ್ಕಿಂತ ಹೆಚ್ಚು

ಗಂಭೀರಳಾಗಿದ್ದಳು. ಅದೇನು ನಟನೆಯೋ, ಬೇಸರವೋ ಅಂತ ಅವನಿಗೆ ಅರ್ಥವಾಗಿರಲಿಲ್ಲ. ರಾಜೀವ ಹಣವನ್ನು ಕೊಡಲು ನಿರಾಕರಿಸಿಬಿಟ್ಟರೇ ಎನ್ನುವ ದಿಗಿಲೂ ಕಾಡುತ್ತಿತ್ತು.

"ಶ್ವೇತಾಳ ಮನೆಗೆ ಹೋಗೋದಾದ್ರೆ ಬಾರೇ. ಕರ್ಕೊಂಡು ಹೋಗಿ ಬಿಟ್ಟು ಬರ್ತೀನಿ. ಮನೇಲಿ ಕೂತು ಏನ್ಮಾಡ್ತೀಯ?" ಕೇಳಿದ್ದ.

"ನನಗೀಗ ಅಲ್ಲಿ ಇಲ್ಲಿ ತಿರುಗುಕ್ಕೆ ಬೇಜಾರು. ಅಕ್ಕ ಪಕ್ಕದವರು, ಪರಿಚಯದವರು, ಪ್ರಶ್ನಾರ್ಥಕವಾಗಿ ನೋಡ್ತಾರೆ. ನಾನು ಮನೇಲೇ ಇರ್ತೀನಿ."

"ಮನೇಲೇ ಇದ್ದರೆ ಇನ್ನೂ ಮಂಕಾಗಿ ಹೋಗ್ತೀಯ.. ರಾಜೀವನ ಹತ್ರ ಮಾತನಾಡಿದ್ಯಾ?.. ಏನಂತಾನೆ?"

"ಇನ್ನೇನು ಉಳಿದಿದೆ ಮಾತಾಡುಕ್ಕೆ. ಅವನಿಗೆ ಬೇಕಾಗಿದ್ರೆ ಅವನೇ ಬರ್ತಾನೆ.."

"ಪೋಲಿಸ್ ಸ್ಟೇಷನ್‌ಗೆ ಹೋಗಿ ಕಂಪ್ಲೆಂಟ್‌ನ ವಾಪಸ್ಸು ತಗೊಳ್ಳಲೋ.. ಅಥವಾ.."

"ಈಗ್ಲೇ ಏನೂ ಬೇಡ. ರಾಜೀವನಿಗೆ ತಿಳಿದರೆ, ಏನಂದ್ಕೊಳ್ತಾನೆ?.."

"ಹೌದಲ್ವಾ?... ನಂಗೆ ಹೊಳೀಲೇ ಇಲ್ಲ."

"ನಿಂಗೆ ಏನೂ ಹೊಳೆಯುಲ್ಲ. ನನ್ನಂಥೋಳನ್ನ ಕಷ್ಟಕ್ಕೆ ಸಿಕ್ಕಿಸುಕ್ಕೆ ಗೊತ್ತಾಗುತ್ತೆ. ನಾನು ನಿನ್ನನ್ನು ಎಂದೂ ಕ್ಷಮಿಸುಲ್ಲ.. ನನಗೆ ನಿನ್ನಿಂದ ಅವಮಾನವಾಗಿದೆ".

"ಸಾರಿ ಕಣೇ.. ಈ ಪ್ಲ್ಯಾನ್ ನಂದಲ್ಲ.. ಹೀಗಾಗುತ್ತೆ ಅಂತ ಗೊತ್ತಿರಲಿಲ್ಲ."

"ಗೊತ್ತಿತ್ತೋ, ಇಲ್ವೋ.. ಎಲ್ಲಾದಕ್ಕೂ ಮೂಲ ನೀನು. ನನ್ನ ಹತ್ರ ಮಾತಾಡ್ಬೇಡ ಹೋಗು.." ಶರತ್ ಅವಳನ್ನೇ ಗಂಭೀರವಾಗಿ ನೋಡಿ, ಅಲ್ಲಿಂದ ಸರಿದಿದ್ದ. ಅಲ್ಲಿಂದ ಶ್ವೇತಾಳ ಮನೆಗೆ ಬಂದ.

"ಇದ್ದಕ್ಕಿದ್ದ ಹಾಗೆ ಚೈತ್ರಾ ಬದಲಾಗಿದಾಳೆ. ಮಂಕಾಗಿದಾಳೋ ಬೇಸರಗೊಂಡಿದಾಳೋ ಗೊತ್ತಾಗ್ತಿಲ್ಲ. ನೀವು ಬಂದು ಅವಳ ಜೊತೇಲಿ ನಾಲ್ಕು ದಿನ ಇರುಕ್ಕೆ ಆಗುತ್ತಾ?...

"ನಾನು ಬಂದ್ರೂ ಅವಳು ಬದಲಾಗುಲ್ಲ. ನಾನೂ ಅವಳ ಸ್ನೇಹಿತೆ. ಅವಳಿಗೆ ಏನು ತಿಳುವಳಿಕೆಯನ್ನು ಹೇಳಲಿ!... ಅವಳಿಗಿಂತ ಹಿರಿಯರು ಯಾರಾದ್ರೂ ತಿಳುವಳಿಕೆ ಹೇಳ್ಬೇಕು. ಅನ್ನಪೂರ್ಣಮ್ಮ ಹೇಗೆ?"

"ಅವರಿಗೆ ಬರೀ ಅಡಿಗೆ ಮಾಡಿ ಬಡಿಸುವುದು ಗೊತ್ತು.. ಇನ್ನು ಯಾವ ನೆಂಟರಿಷ್ಟರೊಡನೆ ಈ ವಿಷಯವನ್ನು ಚರ್ಚಿಸಲು ನನಗಿಷ್ಟವಿಲ್ಲ. ಅಲ್ಲದೇ ಅವರ್‍ಯಾರನ್ನು ಮದುವೆಗೆ ಕರೆದಿರಲಿಲ್ಲ."

"ಚಿದಾನಂದನ ತಾಯಿ ಬಂದು ನಾಲ್ಕು ದಿನ ಇದ್ದರೇ.. ಇವಳಿಗೆ ಚಿದಾನಂದನ ಜೊತೆ ಸ್ನೇಹ ಚೆನ್ನಾಗಿದೆ. ಅವನ ತಾಯೀನ ಕಂಡರೆ ಗೌರವವೂ ಇರಬಹುದು.."

"ಏನೋ ನಂಗೊತ್ತಿಲ್ಲ. ಬಹಳ ಧೈರ್ಯವಾಗಿದಾಳೆ ಅಂತ ಅಂದ್ಕೊಂಡಿದ್ದೆ, ಅವರೆ ಅವಮಾನವಾಗಿದೆ ಅಂತ ಭಾವಿಸಿದಾಳೆ.. ನನ್ನ ಪ್ಲ್ಯಾನ್ ಇದಾಗಿರಲಿಲ್ಲ ಶ್ವೇತಾ.. ಅವಳೇ ಹೀಗೆ ಆಗುವಂತೆ ಮಾಡಿ, ಈಗ ಅವಳೇ ಮನಸ್ಸಿಗೆ ಹಚ್ಚಿಕೊಂಡಿದಾಳೆ..."

"ಬಹುಶಃ ರಾಜೀವನ ಸ್ಥಿತಿಯನ್ನು ಕಂಡು ಕನಿಕರ ಹುಟ್ಟಿರಬಹುದು.. ಆದರೆ ಅವನ ಮಾತುಗಳಿಂದ ಅಪ್ಸೆಟ್ ಆಗಿರಬಹುದು.. ಈಗ ನಿಮ್ಮ ಮನಸ್ಸೆಲ್ಲೇನಿದೆ?..

"ಈಗ ಅವಳು ಹೇಗಾದ್ರೂ ಸರಿ.. ರಾಜೀವನ ಜೊತೆ ಅವನ ಮನೇಲಿದ್ರೆ, ಜನರು ಆಡಿಕೊಳ್ಳುವುದಿಲ್ಲ, ಎಷ್ಟೋ ಜನರಿಗೆ, ಈಗಲೂ ಈ ದುರ್ಘಟನೆ ನಡೆದಿದೆ ಅಂತ ಗೊತ್ತಿಲ್ಲ."

"ಅವಳಿಗೆ ಇಷ್ಟವಿಲ್ಲದಿದ್ರೆ ಬಲವಂತ ಮಾಡ್ಬೇಡಿ ಶರತ್.."

"ಬಲವಂತ ಮಾಡುಲ್ಲ, ಆದರೆ ಅವಳಿಗೆ ತಿಳುವಳಿಕೆ ಸಾಲದು ಅಂತ ಅನ್ನಿಸ್ತಿದೆ. ಚಿದಾನಂದನ ತಾಯಿ ಬಂದು ಇದ್ದರೆ, ಅವಳೂ ಬದಲಾಗಬಹುದು.. ನಿಮಗೆ ಚಿದಾನಂದನ ಪರಿಚಯವಿದೆಯಲ್ಲ.. ಅವನು ತಾಯಿಯನ್ನು ಕರೆಸುವಂತೆ ಹೇಳ್ತೀರಾ?"

"ನೀವೇ ಹೇಳಬಹುದಲ್ಲ ಶರತ್.."

"ನಾನು ಕಾರಣವನ್ನು ಹೇಳಬೇಕಾಗುತ್ತದೆ. ಅದನ್ನೆಲ್ಲ ಮಾತನಾಡಲು ಇಷ್ಟವಿಲ್ಲ. ಎಷ್ಟಾಗಲೀ, ನಾನು ಮನೆಯ ಯಜಮಾನ.."

"ಈ ಅಹಂಕಾರ ಒಳ್ಳೆಯದಲ್ಲ.."

"ಅಹಂಕಾರವಲ್ಲ , ಸ್ವಾಭಿಮಾನ, ನನ್ನ ಅಸಹಾಯಕತೆ ಯಾರಿಗೂ ತಿಳಿಯಬಾರದು."

"ನನಗೆ ತಿಳಿದಿದೆಯಲ್ಲ.."

"ಈಗ ನೀವು ನನಗೆ ಬೇಕಾದವರು.. ಇವೆಲ್ಲಾ ಒಂದು ಹಂತಕ್ಕೆ ಬಂದ ಮೇಲೆ ನಾವಿಬ್ಬರೂ ಮದುವೆಯಾಗೋಣ..." ಅವಳ ಸೊಂಟವನ್ನು ಬಳಸಿದ.

"ಇಷ್ಟು ದಿನಕ್ಕೆ ಮದುವೆಯ ಪ್ರಪೋಸನ್ನ ನನ್ನ ಮುಂದೆ ಇಟ್ಟಿದೀರಿ.. ಆದರೆ ಮದುವೆಗೆ ಮೊದಲು ನನ್ನೊಡನೆ ತುಂಬಾ ಸಲುಗೆಯಿಂದ ಇದೀರಲ್ಲ ಶರತ್..."

"ನೀವೂ ಒಪ್ಪಿದ್ದೀರಿ.. ಎಂದೂ ವಿರೋಽಸಲಿಲ್ಲ.." ಅವಳನ್ನು ತನ್ನೆಡೆಗೆ ಎಳೆದುಕೊಂಡ.

"ನಾನೂ ನಿಮ್ಮನ್ನು ಇಷ್ಟಪಟ್ಟೆ.. ನಿಮ್ಮ ಟೆನ್ಷನ್‌ನ ಕಡಿಮೆ ಮಾಡುವ ಉದ್ದೇಶವೂ ಇತ್ತು.." ಮೋಹಕವಾಗಿ ನಕ್ಕಳು. ಅವನು ಅವಳ ಮುಖದ ಬಳಿಗೆ ತನ್ನ ಮುಖವನ್ನು ಒಡ್ಡಿದ.

"ಅದನ್ನು ನಾನು ಪೂರಾ ನಂಬುಲ್ಲ. ನೀವು ಸ್ವಲ್ಪ ಮಾಡರ್ನ್ ಹುಡುಗಿ. ಚೈತ್ರ ನಿಮ್ಮ ಹಾಗಲ್ಲ.. ಅವಳು ರಾಜೀವನ್ನ ದೂರ ದೂರವೇ ಇಟ್ಟಿದ್ದಳು...ಇಲ್ಲದಿದ್ರೆ ಅವನು ದೂರ ಮಾಡ್ತಿರಲಿಲ್ಲ.

"ಹೋಗ್ಲಿ ಬಿಡಿ ಶರತ್. ಅದು ಅವರವರ ಇಷ್ಟ.. ಹೇಗೂ ಇದು ನಾಟಕ ತಾನೇ.. ಅವಳಿಗೆ ಬೇಕಿರಲಿಲ್ಲ.."

"ನಾಟಕ ಆದ್ರೂ ನ್ಯಾಚುರಲ್ ಅನ್ನಿಸುವ ಹಾಗಿರ್ಬೇಕು. ಅವನಿಗೆ ಅನುಮಾನ ಬಂದರೇ.. ಈ ಚೈತ್ರಳಿಗೆ ಅರ್ಥವಾಗುಲ್ಲ. ನೀವಾದ್ರೂ ತಿಳುವಳಿಕೆ ಹೇಳಿ.."

"ಸರಿ, ನಾನು ಪ್ರಯತ್ನ ಪಡ್ತೀನಿ.."

"ಥ್ಯಾಂಕ್ ಯೂ ಶ್ವೇತಾ", ಎಂದ ಇಬ್ಬರೂ ರೂಮನ್ನು ಸೇರಿ ಬಾಗಿಲನ್ನು ಹಾಕಿಕೊಂಡರು.

* * *

"ಎರಡು ದಿನಗಳ ಮಟ್ಟಿಗೆ ಊರಿಗೆ ಹೋಗಿ, ಅಮ್ಮನ್ನ ನೋಡ್ಕೊಂಡು ಬರ್ತೀನಿ.." ಎಂದು ಚಿದಾನಂದ ಶರತ್‌ನ ಕೇಳದಾಗ, ಅವನು ಮುಖವನ್ನು ಸಿಂಢರಿಸಿದ.

"ನೀವು ಹೇಗ್ರೀ ಹೋಗುಕ್ಕಾಗುತ್ತೇ?.. ಡ್ಯಾಡೀನ ನೋಡ್ಕೊಳ್ಳೋರು ಯಾರು? ಅಮ್ಮನ್ನ ನೋಡ್ಬೇಕು ಅಂತ ಅನ್ನಿಸಿದ್ರೆ, ಅವರನ್ನೇ ಕರೆಸಿ.. ಇಷ್ಟಕ್ಕೂ ಅವರು ಅಲ್ಲಿ ಒಬ್ಬರೇ ಇದ್ದು ಏನು ಮಾಡ್ತಾರೆ. ಇಲ್ಲೇ ಬಂದು ಇರಿ ಅಂತ ಹೇಳಿ.. ಸಧ್ಯದಲ್ಲೇ ನಾನು ನಿಮಗೆ ಸಂಬಳವನ್ನು ಹೆಚ್ಚು ಮಾಡ್ತೀನಿ" ಅಂತಂದ. ಚಿದಾನಂದ ವಿಸ್ಮಯದಿಂದ ಅವನನ್ನೇ ನೋಡಿದ. ನಾನು ಏನು ತಪ್ಪು ಹೇಳ್ದೆ ಅಂತ ಹಾಗೆ ನೋಡ್ತಿದೀರಿ! ಚೈತ್ರಾ ಮೊದಲಿನಂತಿಲ್ಲ. ಬೇಸರಗೊಂಡಿದ್ದಾಳೆ. ಅವಳಿಗೆ ಯಾವುದರಲ್ಲೂ ಆಸಕ್ತಿಯಿಲ್ಲ. ಮನೇಲಿ ಒಂದಿಬ್ಬರು ಓಡಾಡ್ತಾ ಇದ್ದರೆ, ಅವಳ ಮನಸ್ಸೂ ಪ್ರಫುಲ್ಲವಾಗುತ್ತೆ.. ಟೆಲಿಗ್ರಾಂ ಕೊಡಿ, ಫೋನು ಮಾಡಿಸಿ, ಬೇಗ ಕರೆಸಿ, ಅರ್ಜೆಂಟು ಅಂತನ್ನಿ.. ಬರ್ತಾರೆ." ಶರತ್ ಅಷ್ಟು ಹೇಳಿ ಅಲ್ಲಿಂದ ಕದಲಿದ್ದ.

ಚಿದಾನಂದ ತಾಯಿಯ ಹತ್ತಿರ ಫೋನಿನಲ್ಲಿ ಮಾತಾಡಿದ. "ಇಲ್ಲಿ ನಿನ್ನ ಅಗತ್ಯವಿದೆ. ನಾಳೇನೇ ಬಂದ್ಬಿಡು. ಇಲ್ಲಿಗೆ ಬಂದ್ಮೇಲೆ ಎಲ್ಲವನ್ನು ಹೇಳ್ತೀನಿ" ಅಂತಂದ.

"ಏನಾಯ್ತೋ ಚಿದೂ...ರಾಯರು ಹುಶಾರಾಗಿದಾರೆ ತಾನೇ..?" ಆತಂಕದಿಂದ ಕೇಳಿದ್ದಳು.

"ಇಲ್ಲಮ್ಮ ಅವರಿಗೇನೂ ಆಗಿಲ್ಲ, ಎಲ್ಲಾ ಹುಶಾರಾಗಿದಾರೆ, ನೀನು ಬಾ..." ಅವಳನ್ನು ಒತ್ತಾಯ ಮಾಡಿದ್ದ. "ಸಾಧ್ಯವಾದಷ್ಟೂ ಬೇಗ ಬಂದ್ಬಿಡು" ಮತ್ತೆ ಹೇಳಿದ್ದ.

"ಸರಿ, ನಾನು ರಾತ್ರಿಯ ಬಸ್ಸಿಗೇ ಹೊರಡ್ತೀನಿ. ಬೆಳಿಗ್ಗೆ ಬಸ್‌ಸ್ಟ್ಯಾಂಡ್‌ಗೆ ಬಂದು ನನ್ನನ್ನು ಕರ್ಕೊಂಡು ಹೋಗು" ಎಂದಳು.

ಬಸ್‌ನಿಂದ ಇಳಿದ ತಾಯಿಯನ್ನು, ಆಟೋರಿಕ್ಷಾದಲ್ಲಿ ಕೂರಿಸಿ, ತಾನೂ ಕೂತ. ರಿಕ್ಷಾ ಚಲಿಸಿತು. ಇವನು ವಿಷಯವನ್ನು ತಿಳಿಸಿದ. ಚೈತ್ರಾ ಗಂಡನ ಮನೆಯಲ್ಲಿ ಇರಲು ಇಷ್ಟಪಡದೇ ತವರಿಗೆ ಬಂದು ಕೂತಿದಾಳೆ. ನೀನು ತಿಳುವಳಿಕೆಯನ್ನು ಹೇಳಿ, ಅವಳು ಮತ್ತೆ ಗಂಡನ ಮನೆಗೆ ಹೋಗುವಂತೆ ಒಪ್ಪಿಸಬೇಕು" ಎಂದ.

"ಇಬ್ಬರೂ ಪ್ರೀತಿಸಿ ಮದುವೆಯಾದರಲ್ಲೋ.. ಈಗೇನಾಯ್ತು?" ಸಂದೇಹದಿಂದ ಕೇಳಿದಳು.

"ಒಂದು ದುರ್ಘಟನೆ ನಡೆದು ಹೋಯ್ತು. ಚೈತ್ರಳನ್ನು ಅಪಹರಣಕಾರರು ಬಿಡುವವರೆಗೂ ಈ ವಿಷಯ ಗುಟ್ಟಾಗಿಯೇ ಇತ್ತು, ಅಂತ ಎಲ್ಲರೂ ಅಂದ್ಕೊಂಡಿದ್ರು. ಆದರೆ, ಪೇಪರ್ನಲ್ಲಿ ಬಂದಿತ್ತಂತೆ. ರಾಜೀವನ ಕಾಲಿನ ಮೂಳೆ ಮುರಿದಿದೆ. ಅವನು ಅಸಹಾಯಕನಾಗಿದಾನೆ. ಏನೇನೋ ಅವಾಂತರಗಳು. ಇವಳಿಗೆ ಆಘಾತವಾಗಿದೆ ಅಂತ ಶರತ್ ಅಂದುಕೊಂಡಿದಾನೆ.

"ಇಂಥಾ ಘಟನೆ ನಡೆದ್ರೆ ಆಘಾತವಾಗದೇ ಇರುತ್ತಾ?.. ಮದುವೆಯಾದ ಹುಡುಗಿ ಗಂಡನ ಜೊತೆ ಇರುಕ್ಕಾಗದ ಹಾಗೆ ಆಯ್ತಲ್ಲಾ.." ಬೇಸರವನ್ನು ವ್ಯಕ್ತಪಡಿಸಿದಳು.

"ಅವಳಿಗೆ ಈ ಮದುವೆ ಇಷ್ಟವಿರ್ಲಿಲ್ಲ... ಈಗ ಇಬ್ಬರಿಗೂ ಮನಸ್ಸಿನ ಘಾಸಿ ಬೇರೆ.."

"ಸರಿ ಬಿಡು, ಅವಳಿಗೆ ಅವನೊಡನೆ ಸಂಸಾರ ಮಾಡುವ ಇಚ್ಛೆ ಇಲ್ಲದಿದ್ದರೆ, ಬಲವಂತ ಮಾಡುವುದು ಬೇಡ...ನೋಡೋಣ, ಸಮಯ ಕಾದು, ಅವಳೊಡನೆ ಮಾತನಾಡಿ ಅವಳ ಮನಸ್ನಲ್ಲಿ ಏನಿದೆ ಅಂತ ತಿಳ್ಕೋತೀನಿ.." ಎಂದಳು.

"ಅಷ್ಟು ಮಾಡು. ಅದಕ್ಕೇ ನಿನ್ನನ್ನು ಕರೆಸಿದ್ದು" ಅಂತಂದ.

ಮಂದಾಕಿನಿ ಒಳಕ್ಕೆ ಬರುತ್ತಿದ್ದಂತೆಯೇ ಶರತ್ ವಿನಯದಿಂದ "ನಮಸ್ಕಾರ ಆಂಟಿ" ಎಂದಿದ್ದ. ಮಂದಾಕಿನಿ ಮುಗುಳ್ನಕ್ಕಳು. ಅವನನ್ನೇ ಸಂಶಯದಿಂದ ನೋಡಿದಳು.

"ಹೇಗಿದೀಯಪ್ಪಾ!... ನಿನ್ನ ತಂಗಿ ಹೇಗಿದಾಳೇ?" ವಿಚಾರಿಸಿದಳು.

"ಹೂಂ, ಎಲ್ಲಾ ಸರಿಯಾಗಿದೀವಿ" ಎಂದಷ್ಟೇ ಹೇಳಿದ್ದ. ಚೈತ್ರಾ ತನ್ನ ರೂಮಿನಿಂದ ಹೊರಕ್ಕೆ ಬಂದಿರಲಿಲ್ಲ. ಅವಳನ್ನು ಮಾತನಾಡಿಸಲು, ಅವಳ ರೂಮಿನ ಕಡೆಗೆ ಹೊರಟಾಗ ಶರತ್ ತಡೆದಿದ್ದ. "ಈಗಲೇ ಬೇಡ, ಅವಳ ಮೂಡ್ ಚೆನ್ನಾಗಿಲ್ಲ" ಅಂತ ಹೇಳಿದ್ದ. ಆದರೂ ಅವಳ ಹೃದಯ ಚಡಪಡಿಸಿತು.. ಈಗ ತನಗೆ ಒಂದು ಅವಕಾಶ ಸಿಕ್ಕಿದೆ. ಆದಷ್ಟು ಬೇಗ ಅವಳಿಗೆ ತಿಳುವಳಿಕೆಯನ್ನು ಹೇಳಿ, ಅವಳು ಸುಖವಾಗಿರುವಂತೆ ಮಾಡಬೇಕು. ತನಗೂ ಅಽಕಾರವಿದೆ ಎಂದು ತಿಳಿಸಬೇಕು" ಎಂದುಕೊಂಡಳು.

ತಿಂಡಿ ಕಾಫಿಗಾಗಲೀ, ಮಧ್ಯಾಹ್ನದ ಊಟಕ್ಕಾಗಲೀ, ಚೈತ್ರಾ ರೂಮಿನಿಂದ ಹೊರಕ್ಕೆ ಬಂದಿರಲಿಲ್ಲ, ಅವಳಿಗೆ, ಮಂದಾಕಿನಿ ಬಂದಿರುವಳೆಂದು ತಿಳಿದಿತ್ತು. ಅವಳನ್ನು ನೋಡಿ, ಮಾತನಾಡಿಸಿ, ತನಗೇನಾಗಬೇಕಾಗಿದೆ ಅಂತಂದುಕೊಂಡು ಉದಾಸೀನವಾಗಿದ್ದು ಬಿಟ್ಟಳು.

ಶರತ್ ಆಫೀಸಿನಿಂದ ಫೋನು ಮಾಡಿ, ಚೈತ್ರಾಳನ್ನು ಕರೆಯಬೇಕೆಂದು ಹೇಳಿದ. ಅವನಾಗಿಯೇ ಒಂದು ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಾನೆಂದೆನಿಸಿತ್ತು. ರೂಮಿನ ಬಾಗಿಲ ಬಳಿ ನಿಂತು, "ಶರತ್ ಫೋನು ಮಾಡಿದಾರೆ, ನಿನ್ನನ್ನು ಕರೀತಿದಾರೆ" ಅಂತಂದಳು.

"ನನಗೆ ಮಾತನಾಡುವ ಮನಸ್ಸಿಲ್ಲ ಹಾಗಂತ ಹೇಳ್ಬಿಡಿ" ಎಂದಿದ್ದಳು ಅವಳ ಕಡೆ ತಿರುಗಿ ನೋಡದೆ...ಅವಳ ಮುಖ ಪೆಚ್ಚಾಗಿತ್ತು.. ಆದರೂ ಸಮಾಧಾನವನ್ನು ತಂದುಕೊಂಡು ಕೇಳಿದ್ದಳು.

"ಹೇಗಿದೀಯಮ್ಮ ಚೈತ್ರಾ..." ಚೈತ್ರಾ ಉತ್ತರಿಸದೇ ತನ್ನ ಪಾಡಿಗೆ ತಾನಿದ್ದಳು. ಸ್ವಲ್ಪ ಸಮಯದ ನಂತರ ಮಂದಾಕಿನಿ ರೂಮಿನ ಒಳಕ್ಕೆ ಬಂದಳು. ಚೈತ್ರ ನೋಡದವಳಂತೆ ಸುಮ್ಮನೆ ಕುಳಿತಿದ್ದಳು, ಮಂದಾಕಿನಿ ಮಾತನಾಡಿದಳು.

"ಯಾಕಮ್ಮ ಹೀಗಾಯ್ತು? ಅಪಹರಣಕಾರರು ಯಾರೂಂತ ತಿಳೀತಾ?.." ಚೈತ್ರ ಉತ್ತರಿಸಲಿಲ್ಲ. ಆದರೆ ಚಿದಾನಂದ ರಹಸ್ಯವನ್ನು ಹೊರಗೆಡವಿಲ್ಲ ಅಂತ ಅರಿತಳು.

"ಅದನ್ನು ತಿಳಿದುಕೊಂಡು ನಿಮಗೆ ಏನಾಗಬೇಕಾಗಿದೆ?" ಒರಟಾಗಿ ಕೇಳಿದಳು.

"ನಿಜ, ನಂಗೆ ಏನೂ ಆಗಬೇಕಾಗಿಲ್ಲ. ಆದರೆ, ನಿನ್ನ ಹಿತೈಷಿಗಳಲ್ಲಿ ನಾನೂ ಒಬ್ಬಳು. ಹೊಸಬಾಳು ಪ್ರಾರಂಭವಾಗುವ ಮೊದಲೇ ಹೀಗಾಗಬಾರದಾಗಿತ್ತು" ಲೊಚಗುಟ್ಟಿದಳು.

"ಸರಿ ಬಿಡಿ, ಅದು ನನ್ನ ಕರ್ಮ...ನನಗೆ ಯಾರ ಅನುಕಂಪವೂ ಬೇಕಾಗಿಲ್ಲ."

"ಅನುಕಂಪ ಅಲ್ಲ ಚೈತ್ರಾ....ನಿನ್ನ ಒಳಿತನ್ನು ಹಾರೈಸ್ತೀನಿ"

"ನೀವು?.. ಈಗ ನನಗೆ ಯಾರ ಅಗತ್ಯವೂ ಇಲ್ಲ, ಯಾವ ಮಾತೂ ಬೇಡ."

"ಹೀಗೆ ನಿರಾಶಳಾಗಬೇಡಮ್ಮ.. ನಿನ್ನ ಗಂಡನ ಮನೆಗೆ ಹೋಗಿ, ನೇರವಾಗಿ ಸಂಸಾರ ಮಾಡುವ ದಿನಗಳು ಬಂದೇ ಬರುತ್ತವೆ. ನಿನ್ನೊಂದಿಗೆ ನಾವೆಲ್ಲಾ ಇದೀವಿ.."

"ನಾವೆಲ್ಲಾ ಅಂದರೆ? ಯಾರ್‍ಯಾರು?..ಅಪ್ಪ ಅಮ್ಮನೇ ನನ್ನ ಪಾಲಿಗೆ ಇಲ್ಲವಾದ ಮೇಲೆ ನನಗೆ ಇನ್ಯಾರ ಅಗತ್ಯವೂ ಇಲ್ಲ, ಯಾರೂ ನನಗಿಲ್ಲ."

"ಹಾಗೆನ್ನ ಬೇಡಮ್ಮ.. ನಾನೂ ನಿನಗೆ ತಾಯಿ ಸಮಾನ.. ನಿನ್ನ ಮನಸ್ಸು ಕೆಟ್ಟಿದೆ. ತಾಳ್ಮೆಯಿಂದಿರು. ಎಲ್ಲಾ ಸರಿಹೋಗುತ್ತದೆ. ಬೇಕಾದರೆ, ನಾನು ರಾಜೀವನ ತಂದೆ ತಾಯಿಯ ಹತ್ತಿರ ಮಾತಾಡ್ತೀನಿ. ಒಟ್ನಲ್ಲಿ ನೀನು ಸುಖವಾಗಿರುವುದು ಮುಖ್ಯ.." ಮೆಲುವಾಗಿ ಹೇಳಿದಳು.

"ಈ ಅಧಿಕಾರವನ್ನು ನಾನು ನಿಮಗೆ ಕೊಟ್ಟಿಲ್ಲ" ಕೆನ್ನೆಗೆ ಹೊಡೆದಂತೆ ಹೇಳಿದಳು. ಮಂದಾಕಿನಿಗೆ ಅವಮಾನವಾದಂತಾಗಿತ್ತು. ಆದರೂ ಸರಿ ಮಾಡಿಕೊಂಡಳು.

"ನೀನು ಏನೇ ಮಾತ್ನಾಡು, ನಂಗೆ ಬೇಸರವಿಲ್ಲ.. ಆದರೆ ನೀನಾಗಿಯೇ ನೀನು ನಿನ್ನ ಕೈಯಾರ ನಿನ್ನ ಬಾಳನ್ನು ಹಾಳು ಮಾಡ್ಕೋಬೇಡ...ನೀನು ರಾಜೀವನ ಪತ್ನಿ. ನೀನು ಅವನ ಮನೆಯಲ್ಲಿರುವ ಅಧಿಕಾರ ನಿನಗಿದೆ."

"ನನಗೆ ಯಾವ ಅಧಿಕಾರ ಇದೆ, ಯಾವ ಅಧಿಕಾರ ಇಲ್ಲ ಅಂತ ನೀವೇನೂ ತಿಳಿಸಬೇಕಾಗಿಲ್ಲ. ನಿಮಗಂತೂ ಈ ಮನೆಯಲ್ಲಿ ಯಾವ ಅಧಿಕಾರವೂ ಇಲ್ಲ.. ಮತ್ತೆ ಮಾತನ್ನು ಮುಂದುವರೆಸಬೇಡಿ, ಹೊರಟು ಹೋಗಿ."

"ಇಲ್ಲ ಚೈತ್ರಾ, ನಿನ್ನ ಸಂಸಾರವನ್ನು ನೇರ ಮಾಡದೆ ನಾನು ಇಲ್ಲಿಂದ ಹೋಗುವವಳಲ್ಲ.."

"ನೀವು ಭಂಡ ಹೆಂಗಸು ಅಂತ ಭಾವಿಸ್ತೀನಿ. ನಾನು ಹೀಗೆ ಮಾತನಾಡಿದರೂ, ನಿಮಗೆ ಅವಮಾನ ಆಗುಲ್ವಾ!... ಮರ್ಯಾದೆ ಹೋಗುಲ್ವಾ?... ಛೀ.." ಕಟುವಾಗಿ ನುಡಿದಳು.

"ತಾಯಿ ಮಗಳ ನಡುವೆ ನಾಚಿಕೆ, ಮರ್ಯಾದೆ ಅವೆಲ್ಲಾ ಯಾಕೆ?.." ನೀನು ಎಷ್ಟು ಒರಟಾಗಿ ಮಾತನಾಡಿದರೂ, ನಾನು ನಿನ್ನನ್ನ ಕ್ಷಮಿಸ್ತೀನಿ.. ನಾನು ನಿನಗೆ ತಾಯಿಯಂತೆ..."

"ಏನು, ತಾಯಿ, ತಾಯಿ ಅಂತ ಸಲುಗೆ ತಗೋತೀರಿ.. ನೀವು ನನ್ನ ತಾಯಿಯಾಗಲು ಸಾಧ್ಯವಿಲ್ಲ.."

"ನೀನು ಹೀಗೆ ಒರಟಾಗಿ ಮಾತನಾಡಿದರೆ, ನಾನು ಒಂದು ನಿಜವನ್ನು ನಿನಗೆ ತಿಳಿಸಲೇ ಬೇಕಾಗುತ್ತೆ.. ಅದು ನೂರಕ್ಕೆ ನೂರು ನಿಜ. ನಾನು ನಿನ್ನನ್ನು ಹೆತ್ತ ತಾಯಿ.. ಅದು ನಿಜ.

ಚೈತ್ರಾ ವಿಚಿತ್ರವಾಗಿ ನಕ್ಕಳು. "ನೀವು ನನ್ನ ತಾಯಿ? ನನ್ನ ತಾಯಿ ಸತ್ತು ಕೆಲವು ವರ್ಷಗಳೇ ಕಳೆದು ಹೋಗಿವೆ.. ಅವಳು ಬದುಕಿಲ್ಲ, ಅಪ್ಪನಿಗೆ ಮರೆವು. ಇದೇ ನೆವ ಮಾಡಿಕೊಂಡು,

ಸುಳ್ಳು ಹೇಳಿಕೊಂಡು ನನ್ನ ತಾಯಿಯಾಗುವ ಪ್ರಯತ್ನವನ್ನು ಮಾಡ್ಬೇಡಿ, ಇಂಥಾ ದುರಾಸೆಯನ್ನು ಇಟ್ಕೊಳ್ಳಬೇಡಿ.."

"ದುರಾಸೆ ಅಲ್ಲಮ್ಮ.. ನಿಜವನ್ನೇ ಹೇಳ್ತಿದೀನಿ.. ನಿನ್ನನ್ನು ಒಂಭತ್ತು ತಿಂಗಳು ನನ್ನ ಒಡಲಲ್ಲಿ ಹೊತ್ತು, ಹೆರಿಗೆ ನೋವನ್ನು ಅನುಭವಿಸಿ ಹೆತ್ತಿದೀನಿ, ಹಾಲುಣಿಸಿದೀನಿ.."

"ಸಮಯ ಸಿಕ್ಕಿದೆ ಅಂತ ಏನೇನೋ ಕತೆ ಹೇಳ್ಬೇಡಿ.. ಇದನ್ನೆಲ್ಲಾ ಯಾರೂ ನಂಬುಲ್ಲ. ನಾನಂತೂ ನಂಬುವುದಿಲ್ಲ. ನನ್ನ ತಲೆ ತಿನ್ಬೇಡಿ.. ಬಂದು ಬಿಟ್ರು.. ಬಿಟ್ಟಿ. ಅಧಿಕಾರ ಸಿಗುತ್ತೆ ಅಂತ."

"ಹೌದು, ಯಾರೂ ನಂಬುವುದಿಲ್ಲ, ಆದರೆ ಈ ಮಾತು ದೇವರಾಣೆಗೂ ನಿಜ. ಸಾಕ್ಷಿಗಳೂ ಇವೆ.."

"ಎಲ್ಲಿವೆ ಸಾಕ್ಷಿಗಳು! ನೀವೇ ಸೃಷ್ಟಿ ಮಾಡಿರಬಹುದು. ಇಂಥಾ ದುರಾಲೋಚನೆ ನಿಮಗೆ ಬರಬಾರದಾಗಿತ್ತು.. ಇಲ್ಲಿ ದಕ್ಕಿಸಿಕೊಳ್ಳಲು ನಿಮಗೆ ಯಾವ ಆಸ್ತಿಯೂ ಇಲ್ಲ, ಇದ್ದರೂ ನಿಮಗೆ ಸಿಗುವುದಿಲ್ಲ. "ನಮ್ಮ ಸಮಸ್ಯೆಯಿಂದ ನೀವು ಲಾಭ ಪಡೆಯಲು ನೋಡ್ತಿದೀರಿ."

"ನನಗೆ ಯಾವ ಆಸ್ತಿಯೂ ಬೇಕಾಗಿಲ್ಲ, ಆ ದುರಾಸೆ ನನಗೆ ಎಂದೂ ಇರಲಿಲ್ಲ. ನೀನು ಹುಟ್ಟಿದ ಮೇಲೆ ಇವರುಗಳಿಗೆ ಒಪ್ಪಿಸಿ, ಬರಿಗೈಯಲ್ಲಿ ಹೋಗುತ್ತಿರಲಿಲ್ಲ. ನಿಮ್ಮ ತಂದೆ ಆರೋಗ್ಯವಾಗಿದ್ದಿದ್ದರೆ, ನನ್ನನ್ನು ಖಂಡಿತಾ ಗುರುತಿಸಿರುತಿದ್ರು.. ಅವರು, ಈ ವಿಷಯವನ್ನು ಗುಟ್ಟಾಗಿಯೇ ಇಟ್ಟಿದ್ದರು ಅಂತ ಕಾಣುತ್ತೆ, ಅದಕ್ಕೇ ನಿನಗೆ ತಿಳಿದಿಲ್ಲ."

"ಎಲ್ಲಾ ಸುಳ್ಳು.. ಗುಟ್ಟಾಗಿಡುವ ಮಾತೇ ಇಲ್ಲ. ಅವರೆಂದೂ ಹಾಗೆ ಮಾಡಿಲ್ಲ"

"ನಿನಗೆ ನನ್ನ ಮಾತಿನ ಮೇಲೆ ನಂಬಿಕೆ ಇಲ್ಲ. ಅದು ಸಹಜ.. ಹೋಗಲಿ ಬಿಡು. ನಾನು ನಿನ್ನ ತಾಯಿ ಎನ್ನುವ ಅಧಿಕಾರವನ್ನು ಚಲಾಯಿಸಲು ಇಲ್ಲಿಗೆ ಬಂದಿಲ್ಲ. ನಿನ್ನ ಒಳಿತನ್ನು ತಿಳಿಸಿ ಹೇಳಲು ಬಂದಿದೀನಿ.. ನನ್ನ ಮಾತನ್ನು ಕೇಳು.."

"ಹೋಗ್ರೀ.. ಹೋಗ್ರೀ, ಸಾಕು ನಿಮ್ಮ ಉಪದೇಶ. ನಾನೇ ಸಮಸ್ಯೆಗಳಲ್ಲಿ ಮುಳುಗಿ ಹೋಗಿದೀನಿ. ನಿಮ್ಮ ಕಾಟ ಬೇರೆ." ತಲೆಯನ್ನು ಎರಡೂ ಕೈಗಳಿಂದ ಹಿಡಿದುಕೊಂಡಳು.

"ಇಂಥಾ ಸಮಸ್ಯೆ ಮಾತ್ರ ಬರಬಾರದಾಗಿತ್ತು. ನೀನು ಹೆದರಬೇಡ. ನಾವುಗಳೆಲ್ಲಾ ಸೇರಿ ಸರಿ ಮಾಡ್ತೀವಿ."

"ಏನು ಸರಿ ಮಾಡ್ತೀರಿ! ಸುಳ್ಳು ಹೇಳ್ಕೊಂಡು ಏನು ಮಾಡ್ತೀರಿ ನೀವು?... ಇನ್ನಾದರೂ ಸುಮ್ಮನೇ ಹೋಗ್ತೀರಾ?" ಅವಳು ನಾಟಕೀಯವಾಗಿ ಕೈ ಮುಗಿದು ಆರ್ಭಟಿಸಿದಳು. ಮಂದಾಕಿನಿ ಪೆಚ್ಚು ಮುಖದಿಂದ ಹೊರಕ್ಕೆ ಬಂದಳು. ಹೊರ ಬಾಗಿಲಲ್ಲಿ ಶರತ್ ಎದುರಾದ. ಅವಳು ತಲೆ ತಗ್ಗಿಸಿ, ಮುಂದೆ ನಡೆದಳು. ಶರತ್ ಅವಳ ಹಿಂದೆ ಹಿಂದೆ ಬಂದು ಅವಳನ್ನು ನಿಲ್ಲಿಸಿದ.

"ಆಂಟಿ, ನಿಂತ್ಕೊಳ್ಳಿ, ನಾನು ನಿಮ್ಮ ಹತ್ರ ಸ್ವಲ್ಪ ಮಾತಾಡ್ಬೇಕು"

"ನಾನು ಚೈತ್ರಳ ಹತ್ರ ಮತ್ತೆ ಮಾತಾಡ್ತೀನಿ. ಈಗ ಅವಳ ಮನಸ್ಸು ಸರಿ ಇಲ್ಲ.."

"ಆ ವಿಷಯ ಅಲ್ಲ, ನಾನು ನೀವು ಆಡಿದ ಮಾತುಗಳನ್ನು ಕೇಳಿಸಿಕೊಂಡೆ, ಅದೇನದು? ಹಿಂದಿನ ವಿಷಯ! ನಿಜವೋ ಸುಳ್ಳೋ?"

"ಯಾವ ವಿಷಯ? ನಾನು ಯಾವ ವಿಷಯವನ್ನು ಆಡಿಲ್ಲ."

"ಸುಳ್ಳು ಹೇಳ್ಬೇಡಿ ಆಂಟಿ...ನೀವು ಹೇಳದಿದ್ರೆ ಚಿದಾನಂದನ್ನ ಕೇಳ್ತೀನಿ. ಈಗೇನು ರಹಸ್ಯ?" ಮಂದಾಕಿನಿ ಅವನನ್ನು ಸಮೀಪಿಸಿದಳು.

"ಬೇಡ, ಅವನನ್ನು ಏನೂ ಕೇಳ್ಬೇಡಿ, ಅವನಿಗೆ ಏನೂ ತಿಳಿಯದು.. ಈಗ ನೀವು ಅರ್ಧಂಬರ್ಧ ಕೇಳಿಸಿಕೊಂಡಿರುವುದರಿಂದ ಹೇಳಲೇ ಬೇಕಾಗಿದೆ. ಆದರೆ ಹೀಗೆ ಬಹಿರಂಗವಾಗಿ ಬೇಡ. ಎಲ್ಲಾದರೂ ಪ್ರತ್ಯೇಕವಾಗಿ ಕೂತು ಮಾತನಾಡೋಣ."

"ಸರಿ, ಹಾಗಾದ್ರೆ ಚಿದಾನಂದನನ್ನು ಆಚೆಗೆ ಕಳಿಸ್ತೀನಿ. ತಂದೆಯ ರೂಮಿನಲ್ಲಿ ಮಾತನಾಡೋಣ" ಇಬ್ಬರೂ ಮಹಡಿಯನ್ನೇರಿದರು. ಶರತ್ ಚಿದಾನಂದನನ್ನು ಮೆಡಿಕಲ್ ಸ್ಟೋರ್ಸ್‌ಗೆ ಕಳಿಸಿ, ತಂದೆಯ ಪಕ್ಕ ಇದ್ದ ಕುರ್ಚಿಯ ಮೇಲೆ ಕುಳಿತ. ಮಂದಾಕಿನಿ ತಲೆ ತಗ್ಗಿಸಿ ಮಾತನಾಡಿದಳು. ಹೇಳಬೇಕಾದುದನ್ನೆಲ್ಲಾ ಹೇಳಿ, ತಲೆ ಎತ್ತಿ ಅವನ ಕಡೆ ನೋಡಿದಳು.

ಅವಳನ್ನೇ ತೀಕ್ಷ್ಣವಾಗಿ ನೋಡುತ್ತಾ, ಹರಿತವಾಗಿ ನುಡಿದ. "ತಮಾಷೆ ಮಾಡ್ಬೇಡಿ, ಇಂಥಾ ಹಸೀ ಸುಳ್ಳನ್ನು ಹೇಳುವುದರಿಂದ ನಿಮಗೇನು ಲಾಭ?"

"ನನಗೇನು ಲಾಭ?.. ಇದುವರೆಗೆ ಹೇಳುವ ಪ್ರಮೇಯ ಒದಗಿರಲಿಲ್ಲ, ಹೇಳಲಿಲ್ಲ."

"ಓ ಈಗ ಅಂಥಾ ಪ್ರಮೇಯ ಏನು ಒದಗಿದೆ?..ಬೇಕೂಂತ ಅವಳ ತಲೆಯನ್ನು ಕೆಡಿಸ್ತಿದೀರಿ... ಮೊದಲೇ ಅವಳು ಯದ್ವಾ ತದ್ವಾ ಆಡ್ತಿದಾಳೆ."

"ಇಲ್ಲ ಶರತ್ ನನ್ನ ಮಾತನ್ನು ನಂಬು. ಅವಳಿಗೆ ಒಳ್ಳೆಯದಾಗಲಿ ಅಂತ ನಾನು ಬಯಸ್ತಿದೀನಿ.. ಅವಳು ವ್ಯಥೆ ಪಡುವುದನ್ನು ನನ್ನಿಂದ ನೋಡುಕ್ಕಾಗ್ತಿಲ್ಲ.. ನಾನು ಅವಳನ್ನು ಹೆತ್ತ ತಾಯಿ ಕಣಪ್ಪಾ...ನನಗೂ ಕರುಳು ಚುರುಕ್ ಅನ್ನುತ್ತೆ.."

"ಹೆತ್ತ ಮಗಳನ್ನು ನಿಮ್ಮ ಜೊತೆಗೆ ಕರ್ಕೊಂಡು ಹೋಗದೇ ಇಲ್ಯಾಕೆ ಬಿಟ್ರಿ?.. ಕಾರಣ ಏನು? ಇಲ್ಲಿ ಯಾವ ದುರಾಲೋಚನೆಯ ಮೇಲೆ ಬಿಟ್ಟಿದ್ದಿರಿ!.. ಈಗ ಸಮಯ ಸಾಧಿಸಿ, ನಿಮ್ಮಾಸೆಯನ್ನು ಪೂರೈಸಿಕೊಳ್ಳಲು ನೋಡ್ತಿದೀರಿ... ನಮಗೆಲ್ಲಾ ಗೊತ್ತಾಗುತ್ತೆ."

"ಇಲ್ಲಪ್ಪ, ನಾವು ಅಷ್ಟು ಕೆಟ್ಟೋರಲ್ಲ, ನಿಮ್ಮ ತಾಯಿ ಬದುಕಿದ್ದಿದ್ರೆ, ನಿಮ್ಮ ತಂದೆ ಸರಿಯಾಗಿದ್ದಿದ್ರೆ, ನಾನು ಈ ರಹಸ್ಯವನ್ನು ಬಹಿರಂಗಗೊಳಿಸ್ತಿರಲಿಲ್ಲ.."

"ನೀವೂ ಹೇಳೋ ಮಾತು ನಿಜವೇ ಆಗಿದ್ದರೆ, ಈಗಲೇ ಇವಳನ್ನು ಇಲ್ಲಿಂದ ಕರ್ಕೊಂಡು ಹೋಗಿ.."

"ಅವಳು ಬರೋದಾದ್ರೆ ಖಂಡಿತಾ ಕರ್ಕೊಂಡು ಹೋಗ್ತೀನಿ.. ಆದರೆ, ಅವಳಿಗೆ ಅಭ್ಯಾಸವಾಗಿರುವ ಅನುಕೂಲಗಳು ನಮ್ಮಲ್ಲಿಲ್ಲ. ಅವಳು ಒಪ್ತಾಳೋ ಇಲ್ಲವೋ? ಅಲ್ಲದೇ

ಈಗ ಅವಳ ಮದುವೆ ಆಗಿದೆ. ಅವಳನ್ನು ಒಪ್ಪಿಸಿ ಗಂಡನ ಮನೆಗೆ ಕಳಿಸುವ ಜವಾಬ್ದಾರಿ ನನ್ನ ಮೇಲಿದೆ."

"ಈ ವಿಷಯವನ್ನು ಮದುವೆ ಸಮಯದಲ್ಲೇ ಹೇಳ್ಬಹುದಾಗಿತ್ತಲ್ಲ."

"ಆಗಲೂ ನೀವ್ಯಾರೂ ನನ್ನ ಮಾತನ್ನು ನಂಬ್ತಿರ್ಲಿಲ್ಲ. ರಾಜೀವ ಇವಳನ್ನು ಮದುವೆ ಆಗ್ತಿದ್ನೋ ಇಲ್ಲವೋ ಮದುವೆಯನ್ನು ತಪ್ಪಿಸಿದ ಹಾಗಾಗ್ತಿತ್ತು."

"ಈಗಲು ಈ ಮದುವೆ ಮುರಿದ ಹಾಗೇ.. ಅವನು ಇವಳನ್ನು ಕರೆಯುವುದಿಲ್ಲ. ಇವಳು ಹೋಗಲು ಸಿದ್ಧಳಿಲ್ಲ. ನಿಮ್ಮ ಜೊತೆಗೆ ಕರ್ಕೊಂಡು ಹೋಗಿ.. ನನ್ನ ರಕ್ತವನ್ನು ಹಂಚಿಕೊಂಡು ಹುಟ್ಟಿಲ್ಲದವಳ ಸಂಬಂಧವೂ ಬೇಡ; ಸಹವಾಸವೂ ಬೇಡ.." ಕಟುವಾಗಿ ಹೇಳಿದ.

"ಇಷ್ಟು ದ್ವೇಷಿಸ್ಬೇಡ ಶರತ್.. ನಿನ್ನ ಸ್ವಂತ ತಂಗಿ ಅಲ್ಲದಿದ್ದರೇನು!.. ನಿನ್ನ ತಂಗಿಯಂತೆ, ಜೊತೆ ಜೊತೆಯಲ್ಲಿ ಬೆಳೆದಿದಾಳೆ.. ಈ ನೆಂಟಸ್ತಿಕೆ ಎಲ್ಲಿ ಹೋಗುತ್ತೆ?"

"ಈ ನೆಂಟಸ್ತಿಕೆ ನಂಗೆ ಬೇಡ. ನಿಜ ತಿಳಿದ ಮೇಲೆ ನಾವು ಒಂದೇ ಕಡೆ ಇರುವುದು ಕಷ್ಟವಾಗುತ್ತೆ.." ನಿರಾಕರಣೆಯ ದನಿ ಸೇರಿತ್ತು.

"ಅವಳನ್ನು ಸಮಸ್ಯೆಯ ಸುಳಿಗೆ ಸಿಕ್ಕಿಸಿ, ನಿನ್ನ ಅನುಕೂಲಕ್ಕೆ ಬಳಸಿಕೊಳ್ಳುವಾಗ ಎಲ್ಲಾ ಸರಿಯಾಗಿತ್ತು. ಈಗ ಸಂಬಂಧವಿಲ್ಲ ಅಂತ ತಿಳಿದ್ಮೇಲೆ ಹೀಗೆ ಆಡೋದು ನ್ಯಾಯಾನ?

"ನ್ಯಾಯ ಅನ್ಯಾಯದ ಬಗ್ಗೆ ನೀವು ಮಾತಾಡ್ಬೇಡಿ.. ನಂಗೆ ಎಲ್ಲವೂ ಗೊತ್ತು."

"ಇಲ್ಲ ಶರತ್.. ನಿಂಗೆ ಏನೂ ಗೊತ್ತಿಲ್ಲ.. ಇದಕ್ಕಿಂತ ಮುಖ್ಯವಾದ, ಇನ್ನು ಒಂದು ವಿಷಯವಿದೆ. ಅದನ್ನು ತಿಳಿಸಿದರೆ ನಿನಗೆ ಆಘಾತವಾಗುವುದು ಖಂಡಿತಾ.. ಆಗ ನ್ಯಾಯ ಯಾವುದು, ಅನ್ಯಾಯ ಯಾವುದು ಅಂತ ನಾನು ವಿವರಿಸಿ ಹೇಳ್ತೀನಿ.."

"ಸಾಕು ನಿಲ್ಲಿಸಿ. ಇಂಥಾ ಅಸಂಬದ್ಧ ಮಾತುಗಳನ್ನು ಕೇಳಲು ಸಮಯವಿಲ್ಲ."

"ಯಾಕೆ? ಈಗ ಇದ್ದಕ್ಕಿದ್ದ ಹಾಗೆ ನನ್ನ ಮಾತು ಅಸಂಬದ್ಧ ಅನ್ನಿಸ್ತಿದೆಯಾ?.. ನಿನ್ನ ತಂದೆ ತಾಯಿ ದೊಡ್ಡ ಹೃದಯದವರು, ಗುಟ್ಟನ್ನು ಹೊರಗೆಡವಲಿಲ್ಲ.."

"ಯಾವ ಗುಟ್ಟು!.. ಹಾಗೇನಾದ್ರೂ ಮಹತ್ತರವಾದ ಗುಟ್ಟಿನ ವಿಷಯ ಇದ್ದಿದ್ದರೆ, ನನ್ನ ತಂದೆ ತನ್ನ ಸ್ವಂತ ಮಗನಿಗೆ ಹೇಳದೇ ಇರ್ತಿದ್ರಾ!.."

"ಅವರು ನಿನ್ನ ಮೇಲಿನ ಪ್ರೀತಿಯಿಂದ ನಿನಗೆ ಹೇಳಿಲ್ಲದಿರಬಹುದು. ಆದರೆ....ನೀನು ಅವರ ಸ್ವಂತ ಮಗನಲ್ಲ.. ಇದೂ ನಿಜವೇ.."

"ಷಟಪ್!.." ಶರತ್ ಸಿಟ್ಟಿನಿಂದ ಅರಚಿದ... "ಇಂಥಾ ಸುಳ್ಳುಗಳನ್ನು ನನಗೆ ನನ್ನ ಮನೆಯಲ್ಲಿ ಹೇಳುವ ಉದ್ಧಟತನ... ನಿಮಗೆ !..ಛೀ.. ನೀವು ಇಂಥಾ ಹೆಂಗಸು ಅಂತ ತಿಳಿದಿದ್ರೆ ನಿಮ್ಮನ್ನು ಈ ಮನೆಯೊಳಕ್ಕೆ ಸೇರಿಸ್ತಿರಲಿಲ್ಲ.. ಅಸಹ್ಯ..!"

"ನಿಮ್ಮ ತಂದೆ, ನನ್ನನ್ನು ಈ ಮನೆಯೊಳಕ್ಕೆ ಕರೆತಂದು ನನಗೆ ಆಶ್ರಯಕೊಟ್ಟು ಸಹಾಯ

ಮಾಡಿದರು.. ಅಂಥೋರ ಮನೇಲಿ, ನಾನು ಯಾವ ಉದ್ಧಟತನದಿಂದಲೂ ವರ್ತಿಸಿರಲಿಲ್ಲ. ವರ್ತಿಸುವುದಿಲ್ಲ."

"ಮತ್ತಿನ್ನೇನು ಮಾಡ್ತಿದೀರಿ! ಈ ಸುಳ್ಳು ನಾಟಕವೆಲ್ಲಾ ಯಾತಕ್ಕಾಗಿ? ನಿಮ್ಮ ಮಾತುಗಳನ್ನು ಸುಲಭವಾಗಿ ನಂಬುವಷ್ಟು ಮೂರ್ಖ ನಾನಲ್ಲ. ನಮ್ಮ ಆಸ್ತಿಯನ್ನು ಹೊಡೆಯುವ ಆಸೆ ಇದ್ದರೆ...ಈಗಲೇ ನಿಮ್ಮನ್ನು ಪೋಲಿಸರಿಗೆ ವಹಿಸಿಕೊಡಬಲ್ಲೆ.. ಅಂಥಾದ್ದೇನಾದರೂ, ತೀರ್ಮಾನ ತಗೊಳ್ಳುವ ಮೊದಲೇ, ನೀವು ಇಲ್ಲಿಂದ ಹೊರಟು ಬಿಡಿ.. ನಿಮ್ಮ ಅವಶ್ಯಕತೆ ನಮಗಿಲ್ಲ."

"ಸರಿ, ನಾನು ಇಲ್ಲಿ ಇರುವುದಿಲ್ಲ. ಹೊರಟು ಹೋಗ್ತೀನಿ. ನಿಮ್ಮ ಆಸ್ತಿಯ ತುಣುಕೂ ನನಗೆ ಬೇಕಿರಲಿಲ್ಲ. ಹಾಗೆ ಆಸೆ ಇದ್ದಿದ್ದರೆ, ಈ ಹಿಂದೆಯೇ, ನಿಮ್ಮ ತಂದೆಯವರನ್ನು ಕೇಳಿ, ಪಡೆಯಬಹುದಾಗಿತ್ತು. ಇಲ್ಲಿಂದ ಹೋಗುತ್ತಲೂ ಇರಲಿಲ್ಲ. ಇಷ್ಟು ವರ್ಷಗಳ ನಂತರ ಯಶವಂತರಾಯರ ಉಪಕಾರದ ಋಣವನ್ನು ತೀರಿಸುವುದಕ್ಕೋಸ್ಕರ, ಅವರ ಸೇವೆಗಾಗಿ ನನ್ನ ಮಗನನ್ನು ಇಲ್ಲಿ ಬಿಟ್ಟಿದೀನಿ.. ಅಷ್ಟಲ್ಲದೇ ಬೇರೆ ಯಾವ ಆಸೆಯೂ ಇಲ್ಲ."

"ಆಗ ಮಗಳನ್ನು ಇಲ್ಲಿ ಬಿಟ್ಟು ಹೋದಿರಿ. ಈಗ ಮಗನನ್ನು ಕರೆತಂದು ಸೇರಿಸಿದ್ದೀರಿ. ನಿಮ್ಮ ಉದ್ದೇಶ ಏನಿದೆ?.. ಯಶವಂತರಾಯರು ನಿಮಗೆ ಆಶ್ರಯ ಕೊಟ್ಟಿದ್ಯಾಕೆ? ನಿಮಗೂ ಅವರಿಗೂ ಏನು ಸಂಬಂಧ?..."

"ಮಾನವೀಯತೆಯ ಸಂಬಂಧ? ಅದಕ್ಕೆ ಬೆಲೆ ಇಲ್ಲ..."

"ಹಾಗಾದರೆ ಈ ಸಂಬಂಧಗಳಿಗೆ ಅರ್ಥ ಏನು?.. ನಾನು ಯಶವಂತರಾಯರ ಮಗನಲ್ಲ.. ಚೈತ್ರಾ ನಿಮ್ಮ ಮಗಳು.. ಚಿದಾನಂದ ಯಾರ ಮಗ? ನನ್ನ ತಂದೆ ತಾಯಿ ಯಾರು?.. ವಿಕಟವಾಗಿ ನಕ್ಕ. ವಿಚಿತ್ರ ಸಂಬಂಧ.. ಎಲ್ಲಾ ವಿಕೃತ.." ಮತ್ತೆ ಮತ್ತೆ ನಕ್ಕ.

"ಹಾಗೆ ಕೆಟ್ಟದ್ದಾಗಿ ನಗ್ಬೇಡ ಶರತ್.. ನನ್ನ ಮಾತುಗಳು ದೇವರಾಣೆಗೂ ಸತ್ಯವಾದದ್ದು, ಸಾಕ್ಷಿಗಳಿವೆ.."

"ಓ ಈ ಕತೆಗಳಿಗೆ ಸಾಕ್ಷಿಗಳನ್ನು ಹುಟ್ಟಿಸಿದ್ದೀರೋ? ಎಲ್ಲಿದೆ ತೋರ್ಸಿ ನೋಡೋಣ.."

"ಚೈತ್ರಾ ಹುಟ್ಟಿದ ನರ್ಸಿಂಗ್ ಹೋಂನಲ್ಲಿ, ರೆಕಾರ್ಡ್ಸ್‌ಗಳಿವೆ. ನನ್ನ ಹತ್ತಿರ ಅವಳ ಬರ್ತ್ ಸರ್ಟಿಫಿಕೇಟ್‌ನ ಕಾಪಿ ಇದೆ. ಹಾಗೇ, ನೀನು ಅವರ ದತ್ತು ಪುತ್ರ ಎನ್ನುವುದಕ್ಕೆ ಪತ್ರಗಳಿವೆ. ನಿಮ್ಮ ತಂದೆಯರ ಬಳಿ ಎಲ್ಲಾ ಪುರಾವೆಗಳಿವೆ.

"ನಮ್ಮ ತಂದೆ ಹತ್ರ ಏನಿತ್ತು ಏನಿಲ್ಲ ಅಂತ ನಂಗೆಲ್ಲಾ ಗೊತ್ತು ಬಿಡಿ" ಅವನೆಂದ.

"ಹಾಗಲ್ಲ ಶರತ್.. ಮಾತಿಗೆ ಹೇಳ್ದೆ.. ನಿಮ್ಮ ತಂದೆ ತುಂಬಾ ಒಳ್ಳೆಯವರು, ನಿಮ್ಮಿಬ್ಬರನ್ನು ಸ್ವಂತ ಮಕ್ಕಳಂತೆ ಬೆಳೆಸಿದಾರೆ. ಏನೂ ಅನ್ಯಾಯ ಮಾಡಿಲ್ಲ.."

"ನಮ್ಮ ತಂದೆ ಏನೂಂತ ನಿಮಗಿಂತ ಚೆನ್ನಾಗಿ ಗೊತ್ತು.. ಅವರನ್ನು ಹೊಗಳಿ, ನನ್ನನ್ನು ಮೆಚ್ಚಿಸಿ, ಯಾವ ದಾನ ಹಾಕ್ಬೇಕು ಅಂತಿದೀರಾ!"

"ನನಗೆ ಏನೂ ಆಸೆ ಇಲ್ಲ ಶರತ್.. ಆಕಸ್ಮಿಕವಾಗಿ ನನ್ನಿಂದ ಈ ರಹಸ್ಯ ಹೊರಬಿತ್ತು.

ನೀನು ಅವಳ ಸ್ವಂತ ಅಣ್ಣನಲ್ಲವೆನ್ನುವುದು ಚೈತ್ರಾಳ ಗಂಡನಿಗೆ ತಿಳಿಯಬಾರದು.. ಅವನು ಅವಳನ್ನು ಉದಾಸೀನವಾಗಿ ಕಾಣಬಹುದು. ನಾನು ತಪ್ಪು ಮಾಡ್ಬಿಟ್ಟೆ.. ಹಾಗೇ ನೀನು ದತ್ತು ಮಗ ಅನ್ನುವ ವಿಷಯವನ್ನು ಕೂಡಾ ಯಾರಿಗೂ ಹೇಳ್ಬೇಡ."

"ಯಾರಿಗೆ ಏನು ಹೇಳ್ಬೇಕು, ಏನು ಹೇಳ್ಬಾರ್ದು ಅನ್ನೋದು ನಂಗೂ ಗೊತ್ತಿದೆ. ನಾನು ನಿಮ್ಮನ್ನು ಕರೆಸಿ ತಪ್ಪು ಮಾಡಿದೆ. ಆದಷ್ಟು ಬೇಗ ವಾಪಸ್ಸು ಹೊರಟು ಹೋಗಿ. ಆಗಲೇ ನಮಗೆಲ್ಲಾ ಕ್ಷೇಮ. ಶರತ್ ಒರಟಾಗಿ ನುಡಿದು, ತಂದೆಯ ಕಡೆಗೊಮ್ಮೆ ತೀಕ್ಷ್ಣವಾಗಿ ನೋಡಿ ಅಲ್ಲಿಂದ ಹೊರಬಿದ್ದ. ಮಂದಾಕಿನಿ, ಯಶವಂತರಯರ ಕಡೆ ನೋಡಿ, ಕೈ ಮುಗಿದು, "ತಪ್ಪಾಯಿತು ಕ್ಷಮಿಸಿ" ಎಂದು ಮನದಲ್ಲೇ ಹೇಳಿ ಕಣ್ಣುಗಳನ್ನೊರೆಸಿಕೊಂಡಳು.

* * *

ಇದ್ದಕ್ಕಿದ್ದಂತೆ ಬಂದ ಶರತ್‌ನ ಕಂಡು ರಾಜೀವ ಅಚ್ಚರಿಗೊಂಡ. ಮನದಲ್ಲೇ ನಕ್ಕ. ಶರತ್ ನೇರವಾಗಿ ಹೇಳಿದ. "ಚೈತ್ರಾ ನನ್ನ ಮನೆಗೆ ಬಂದು ಹದಿನೈದು ದಿನಗಳಾದವು. ಅವಳಿಗೆ ನಿನ್ನ ಆಸರೆ, ಆಶ್ರಯ ಎರಡೂ ಬೇಕು, ಇನ್ನು ಎಷ್ಟು ದಿನ ಯೋಚಿಸ್ತಾನೇ ಇರ್ತೀಯ? ಆದಷ್ಟು ಬೇಗ ಅವಳನ್ನು ಕರೆಸ್ಕೋ.."

"ಇಲ್ಲ ಶರತ್, ನಾನು ಒಂದು ತೀರ್ಮಾನವನ್ನು ತಗೊಂಡಿದೀನಿ. ನಾನು ಅವಳನ್ನು ಪ್ರೀತಿಸಿದ್ದು ನಿಜ. ಮದುವೆಯಾದದ್ದು ನಿಜ. ಆದರೆ, ಮೊದಲ ರಾತ್ರಿಯೇ ಅವಳನ್ನು ಯಾರೋ ಅಪಹರಿಸಿ, ನಡೆಯಬಾರದ ಘಟನೆ ನಡೆದದ್ದು ನಿಜ ತಾನೇ...? ನನ್ನ ಮನಸ್ಸು ಒಡೆದು ಹೋಗಿದೆ. ಅದನ್ನು ಸರಿಪಡಿಸಲು ಸಾಧ್ಯವಿಲ್ಲ ಅನ್ನುವ ಮಾತೂ ನಿಜ."

"ಅಂದರೇ.. ನಿನ್ನ ಮಾತಿನ ಅರ್ಥ ಏನು?"

"ನಾನು ನನ್ನ ಹೆಂಡತಿಗೆ ಡೈವೋರ್ಸ್ ಕೊಡ್ಬೇಕು ಅಂತ ನಿರ್ಧರಿಸಿದೀನಿ."

"ಡೈವೋರ್ಸ್? ನಿನಗ್ಯಾಕೆ ಇಂಥಾ ದುರ್ಬುದ್ಧಿ ಬಂತೋ ರಾಜೀವ?"

"ಆ ನಾಲ್ಕಾರು ದಿನಗಳು ಎಲ್ಲಿದ್ದಳೋ, ಹೇಗಿದ್ದಳೋ ಅಂತ ನೆನೆಸ್ಕೊಂಡ್ರೆ ಮೈ ಮೇಲೆ ಮುಳ್ಳುಗಳು ಏಳುತ್ತವೆ. ಗಂಡ ಹೆಂಡತಿಯರಂತೆ, ಸಾಮರಸ್ಯದಿಂದ ಇರಲು ಖಂಡಿತಾ ಸಾಧ್ಯವಿಲ್ಲ.. ಎಲ್ಲೋ ಯಾರೊಂದಿಗೋ ಇದ್ದುದು ನಿಜ ತಾನೇ?"

"ಹೀಗೆ ಅನ್ಯಾಯ ಮಾಡ್ಬೇಡ ನೀನು. ಅವಳಿಗಿನ್ನು ಚಿಕ್ಕ ವಯಸ್ಸು. ಮುಂದೆ ಅವಳ ಗತಿ ಏನು ಅನ್ನೋ ಪ್ರಜ್ಞೆ ಬೇಡ್ವಾ ನಿಂಗೆ?"

"ಮದುವೆ ಮಾಡ್ಕೊಂಡ ತಪ್ಪಿಗೆ, ಒಂದಿಷ್ಟು ಜೀವನಾಂಶಕ್ಕೆ ಅಂತ ಹಣಾನ ಕೊಡ್ತೀನಿ. ಈ ಹಿನ್ನೆಲೆಗಳೆಲ್ಲಾ ತಿಳಿಯದ ಒಬ್ಬ ಗಂಡನ್ನು ನೋಡಿ ಮದುವೆ ಮಾಡು. ಸುಖವಾಗಿರಲಿ. ನಾವಿಬ್ಬರೂ ಒಟ್ಟಿಗೆ ಇದ್ದರೆ ಸುಖವಾಗಿರುವುದಂತೂ ಸಾಧ್ಯವಿಲ್ಲ." ಅದೆಷ್ಟೋ ವಿನಯವನ್ನು ತೋರಿದ.

"ಚೈತ್ರಾ ಇದಕ್ಕೆ ಒಪ್ಪುವುದಿಲ್ಲ, ನೀನಾಗಿಯೇ ಬಂದು ಕರೆಯಲಿ ಅಂತ ಕಾಯ್ತಾ ಇದಾಳೆ..

ಅವಳನ್ನು ಕರೆಸ್ಕೋ ಎಲ್ಲಾ ಸರಿ ಹೋಗುತ್ತೆ.."

"ಆ ದಿನ ಅವಳು ಆಡಿದ್ದನ್ನ ಮರೆತು, ಬೇಡ್ಕೋತಾ ಇದೀಯಲ್ಲ ಶರತ್.."

"ಮತ್ತೇನು ಮಾಡ್ಲೀ!... ನಾನು ಅವಳ ಅಣ್ಣ, ಅವಳಿಗೆ ತಿಳುವಳಿಕೆ ಸಾಲದು. ಅವಳ ಜವಾಬ್ದಾರಿ ನನ್ನ ಮೇಲಿದೆ.."

"ನಿನ್ನ ಜವಾಬ್ದಾರಿಯನ್ನು ನನ್ನ ಹೆಗಲಿಗೆ ತಳ್ಳಬೇಡ ಶರತ್.. ನಿನ್ನ ತಂಗಿಯ ಹತ್ರ ಸಮಾಧಾನವಾಗಿ ಮಾತನಾಡು.. ಅವಳು ಒಪ್ಕೋತಾಳೆ. ನಿನ್ನ ತಂಗಿ ಸುಖವಾಗಿರಲಿ ಅನ್ನೋ ಆಸೆ ನಿನಗಿಲ್ವಾ?"

"ರಾಜೀವ ದುಡುಕಬೇಡ. ನಿಧಾನವಾಗಿ ಯೋಚಿಸು. ಇಬ್ಬರೂ ಒಟ್ಟಿಗೆ ಕೂತು ಮಾತನಾಡಿ.. ಅವಳ ತಪ್ಪೇನಿದೆ ನೀನೇ ಹೇಳು.."

"ನನ್ನದೂ ತಪ್ಪಿಲ್ಲ. ಆದರೆ ನನಗ್ಯಾವ ಕರ್ಮ? ನಡೆದದ್ದನ್ನೆಲ್ಲ ಮರೆತು ಹಾಯಾಗಿರಲು ನನ್ನಿಂದ ಆಗುವುದಿಲ್ಲ. ನನ್ನ ಹೃದಯ ಅಷ್ಟು ದೊಡ್ಡದಲ್ಲ."

"ನೀನು ಇಷ್ಟು ನಿಷ್ಕರುಣಿ ಅಂತ ಭಾವಿಸಿರಲಿಲ್ಲ.."

"ಏನು ಬೇಕಾದ್ರೂ ಅಂದ್ಕೋ.. ನನ್ನ ಜಾಗದಲ್ಲಿ ನೀನೇ ಇದ್ದಿದ್ದರೂ, ಹೀಗೇ ನಡೆದುಕೊಳ್ತಿದ್ದೆ. ಒಂದೇ ಒಂದು ರಾತ್ರಿ ಅವಳೊಡನೆ ಮಲಗಿರಲಿಲ್ಲ, ಆದರೆ ಇನ್ನು ಮುಂದೆ ಒಂದೇ ರೂಮನಲ್ಲಿ, ಬೇರೆ ಬೇರೆ ಹಾಸಿಗೆಗಳಲ್ಲಿ ಮಲಗುವುದು ಕೂಡಾ ಹಾಸ್ಯಾಸ್ಪದ ವಾಗುತ್ತದೆ. ಕನಿಕರದಿಂದ, ಅವಳು ನನ್ನ ಹೆಂಡತಿ ಅಂತ ಸಾಕುವುದು ಕಷ್ಟವಾಗುತ್ತದೆ."

"ಹಾಗಾದರೆ ನಾನು ನಿನ್ನ ತಂದೆ ತಾಯಿಯ ಹತ್ತಿರ ಮಾತನ್ನಾಡಬೇಕಾಗುತ್ತೆ."

"ಈ ವಿಷಯಕ್ಕೆ ಅವರು ಬಾಯಿ ಹಾಕುವುದಿಲ್ಲ. ನನ್ನ ನಿರ್ಧಾರವೇ ಅವರ ನಿರ್ಧಾರ. ಇನ್ನು ಚರ್ಚೆ ಸಾಕು. ಎಂದಾದ್ರೂ ಅವಳನ್ನು ನಮ್ಮ ಮನೆಗೆ ಕರ್ಕೊಂಡು ಬಾ, ನಾನೇ ಮಾತಾಡ್ತೀನಿ.."

"ನಿನಗೆ ಅವಳು ಬೇಡವಾದ್ಮೇಲೆ, ಅವಳ್ಯಾಕೆ ಇಲ್ಲಿಗೆ ಬರ್ತಾಳೆ? ನಿನ್ನ ಈ ಮಾತುಗಳೇಕೆ ಬೇಕು?..."

"ಮತ್ತೆ! ನಾನು ನಿನ್ನ ಮನೆಗೆ ಬಂದು ಮಾತಾಡ್ಬೇಕಾ!"

"ಆ ಸೌಜನ್ಯ ನಿನ್ನಲ್ಲಿ ಇಲ್ಲದಿದ್ದರೆ ನಾನೇನು ಹೇಳಲಿ!...." ಎಂದು ವ್ಯಂಗ್ಯವಾಗಿ ನುಡಿದು ಮನೆಯಿಂದ ಹೊರಬಿದ್ದ. ಗೇಟಿನ ಬಳಿಗೆ ಬರುವಷ್ಟರಲ್ಲಿ ಆಟೋ ರಿಕ್ಷಾದಿಂದ ಇಳಿಯುತ್ತಿದ್ದ ಚಿದಾನಂದ ಹಾಗೂ ಮಂದಾಕಿನಿಯನ್ನು ಕಂಡ. ಕ್ಷೀಣವಾಗಿ ಮುಗುಳ್ನಕ್ಕ.

"ಅಮ್ಮ, ರಾಜೀವನ ತಾಯಿಯ ಹತ್ರ ಮಾತಾಡ್ಬೇಕು ಅಂತಂದ್ರು.." ಚಿದಾನಂದನೆಂದ. ಶರತ್ ಸುಮ್ಮನೇ ಮಂದಾಕಿನಿಯ ಕಡೆ ನೋಡಿದ. ಅವಳು ತಲೆಯನ್ನು ತಗ್ಗಿಸಿದಳು. ಅವನು ಗೇಟನ್ನು ದಾಟಿ, ಬೈಕನ್ನು ನಿಲ್ಲಿಸಿದ್ದ ಕಡೆಗೆ ನಡೆದ. ಮಂದಾಕಿನಿ, ಚಿದಾನಂದ ಇಬ್ಬರೂ ಹತ್ತು ಹೆಜ್ಜೆ ನಡೆದು, ಮನೆಯನ್ನು ಸಮೀಪಿಸಿದರು. ರಾಜೀವನ ತಾಯಿ ಮುಂಬಾಗಿಲಿಗೆ ಬಂದಳು.

ಮಂದಾಕಿನಿ ತನ್ನ ಪರಿಚಯವನ್ನು ಹೇಳಿಕೊಂಡಳು.

"ನಾನು ನಿಮ್ಮ ಹತ್ರ ಸ್ವಲ್ಪ ಮಾತ್ನಾಡ್ಬೇಕಾಗಿತ್ತು.." ಎಂದಳು. ಆಕೆ ಇಬ್ಬರನ್ನು ಒಳಕ್ಕೆ ಕರೆದು ಕೂತ್ಕೊಳ್ಳುವಂತೆ ಹೇಳಿದಳು.

"ನಾನು ಚೈತ್ರಾಳ ವಿಷಯವನ್ನು ಮಾತಾಡ್ಬೇಕು. ಹೊಸದಾಗಿ ಮದುವೆಯಾದ ಹುಡುಗಿ. ಮಂಕಾಗಿಬಿಟ್ಟಿದಾಳೆ. ಏನೇನೋ ಮಾತಾಡ್ತಾಳೆ. ಆದಷ್ಟು ಬೇಗ ಅವಳನ್ನು ನಿಮ್ಮ ಮನೆಗೆ ಕರೆಸಿಕೊಳ್ಳಿ, ಅವಳು ಗೆಲುವಾಗ್ತಾಳೆ.." ಮಂದಾಕಿನಿ, ಕಳಕಳಿಯಿಂದ ಆಕೆಯಲ್ಲಿ ವಿನಂತಿಸಿಕೊಂಡಳು. ಆಕೆ ಕೈ ಚೆಲ್ಲಿ ನುಡಿದಳು.

"ನಮಗೂ ಬಹಳ ನೋವಾಗಿದೆ ಮಂದಾಕಿನಿಯವರೇ, ರಾಜೀವ ನಮ್ಮ ಮಗ ಅವನ ಸಂತೋಷಕ್ಕಾಗಿ, ಅವನು ಪ್ರೀತಿಸಿದವಳನ್ನು ಮದುವೆಯಾಗಲು ಸಮ್ಮತಿಯನ್ನು ಕೊಟ್ಟೆವು.. ಈಗ ಅವನಿಗೂ ಆಘಾತವಾಗಿದೆ. ಅವನ ಸುಖ ನೆಮ್ಮದಿ ನಮಗೆ ಮುಖ್ಯ ಅವನದೇ ಅಂತಿಮ ನಿರ್ಧಾರ. ಯಾವುದೇ ಕಾರಣಕ್ಕೂ ಅವನನ್ನು ಬಲವಂತ ಪಡಿಸಲು ಆಗುವುದಿಲ್ಲ. ಈ ವಿಷಯದಲ್ಲಿ ನಾವು ತಲೆ ಹಾಕುವುದಿಲ್ಲ.." ನೇರವಾಗಿ ಹೇಳಿದಳು.

"ಅಂದರೇ..? ಮುಂದೆ?"

"ಹೌದು, ಅವನು ಚೈತ್ರಾಳಿಗೆ ಡೈವೋರ್ಸ್ ಕೊಡಬೇಕು ಅಂತ ಇದಾನೆ"

"ಡೈವೋರ್ಸಾ?.. ಹೀಗೆ ಮಾತ್ರ ಆಗಲು ಬಿಡಬೇಡಿ. ನೀವು ಹಿರಿಯರು ನಿಮ್ಮ ಮಗನಿಗೆ ತಿಳುವಳಿಕೆಯನ್ನು ಹೇಳಿ.. ಈ ಅನಾಹುತವನ್ನು ತಪ್ಪಿಸಿ.. ಚೈತ್ರಳ ಬಾಳು ಹಾಳಾಗಿ ಹೋಗುತ್ತದೆ.. ಅವಳ ತಪ್ಪು ಏನೂ ಇಲ್ಲವಲ್ಲ."

"ಈಗ ಏನು ಉಳಿದಿದೆ ನೀವೇ ಹೇಳಿ. ನಮ್ಮ ರಾಜೀವ ಯಾಕೆ ಎಲ್ಲಾ ಸುಖದಿಂದ ವಂಚಿತನಾಗ್ಬೇಕು? ಈಗ ಅವನಿಗೆ ಅವಳೊಡನೆ ಸಂಸಾರ ನಡೆಸುವ ಮನಸ್ಸಿಲ್ಲ. ಅಂಥೋನಿಗೆ ಏನು ತಿಳುವಳಿಕೆ ಹೇಳೋದು?.."

"ಹೀಗೆ ಹೇಳ್ಬೇಡಿ.. ಈ ಘಟನೆಯಲ್ಲಿ ಚೈತ್ರಳ ತಪ್ಪು ಏನಿದೆ ನೀವೇ ಹೇಳಿ.. ಹಾಗಿದ್ದರೂ ಅವಳು ಕಷ್ಟ ಪಡಬೇಕೆ?"

"ಅದು ಅವಳ ಹಣೇ ಬರಹ. ಅದನ್ನು ನಾವು ತಪ್ಪಿಸಲು ಸಾಧ್ಯವಿಲ್ಲ. ಮತ್ತೆ ಮತ್ತೆ ಈ ವಿಷಯದಲ್ಲಿ ಚರ್ಚೆ ಬೇಡ. ಸುಮ್ಮನೇ ನಮಗ್ಯಾಕೆ ತೊಂದರೆ ಕೊಡ್ತೀರಾ?.." ಆಕೆ ನಿಷ್ಠುರವಾಗಿ ನುಡಿದಾಗ, ಮಂದಾಕಿನಿ ಪೆಚ್ಚಾದಳು. ಇಷ್ಟು ಮಾತುಕತೆಗಳು ನಡೆದರೂ, ರಾಜೀವ ಹೊರಕ್ಕೆ ಬಂದಿರಲಿಲ್ಲ ಎನ್ನುವುದು ಅವಳ ಗಮನಕ್ಕೆ ಬಂತು. ಮಗನನ್ನು ಎಬ್ಬಿಸಿ, ತಾನೂ ಎದ್ದಳು. ಚಿದಾನಂದನಿಗೂ ಚಿಂತೆಯಾಗಿತ್ತು.

* * *

ರಾಜೀವ ಚೈತ್ರಳ ಮನೆಗೆ ಬಂದ. ಅವನನ್ನು ಕಂಡು ಅವಳಿಗೆ ಸಂತಸವೂ ಆಗಲಿಲ್ಲ. ದುಃಖವೂ ಆಗಲಿಲ್ಲ. ಅವನು ಬಂದಿರುವ ಕಾರಣವನ್ನು ಊಹಿಸಿದಳು. ಮಂದಾಕಿನಿ ಊರಿಗೆ

ವಾಪಸ್ಸು ಹೊರಟು ಹೋಗಿದ್ದಳು. ಅನ್ನಪೂರ್ಣಮ್ಮ ಇಬ್ಬರಿಗೂ ಕಾಫಿಯನ್ನು ತಂದಿತ್ತಳು. ಕಾಫಿಯನ್ನು ಕುಡಿದು ಮುಗಿಸಿ ರಾಜೀವನೆಂದ. ‘‘ನಾನು ನಿನ್ನ ಹತ್ರ ಮುಖ್ಯವಾದ ವಿಷಯವನ್ನು ಮಾತನಾಡ್ಬೇಕು. ಇಲ್ಲಿ ಬೇಡ ಅಂತೆನ್ನಿಸಿದರೆ, ಹೊರಗೆ ಎಲ್ಲಾದ್ರೂ ಹೋಗಿ ಮಾತನಾಡೋಣ ಬರ್ತೀಯಾ?’’

‘‘ನೀವು ನನ್ನನ್ನು ನಿಮ್ಮ ಮನೆಗೆ ಕರೆದೊಯ್ಯಲು ಬಂದಿಲ್ಲ ಅಂತ ನಂಗೊತ್ತು. ನಿಮ್ಮ ಜೊತೆ ಬರುವ ಮನಸ್ಸಿಲ್ಲ ನನಗೆ..’’ ಎಂದಳು.

‘‘ಹಾಗಾದ್ರೆ, ಪ್ರತ್ಯೇಕವಾಗಿ ಯಾವ್ದಾದ್ರೂ ರೂಂನಲ್ಲಿ ಕುಳಿತು ಮಾತನಾಡೋಣ. ಇಲ್ಲಿ ಹಾಲಿನಲ್ಲಿ ಪ್ರೈವೆಸಿ ಇಲ್ಲ’’ ಎಂದ.

‘‘ಸರಿ, ಮೇಲೆ ನಮ್ಮ ತಂದೆಯ ರೂಂನಲ್ಲಿ ಕೂತು ಮಾತನಾಡೋಣ ಬನ್ನಿ ಎಂದಳು. ಇಬ್ಬರೂ ಮಹಡಿಯ ಮೇಲಿನ ರೂಮಿಗೆ ಬಂದರು. ರಾಜೀವ ಕಷ್ಟಪಟ್ಟು ಮೆಟ್ಟಲುಗಳನ್ನು ಹತ್ತಿದ್ದು ಅವಳ ಗಮನಕ್ಕೆ ಬಂದಿತ್ತು. ಒಂದು ಗಳಿಗೆ ಅಯ್ಯೋ ಅಂತ ಎನ್ನಿಸಿದರೂ, ಈಗ ಯಾವ ಅನುಕಂಪಕ್ಕೂ ಅವಕಾಶವಿಲ್ಲ ಎಂದುಕೊಂಡು ಸುಮ್ಮನಾಗಿ ಬಿಟ್ಟಳು. ನಿಧಾನವಾಗಿ, ಸ್ವಲ್ಪ ಕುಂಟುತ್ತಾ ಒಳ ಬಂದ ರಾಜೀವನನ್ನು ಚಿದಾನಂದ ಮುಗುಳ್ನಗುತ್ತಾ ಸ್ವಾಗತಿಸಿದ. ‘‘ಬನ್ನಿ ಸಾರ್..’’ ಎನ್ನುತ್ತಾ ಕುರ್ಚಿಯ ಕಡೆ ಕೈ ತೋರಿದ. ರಾಜೀವ ಕುಳಿತ ಮೇಲೆ, ಚೈತ್ರಾ ಚಿದಾನಂದನ ಕಡೆ ತಿರುಗಿದಳು.

‘‘ನೀವು ಸ್ವಲ್ಪ ಹೊತ್ತು ಕೆಳಗಡೆ ಇರ್ತೀರಾ?’’ ಚಿದಾನಂದ ಇಬ್ಬರ ಕಡೆಯೂ ನೋಡಿ, ತಲೆಯಾಡಿಸಿ ಕೆಳಗಿಳಿದು ಹೋದ. ರಾಜೀವ ಗಂಟಲನ್ನು ಸರಿಪಡಿಸಿಕೊಂಡ.

‘‘ಚೈತ್ರಾ.. ಇವು ಡೈವೋರ್ಸ್‌ಗೆ ಸಂಬಂಧಿಸಿದ ಪತ್ರಗಳು. ಇವಕ್ಕೆ ನಿನ್ನ ಸಹಿ ಬೇಕಾಗಿತ್ತು.’’ ಅವಳ ಮುಂದೆ ಪತ್ರಗಳನ್ನು ನೀಡಿದ. ಅವಳು ತೆಗೆದುಕೊಂಡಳು. ಅವುಗಳ ಮೇಲೆ ಕಣ್ಣಾಡಿಸಿದಳು.

‘‘ನೀವು ನನ್ನನ್ನು ಮನಸಾರೆ ಪ್ರೀತಿಸಿದ್ದಿರಿ ಅಲ್ವಾ?..’’ ಕೇಳಿದ್ದಳು.

‘‘ಹೌದು. ಪ್ರೀತಿಸಿದ್ದೆ.. ಆದರೆ...’’

‘‘ನಾನು ಈಗ ಕಳಂಕಿನಿ. ಅಪವಿತ್ರಳು ನನ್ನ ಜೊತೆ ಸಂಸಾರ ಮಾಡಲು ನಿಮಗೆ ಇಷ್ಟ ಇಲ್ಲ ಅಲ್ವಾ!’’ ರೋಷವನ್ನು ನಟಿಸಿದಳು.

‘‘ಹಾಗಲ್ಲ ಚೈತ್ರಾ..ನಾವು.. ಮುಕ್ತವಾಗಿ ಯಾವ ಅಳುಕೂ ಇಲ್ಲದೇ.. ಈಗ ಹೇಗೆ ಒಬ್ಬರನ್ನೊಬ್ಬರು ಪ್ರೀತಿಸಲು ಸಾಧ್ಯ?... ನಿನಗೂ ಮುಜುಗರವಿರುತ್ತೆ...’’

‘‘ಅಂದರೆ, ಪ್ರೀತಿ ಮನಸ್ಸಿನ ಆಳದಿಂದ ಇರಲಿಲ್ಲ ಅಂತಾಯ್ತು....ಈಗ ನನಗೆ ಡೈವೋರ್ಸ್‌ನ್ನು ಕೊಟ್ಟು. ಹಾಯಾಗಿರಲು ನಿರ್ಧರಿಸಿದೀರಿ ಅಲ್ವಾ!...’’

‘‘ಹೀಗಾಗಬಾರದಾಗಿತ್ತು. ಇದೊಂದು ಕಪ್ಪು ಚುಕ್ಕೆ. ಇದನ್ನು ಅಳಿಸಲು ಸಾಧ್ಯವಾ?’’

‘‘ಜಿಡಿ.. ನಿಮ್ಮ ಆಲೋಚನೆ ಸರಿಯಾದದ್ದೇ.. ನನ್ನನ್ನು ಅನುಕಂಪದಿಂದ ನೋಡಿ, ನಿನಗೆ ಬಾಳನ್ನು ಕೊಡ್ತೀನಿ...ನಾನು ಮಾಡಿಲ್ಲದ ತಪ್ಪಿಗೆ ನನ್ನನ್ನು ಕ್ಷಮಿಸಿದ್ದೀನಿ ಅಂತ ಹೇಳುವ ದೊಡ್ಡ

ದೊಡ್ಡ ಮಾತುಗಳಿಗಿಂತ, ಈ ಮೂರು ಅಕ್ಷರದ ಮಾತು ಹಿತವಾಗಿ ಕಾಣ್ತಿದೆ. ಆದರೆ, ರಾಜೀವ ಮುಂದೆ ನನ್ನ ಕತೆಯೇನು ! ನನ್ನನ್ನು ಯಾರು ಮದುವೆಯಾಗ್ತಾರೆ! ಓದು ಪೂರೈಸಿಲ್ಲ. ಯಾವ ಕೆಲಸ ಸಿಗುತ್ತದೆ..? ಈ ಬಗ್ಗೆ ಯೋಚಿಸಿದೀರಾ!.. ನಾನು ನನ್ನ ಅಣ್ಣನಿಗೆ ಭಾರವಾಗಿ ಹೇಗಿರಲಿ!.. ನನ್ನ ಪಾಡಿಗೆ ನಾನು ಸ್ವತಂತ್ರವಾಗಿ ಇರಲು ಬಯಸ್ತೀನಿ. ಆದರೆ.. ಅದಕ್ಕೆ ಅನುಕೂಲಗಳನ್ನು ಯಾರು ಒದಗಿಸಿ ಕೊಡ್ತಾರೆ!"

"ನಾನು ಅದನ್ನೆಲ್ಲಾ ಯೋಚಿಸಿಯೇ ಈ ನಿರ್ಧಾರಕ್ಕೆ ಬಂದಿದೀನಿ ಚೈತ್ರಾ. ನಾನು ನಿನಗೆ ಜೀವನಾಂಶದ ಹಣವನ್ನು ಕೊಡ್ತೀನಿ. ನಿನಗೆ ಹೇಗೆ ಬೇಕೋ ಹಾಗಿರಬಹುದು."

"ನೀವು ಕೊಡುವ ಹಣದಿಂದ ನಾನ್ಹೇಗೆ ಸುಖವಾಗಿರಲು ಸಾಧ್ಯ? ಇದು ಬರೀ ಒಂದು ತಿಂಗಳ, ಅಥವಾ ಒಂದು ವರ್ಷದ ಪ್ರಶ್ನೆಯಲ್ಲ, ಇಡೀ ಜೀವಮಾನದ ಪ್ರಶ್ನೆ.."

"ನಂಗೊತ್ತು ಚೈತ್ರಾ.. ನಿನಗೆ ತಿಂಗಳಿಗೆ ಹತ್ತು ಸಾವಿರ ರೂಪಾಯಿಗಳನ್ನು ಕೊಡುವ ವ್ಯವಸ್ಥೆ ಮಾಡ್ತೀನಿ.." ಚೈತ್ರಾ ಸುಮ್ಮನಾದಳು. ಹತ್ತು ಸಾವಿರ ಕಡಿಮೆ ಅಂತ ಅನ್ನಿಸಿದರೆ, ನಿನಗೆ ಎಷ್ಟು ಬೇಕಾಗಬಹುದು ಅಂತ ಕೇಳು.."

"ಪರವಾಗಿಲ್ಲ ಬಿಡಿ. ನಂಗೋಸ್ಕರ ಯಾಕೆ ಒದ್ದಾಡ್ತೀರಿ?"

"ಹಣವಿಲ್ಲದೇ ಹೇಗೆ ಇರ್ತೀಯಾ ಚೈತ್ರಾ?.. ಶರತ್ ಮುಂಚಿನಂತೆ ಶ್ರೀಮಂತನಲ್ಲ. ಅವನ ಖರ್ಚೇ ಸಾಕಷ್ಟಿರುತ್ತದೆ.. ನಿನಗೆ ಕೊಡಬೇಕಾದದ್ದು ನನ್ನ ಕರ್ತವ್ಯ..."

"ಆದರೆ, ಒಂದು ತಾಳಿ ಕಟ್ಟಿದ್ದಷ್ಟಕ್ಕೇ ಹೆಂಡತಿಯಾದವಳು ನಾನು. ನಿಮ್ಮೊಡನೆ ಒಂದು ದಿನವೂ ಸಂಸಾರ ಮಾಡಲಿಲ್ಲ. ಇದು ನನಗೆ ಹೊರೆಯಾಗುತ್ತದೆ."

"ಹಾಗೆ ಭಾವಿಸಬೇಡ ಚೈತ್ರಾ.... ನಾನೇನು ಬೇರೆಯವನಲ್ಲ. ನಿನ್ನನ್ನು ಮದುವೆಯಾಗಿದ್ದವನು.. ನಿನಗೆ ಅನ್ಯಾಯ ಮಾಡಬಾರದು. ಅದು ಧರ್ಮವಲ್ಲ. ಬೇಡ ಎನ್ನಬೇಡ.. ನನಗೆ ನೋವಾಗುತ್ತೆ.. ನಾನು ಈಗಲೂ ನಿನ್ನನ್ನು ಪ್ರೀತಿಸುತ್ತೇನೆ.. ಆದರೆ...."

"ಸರಿ, ಕೋರ್ಟು ಅದೇನು ತೀರ್ಮಾನ ಕೊಡುತ್ತೋ ಅಷ್ಟು ಸಾಕು..."

"ಕೋರ್ಟು, ಕೇಸು ಅವೆಲ್ಲಾ ನಿರ್ಧಾರವಾಗುವುದಕ್ಕೆ ಸಮಯ ತುಂಬಾ ಬೇಕಾಗುತ್ತೆ.. ಅಲ್ಲಿಯವರೆಗೆ ನಿನ್ನ ಖರ್ಚು ವೆಚ್ಚಕ್ಕೆ ಏನು ಮಾಡ್ತೀಯ?..."

"ಏನೋ ಮಾಡ್ಕೋತೀನಿ.. ನನಗೆ ಏನೂ ಬೇಡ.." ಎಂದು ಹೇಳಿ, ಅವನು ಕೊಟ್ಟ ಪತ್ರಗಳಿಗೆ ಸಹಿ ಹಾಕಿ ಅವನ ಕೈಗಿತ್ತಳು.

"ಸಾರಿ ಚೈತ್ರಾ, ನನ್ನ ವರ್ತನೆಯಿಂದ ನಿಂಗೆ ದುಃಖವಾಗಿದೆ ಅಂತ ನಂಗೊತ್ತು. ಆದರೆ ನಾನೇನು ಮಾಡ್ಲೀ.. ನಾನೂ ಅಸಹಾಯಕ.." ಎಂದ.

"ನಿಮ್ಮ ಪರಿಸ್ಥಿತಿ ನಂಗೆ ಅರ್ಥವಾಗುತ್ತೆ.. ನೀವು ನಿಮ್ಮ ತಂದೆ ತಾಯಿಗೆ, ಹೊರಗಿನ ಸಮಾಜಕ್ಕೆ ಹೆದರ್ತೀರಿ.. ನಾನು ಮಾಡಿಲ್ಲದ ತಪ್ಪಿಗೆ ನಾನು ಯಾರಿಗೂ ಹೆದರುವುದಿಲ್ಲ. ಬಂದದ್ದನ್ನು ಎದುರಿಸ್ತೀನಿ.. ನೀವಿನ್ನೂ ಹೋಗಬಹುದು" ಎಂದಳು. ರಾಜೀವ ಎದ್ದ. ಪೇಪರ್‍ರುಗಳನ್ನು

ಹಿಡಿದು, ಒಂದೆರಡು ಬಾರಿ, ತಿರುಗಿ ನೋಡಿ, ಬಾಗಿಲನ್ನು ದಾಟಿದ. ಚೈತ್ರಾ ಅಲ್ಲೇ ತಂದೆಯ ಪಕ್ಕದಲ್ಲೇ ಕುಳಿತಿದ್ದಳು. ಅವಳ ಮನಸ್ಸು ಗೊಂದಲಗಳಿಂದ ತುಂಬಿ ಹೋಗಿತ್ತು. ರಾಜೀವ ಡೈವೋರ್ಸ್ ಕೊಡಲಿ ಎಂದು ಬಯಸಿದ್ದಳು. ಅವನಿಂದ ಸಾಕಷ್ಟು ಮೊತ್ತ ಹಣವನ್ನು ವಸೂಲು ಮಾಡಿ, ಶರತ್‌ಗೆ ಕೊಡಬೇಕೆಂದು ಬಯಸಿದ್ದಳು. ಆದರೆ ತನಗೆ ಇಷ್ಟು ಹಣ ಬೇಕೆಂದು ಕೇಳುವ ಮನಸ್ಸಾಗಲಿಲ್ಲ. ಯಾಕೋ ಏನೋ, ಶರತ್‌ಗೋಸ್ಕರ ತಾನೇಕೆ ಬೇಡಬೇಕು ಎಂದೆನಿಸಿತ್ತು. ಆದರೆ ಮುಂದೆ? ಶರತ್‌ಗೆ ತಿಳಿಸಿದರೆ, ಖಂಡಿತಾ ಸಿಟ್ಟಿಗೇಳ್ತಾನೆ?...ಈ ಹಣಕ್ಕೋಸ್ಕರ ಮಾಡಿದ್ದ ಪ್ಲ್ಯಾನ್ ಎಲ್ಲಾ ನಿರರ್ಥಕವಾಗುತ್ತೆ.. ಶರತ್ ತನ್ನ ಬಳಿ ಮಾತನಾಡಲಿ. ಆಗ ಹೇಳಿದ್ರಾಯ್ತು.. ಎಂದುಕೊಂಡಳು. ಚಿದಾನಂದ ಮತ್ತೆ ರೂಮಿಗೆ ವಾಪಸ್ಸಾಗಿದ್ದ...ಅವನನ್ನು ಕಂಡು ಅವಳಲ್ಲಿ ಮತ್ತೊಂದು ಬೇರೆ ಆಲೋಚನೆ ಹೊಳೆಯಿತು. ಈ ಸಲಹೆಯನ್ನು ಕೊಟ್ಟವನು ಇವನೇ...ಇವನಿಂದ ಸಹಾಯವೂ ಬೇಕಾಗುತ್ತದೆ ಎಂದುಕೊಂಡು ಅವನೊಡನೆ ಮಾತನಾಡಿದಳು.

ಅವಳು ಊಹಿಸಿದ್ದಂತೆ, ಎರಡು ಮೂರು ದಿನಗಳ ನಂತರ, ಶರತ್, ತಂಗಿಯೊಡನೆ ಮಾತನಾಡಿದ. "ರಾಜೀವ ಬಂದಿದ್ನಂತೆ, ನೀನು ನಂಗೆ ಹೇಳ್ಲೇ ಇಲ್ಲ." ಎಂದು ಆಕ್ಷೇಪಿಸಿದ.

"ಹೂಂ, ಡೈವೋರ್ಸ್ ಪೇಪರ್ಸ್‌ಗೆ ಸೈನ್ ಬೇಕು ಅಂತ ಬಂದಿದ್ದ..."

"ಸೈನ್ ಮಾಡ್ಬಿಟ್ಯಾ?" ಕಾತುರದಿಂದ ಕೇಳಿದ.

"ಹೂಂ...ಹಾಕ್ದೇ.." ಸಲೀಸಾಗಿ ಹೇಳಿದಳು.

"ಎಂಥಾ ಕೆಲಸ ಮಾಡ್ಬಿಟ್ಟೆ ಚೈತ್ರಾ.. ನೀನು ಸೈನ್ ಹಾಕ್ಬಾರ್ದಾಗಿತ್ತು.." ರೇಗಿದ.

"ಅದ್ಯಾಕೆ ಈಗ ಹಾಗೆ ರೇಗ್ತೀಯ?.. ನಾನು ಅವನನ್ನು ಮದುವೆಯಾದದ್ದೇ.. ಈ ಡೈವೋರ್ಸ್‌ಗೋಸ್ಕರ ತಾನೇ..?" ನಿಂಗೆ ಬೇಕಾದದ್ದು ಸಿಗುತ್ತೆ ಸುಮ್ಮನಿರು."

"ನೀನು ತಪ್ಪು ಮಾಡ್ದೆ...ಹಣಾನ ಹೇಗೋ ಕಿತ್ಕೋತಿದ್ದೆ."

"ನಾನು ಯಾವ ತಪ್ಪನ್ನೂ ಮಾಡಿಲ್ಲ..... ಎಲ್ಲಾದಕ್ಕೂ ನೀನೇ ಕಾರಣ.. ನನಗೆ ಈ ಮದುವೆ ಬೇಕಿರಲಿಲ್ಲ...ಈಗ ಯಾಕೆ ಹೀಗೆ ಮಾತಾಡ್ತೀಯ....? ನಿಂಗೆ ಬೇಕಾದ ಹಣ ಹೇಗೋ ಸಿಕ್ಕೇ ಸಿಗುತ್ತೆ. ನಂಗೆ ಎಲ್ಲಾ ಅರ್ಥವಾಗುತ್ತೆ.. ನಿಂಗೆ ನಾನು ಬೇಕಿಲ್ಲ...ರಾಜೀವ ಏನಂದ?"

"ಏನೋ ಅಂದ.. ನೀನು ಅವನೊಡನೆ ಇರುವುದಕ್ಕೆ ಅವನನ್ನು ಒಪ್ಪಿಸ್ಬೇಕಾಗಿತ್ತು.. ನೀನು ಅವನ ಪತ್ನಿ.. ಅವನ ಜವಾಬ್ದಾರಿ ನೀನು...."

"ಅಂದರೇ.. ನನ್ನ ಜವಾಬ್ದಾರಿಯನ್ನು ಹೊರಲು ನೀನು ರೆಡಿ ಇಲ್ಲ...ಅನ್ನು.. ಈಗ ಹೀಗೆ ಹೇಳ್ತಿದ್ದೀಯಾ ಯಾಕೆ ? ಮತ್ತೇನು ನಿನ್ನ ಸ್ಕೀಂ?"

"ಹೌದು, ಈಗ ನೀನು ಎಷ್ಟಾಗಲೀ ಅವನ ಹೆಂಡತಿ.. ನಿನ್ನನ್ನು ನೋಡಿಕೊಳ್ಳುವುದು ಅವನ ಧರ್ಮ.. ನೀನು ಅವನ ಜೊತೆಯೇ ಇರ್ಬೇಕು.. ಅವನ ಹತ್ರ ಮತ್ತೆ ಮಾತಾಡು. ಈ ಡೈವೋರ್ಸ್‌ನ ಮಾತನ್ನು ತೆಗೆದ್ಹಾಕು..." ಅವನನ್ನೇ ಸರಿ ಹೊಂದಿಸ್ಕೋ." ತಮಾಷೆ ಮಾಡ್ತಿಲ್ಲ ತಾನೇ ?

"ಇಲ್ಲ...ನಾನು ಅವನ ಮನೆಗೆ ಹೋಗುವುದಿಲ್ಲ...ನನಗೆ ಬೇಕಾಗಿಲ್ಲ."

"ನಿನಗೆ ನಿನ್ನದೇ ಹಠ...ನನ್ನ ಚಿಂತೆ ಎಲ್ಲಿ ಅರ್ಥವಾಗುತ್ತೆ!... ನಿನಗೆ ನನ್ನ ಮೇಲೆ ವಿಶ್ವಾಸ ಎಲ್ಲಿ ಬರುತ್ತೆ?.. ಆಂಟಿ ಹೇಳಿದ್ದು ಸರಿ. ನೀನು ನನ್ನ ಸ್ವಂತ ತಂಗಿ ಖಂಡಿತಾ ಅಲ್ಲ... ಇಲ್ದಿದ್ರೆ ನೀನು ಹೀಗಾಡ್ತಿರ್ಲಿಲ್ಲ." ಚೈತಾ ಅವನನ್ನೇ ದಿಟ್ಟಿಸಿದಳು.

"ಏನಂದೆ? ನಾನು ನಿನ್ನ ಸ್ವಂತ ತಂಗಿ ಅಲ್ಲ.. ನೀನು ನನ್ನ ಸ್ವಂತ ಅಣ್ಣನಲ್ಲವೆನ್ನುವುದು ನನಗೆ ಎಂದೋ ಅನುಮಾನ ಬಂದಿತ್ತು.. ಇಲ್ದಿದ್ರೆ ನನ್ನನ್ನು ಹೀಗೆ ನೀನು ಉಪಯೋಗಿಸಿಕೊಳ್ತಿರ್ಲಿಲ್ಲ.. ಈಗೇನು ಮಾತು ಬಿಡು.. ನೀನೂ ನಂಗೆ ಬೇಕಿಲ್ಲ. ನನ್ನ ಮದುವೆ ಮಾಡುಕ್ಕೆ ನೀನು ಹೀಗೆ ನಾಟಕವಾಡಬೇಕಾಗಿರಲಿಲ್ಲ. ಈಗ್ಯಾಕೆ ನುಣುಚಿ ಕೇಳ್ತಿದೀಯ?"

"ಏನೋ ತಪ್ಪಾಗಿ ಹೋಯ್ತು , ಅದರಿಂದ ನಿನಗೇನು ನಷ್ಟವಾದದ್ದು..? ನೀನು ಅವನ ಮನೆಯಲ್ಲಿ ಸುಖವಾಗಿರಬಹುದು. ಅವನು ಶ್ರೀಮಂತ. ನೀನು ನನಗೆ ಅವನಿಂದ ಹಣವನ್ನು ನಿಧಾನವಾಗಿ ಕೊಡಿಸುವಂತೆ.. ಅವನನ್ನು ಬಿಟ್ಟು ಬಿಟ್ಟರೆ, ನಿನ್ನನ್ನು ಮತ್ಯಾರು ಮದುವೆಯಾಗ್ತಾರೆ!...ನಿನ್ನ ಜವಾಬ್ದಾರಿ ನಂಗೆ ಬೇಡ. ಇನ್ನು ಮುಂದೆ ನಿನ್ನ ದಾರಿ ನಿನಗೆ, ನನ್ನ ದಾರಿ ನನಗೆ.."

"ಆಂಟಿಯ ಮಾತನ್ನು ಕೇಳಿಸ್ಕೊಂಡು ಏನೇನೋ ಬೊಗಳ್ಬೇಡ.. ಈ ಮನೆಯಲ್ಲಿ ನಿನಗೆ ಎಷ್ಟು ಹಕ್ಕು ಇದೆಯೋ, ಅಷ್ಟೇ ಹಕ್ಕು ನನಗೂ ಇದೆ. ನಿನ್ನ ಮಾತಿಗೆ ಒಪ್ಪಿ ನಾನು ರಾಜೀವನ್ನ ಮದುವೆಯಾದದ್ದು.... ಈಗ ಇನ್ನು ಅವನು ನನ್ನನ್ನು ಕರೆಯುವುದೂ ಇಲ್ಲ, ನಾನು ಹೋಗುವುದೂ ಇಲ್ಲ. ಈ ವಿಷಯದಲ್ಲಿ ತಲೆ ಹಾಕ್ಬೇಡ."

"ನೀನು ಅದ್ಹೇಗೆ ಅವನ ಮನೆಗೆ ಹೋಗೋದಿಲ್ಲ ನಾನೂ ನೋಡ್ತೀನಿ. ನಿಂಗೆ ಡೈವೋರ್ಸ್ ಸಿಗದ ಹಾಗೆ ಮಾಡ್ತೀನಿ. ಒಂದಲ್ಲ ಒಂದು ದಿನ ನೀನು ಅವನ ಮನೆಗೇ ಹೋಗುವಂತೆ ಮಾಡ್ತೀನಿ..." ನೀನ್ಯಾಕೆ ಇಲ್ಲಿರ್ಬೇಕು?"

"ನಾನು, ಇದಕ್ಕೆಲ್ಲ ನೀನೇ ಕಾರಣ ಅಂತ ಅವನಿಗೆ ನಿಜವನ್ನು ಹೇಳಬೇಕಾಗುತ್ತೆ."

"ಅದಕ್ಕೆ ಸಾಕ್ಷಿ ಎಲ್ಲಿದೆ?.. ನೀನು ರಾಜೀವನ ಪತ್ನಿ ಅಂತ ಮಾತ್ರ ಎಲ್ಲರಿಗೂ ಗೊತ್ತು."

"ಸಾಕ್ಷಿ ಬೇಕಾ ನಿಂಗೆ?... ಶ್ವೇತಾ, ಅವಳ ಅಣ್ಣ....ಅವನ ಸ್ನೇಹಿತರು, ಚಿದಾನಂದ ಎಲ್ಲರನ್ನು ಕರೆಸ್ತೀನಿ.... ನಿನ್ನ ಬಣ್ಣ ಬಯಲಾಗುತ್ತೆ.... ಗುಟ್ಟು ರಟ್ಟಾಗುತ್ತೆ."

"ಇದರಿಂದ ಡ್ಯಾಡಿಯ ಮರ್ಯಾದೆ ಹೋಗುತ್ತೆ.. ಎಲ್ಲರಿಗೂ ಗೊತ್ತಾಗುತ್ತೆ. ನೀನು ಜೈಲಿಗೆ ಹೋಗಬಹುದು. ನೀನು ಅನಾಥೆಯಾಗಬಹುದು.." ಇದ್ದಕ್ಕಿದ್ದಂತೆ ಅವಳಿಗೆ ದುಃಖ ಒತ್ತರಿಸಿಕೊಂಡು ಬಂತು. ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು. ಶರತ್ ಮಾತನ್ನು ನಿಲ್ಲಿಸಿ ಅವಳ ಕಡೆ ಕೋಪದಿಂದ ನೋಡಿ, ರೂಮಿನಿಂದ ಹೊರಬಂದ. ಎಷ್ಟೋ ಹೊತ್ತಿನ ನಂತರ ತನಗೆ ತಾನೇ ಸಮಾಧಾನ ಹೇಳಿಕೊಂಡ ಚೈತ್ರಾ, ಮಹಡಿಯನ್ನು ಹತ್ತಿದಳು. ತಂದೆಯ ಬಳಿ ಕುಳಿತು ಅವರ ಕೈ ಹಿಡಿದಳು.

"ಡ್ಯಾಡಿ, ಯಾಕೆ ಹೀಗೆ ಆಗಿಬಿಟ್ರಿ!... ನನಗೆ ಈಗ ಯಾರೂ ಇಲ್ಲ. ನನ್ನ ವ್ಯಥೆಯನ್ನು ಯಾರ ಹತ್ರ ಹೇಳಿಕೊಳ್ಳಲಿ!... ನಿಮಗೆ ನನ್ನ ಮಾತು ಕೇಳುಲ್ವಾ!... ನನ್ನ ತಲೆಯ ಮೇಲೆ ಕೈಯಿಟ್ಟು, ನನಗೆ ಸಮಾಧಾನದ ಮಾತುಗಳನ್ನು ಹೇಳ್ಬೇಕು ಅಂತ ಅನ್ನಿಸುಲ್ವಾ?..." ಅವಳು ತಲೆಯನ್ನು ಅವರ ಭುಜಕ್ಕೆ ಒರಗಿಸಿದಳು. ತಲೆಯ ಮೇಲೆ ಒಂದು ಕೈ ಆಡಿತು. ಸಂತಸ, ಗಾಬರಿ, ಆಶ್ಚರ್ಯಗಳಿಂದ ಕತ್ತೆತ್ತಿದಳು. ತಂದೆ ಹಾಗೇ ಮಲಗಿದ್ದರು. ಹಿಂದೆ ನಿಂತಿದ್ದ ಚಿದಾನಂದ ಅವಳ ಪಕ್ಕಕ್ಕೆ ಬಂದು ನಿಂತ.

"ಸಮಾಧಾನ ಮಾಡ್ಕೊಳ್ಳಿ ಚೈತ್ರಾ.... ಶರತ್ ಹೀಗೆ ಆಡಬಾರದಾಗಿತ್ತು" ಎಂದ.

"ಅಂದರೇ.. ನಮ್ಮ ಮಾತುಗಳನ್ನು ಕೇಳಿಸ್ಕೊಂಡ್ರಾ?.."

"ಹೂಂ, ಸ್ವಲ್ಪ ಸ್ವಲ್ಪ, ನೀವು ಈಗ ತೊಂದರೆಯಲ್ಲಿದೀರಿ.. ನೋವನ್ನು ಅನುಭವಿಸ್ತಿದೀರಿ ಅಂತ ನನಗೂ ತುಂಬಾ ಬೇಸರವಾಗಿದೆ. ನನ್ನದೂ ತಪ್ಪಿದೆ...." 'ಪೆಚ್ಚುಮುಖ ಮಾಡಿದ.

"ಹೌದು, ದೊಡ್ಡ ತಪ್ಪು ನಿಮ್ಮದೇ.. ನೀವು ನನ್ನನ್ನು ಮದುವೆಯಾಗಿದ್ದಿದ್ರೆ ಈ ಅನಾಹುತಗಳು ಜರುಗುತ್ತಲೇ ಇರಲಿಲ್ಲ.."

"ನಾನು ನಿಮ್ಮನ್ನು ಮದುವೆಯಾಗುವಂತೆಯೇ ಇಲ್ಲ..."

"ಯಾಕಾಗುಲ್ಲ?.. ನಾನು ಡೈವೋರ್ಸ್ ತಗೊಂಡ್ಮೇಲೆ ನಾವಿಬ್ರೂ ಮದ್ವೆಯಾಗೋಣ. ನೀವು ಆ ಹುಡುಗಿಯನ್ನು ಮರೆತು ಬಿಡಿ" ಎನ್ನುತ್ತಾ ಎದ್ದು ನಿಂತು ಅವನಿಗೆ ಒರಗಿಕೊಂಡಳು. ಆವನು ನಿಧಾನವಾಗಿ ಅವಳನ್ನು ಸರಿಸಿದ.

"ಇಲ್ಲ ಚೈತ್ರಾ...ನಾವಿಬ್ರೂ ಮದುವೆಯಾಗುವಂತೆಯೇ ಇಲ್ಲ..."

"ಅವಳು ನಂಗಿಂತ ಚೆನ್ನಾಗಿದಾಳಾ?.. ಶ್ರೀಮಂತಳಾ?..."

"ಅಂಥಾ ಯಾವ ಹುಡುಗಿಯೂ ನನಗೆ ಗೊತ್ತಾಗಿಲ್ಲ..."

"ಮತ್ತೆ! ನಿಮ್ಮ ತಾಯಿ ಯಾಕೆ ಸುಳ್ಳು ಹೇಳಿದರು?.."

"ಅದಕ್ಕೆ ಬಲವಾದ ಕಾರಣವಿದೆ.. ನಾನು ನಿಮಗೆ ಅಣ್ಣನಾಗ್ಬೇಕು.."

ಅವಳು ಅವನ ಕೆನ್ನೆಗೆ ಹೊಡೆದಳು.. "ಸುಳ್ಳು!ಸುಳ್ಳು!" ಎಂದು ಕಿರುಚಿದಳು.

"ಇಲ್ಲ ಚೈತ್ರಾ.. ದೇವರಾಣೆಗೂ ಈ ಮಾತು ಸತ್ಯ.. ನೀವು ಅಮ್ಮನ ಮಾತನ್ನು ನಂಬಲಿಲ್ಲ.. ಈಗ ನನ್ನ ಮಾತನ್ನಾದ್ರೂ ನಂಬಿ.."

"ಹೇಗ್ರೀ ನಂಬೋಕೆ ಆಗುತ್ತೆ.. ಇಂಥಾ ಮಾತನ್ನ? ಇಬ್ರೂ ಸುಳ್ಳನ್ನು ಹೇಳ್ತಿದೀರಿ!"

"ನೀವು ನಂಬಿದರೂ ಸರಿ, ನಂಬದಿದ್ದರೂ ಸರಿ.. ನನ್ನ ನಿಮ್ಮ ಸಂಬಂಧ ಅಣ್ಣತಂಗಿಯರದ್ದು. ಅದು ಗೊತ್ತಾದದ್ದು ಈಚೆಗೇನೇ.. ಅದೂ ನಿಮಗೆ ಹೇಳಿದ್ಮೇಲೇನೇ, ಅಮ್ಮನಿಗೆ ಹೇಳಿದ್ದು .

"ಇಲ್ಲ ಆನಂದ್, ನೀವು ಇಂಥಾ ಸುಳ್ಳನ್ನು ಹೇಳಿ ನನಗೆ ಮೋಸ ಮಾಡ್ಬೇಡಿ.."

"ಸುಳ್ಳು, ಮೋಸ, ಯಾವುದೂ ಇಲ್ಲ. ಈಗ ನಾನೇ ನಿಮ್ಮ ಸ್ವಂತ ಅಣ್ಣ. ಶರತ್ ನಿಮ್ಮ

ಸ್ವಂತ ಅಣ್ಣನಲ್ಲ, ಆದರೆ ಹಾಗಂತ ಅವನನ್ನು ದ್ವೇಷಿಸ್ಬೇಡಿ.. ಅವನೂ ಅಣ್ಣನಂತೆ.."

"ಏನು! ಶರತ್.. ನನ್ನ ಸ್ವಂತ ಅಣ್ಣನಲ್ವಾ?... ಒಳ್ಳೊಳ್ಳೆ ಜೋಕುಗಳು! ಇಷ್ಟು ದಿನ ಎಲ್ಲಿಗೆ ಹೋಗಿದ್ರೀ..? ತಾಯಿಯಂತೆ! ಅಣ್ಣನಂತೆ...!.. ನನ್ನನ್ಯಾಕೆ ಈ ಮನೆಯಲ್ಲಿ ಬಿಟ್ಟು ಹೋದ್ರಿ?...."ಈಗ ಹೇಳಿದ್ರೆ ನಂಬಿ ಬಿಡ್ತೀನಾ?"

"ನನಗೂ ಸರಿಯಾಗಿ ಗೊತ್ತಿಲ್ಲ. ಅಮ್ಮಂಗೆ ಗೊತ್ತು.. ಅಮ್ಮ ಹೇಳಿದ್ದೆಲ್ಲಾ ನಿಜ.ಅಮ್ಮನ್ನ ಕರೆಸ್ಲಾ ?"

"ಏನೂ ಬೇಡ, ನನಗೆ ಅವರನ್ನು ನೋಡುವ ಇಷ್ಟವಿಲ್ಲ" ಎಂದು ಬಿಟ್ಟಳು.

"ಶರತ್‌ಗೆ ನೀವು ಸ್ವಂತ ತಂಗಿ ಅಲ್ಲ ಅಂತ ತಿಳಿದ್ಮೇಲೆ, ನಿಮ್ಮ ಮೇಲೆ ಅಸಡ್ಡೆ ಮೂಡಿರುವಂತಿದೆ. ರಾಜೀವನೊಡನೆ ರಾಜೀ ಮಾಡಿ, ನಿಮ್ಮನ್ನು ಅವನ ಮನೆಗೆ ಕಳುಹಿಸುವ ಆಲೋಚನೆಯಲ್ಲಿರುವಂತಿದೆ.. ಒಂದು ಗಳಿಗೆ ಯೋಚಿಸಿದಾಗ, ಇವನು ಹೇಳುತ್ತಿರುವುದು ಸರಿ ಎನಿಸಿತ್ತು. ಆದರೂ ಪರಿಸ್ಥಿತಿ ಸರಿ ಇಲ್ಲ ಅಂತೆನ್ನಿಸಿತ್ತು.

"ಇಷ್ಟಕ್ಕೆಲ್ಲ ನಿಮ್ಮ ತಾಯಿಯೇ ಕಾರಣ....ನನ್ನ ಶರತ್‌ನ ಮಧ್ಯೆ ಹೀಗೆ ಭಿನ್ನಾಭಿಪ್ರಾಯ ಮೂಡುಕ್ಕೆ ಇವರೇ ಕಾರಣ.." ದೂಷಿಸಿದಳು.

"ಹೀಗಾಗುತ್ತೆ ಅಂತ ಅಮ್ಮನಿಗೇನು ಗೊತ್ತು?.. ನೀವು ರಾಜೀವನೊಡನೆ ಸುಖವಾಗಿರಲಿ ಅಂತ ಅವಳು ಯೋಚಿಸಿದ್ದಳು. ಶರತ್‌ನ ಪ್ಲ್ಯಾನ್ ಹೀಗಿದೆ ಅಂತ ಅವಳಿಗೆ ಖಂಡಿತಾ ಗೊತ್ತಿರಲಿಲ್ಲ. ಶರತ್ ಸ್ವಂತ ಅಣ್ಣನಾಗಿದ್ದಿದ್ರೆ ಹೀಗೆ ಮಾಡ್ತಿದ್ರಾ? ಇಲ್ಲ ತಾನೇ?"

"ಈ ಪ್ಲ್ಯಾನ್‌ನಲ್ಲಿ ನೀವೂ ಶಾಮೀಲಾಗಿದ್ರಿ.....ನಿಮ್ಮ ತಾಯಿಯ ಪ್ರಕಾರ ನೀವು ನನ್ನ ಅಣ್ಣನಾಗ್ಬೇಕು.... ಆದರೂ, ನಿಮ್ಮ ಆಲೋಚನೆಗಳೂ ಸರಿಯಾಗಿಲ್ಲಿಲ್ಲ."

"ನನಗೂ ನೆನ್ನೆ ಮೊನ್ನೆವರೆಗೆ ಈ ವಿಷಯ ಗೊತ್ತಿರಲಿಲ್ಲ. ಆದರೆ ನಮ್ಮಿಬ್ಬರಿಂದ ನಡೆಯಬಾರದ ಅನಾಹುತ ಜರುಗಲಿಲ್ಲ. ಇದು ದೇವರ ಕೃಪೆ ಅಲ್ಲದೇ ಇನ್ನೇನು?.."

"ಯಾರು ಏನೇ ಹೇಳಲಿ, ನಾನು ಈ ಮಾತನ್ನು ನಂಬುವುದಿಲ್ಲ.."

"ಅಮ್ಮ ಹೇಳಿದಳು, ಸಾಕ್ಷಿಗಳಿವೆ ಅಂತ...ಹಳೆಯ ಕಾಗದ ಪತ್ರಗಳನ್ನು ತೆಗೆದು ನೋಡಿದರೆ, ಸಿಕ್ಕರೂ ಸಿಗಬಹುದು..."

"ನನಗೆ ಯಾವ ಆಸಕ್ತಿಯೂ ಇಲ್ಲ. ಈಗ ತಿಳಿದುಕೊಂಡು ಏನಾಗಬೇಕಾಗಿದೆ? ಯಾವ ಸಂಬಂಧವೂ ಬದಲಾಗುವುದಿಲ್ಲ.."

"ಆದರೆ ಈಗ ನನ್ನ ಜವಾಬ್ದಾರಿ ಹೆಚ್ಚಿದೆ.. ಅಮ್ಮ ನಿಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುವಂತೆ ತಿಳಿಸಿದ್ದಾಳೆ.. ಶರತ್ ನಿಮಗೆ ಮೋಸಮಾಡಬಹುದು ಅಂತ ಅನ್ನಿಸ್ತಿದೆ."

ಚೈತ್ರಾ ಅವನ ಮಾತಿಗೆ ಪ್ರತಿಕ್ರಿಯಿಸಲಿಲ್ಲ. ಅಲ್ಲಿಂದ ಸರಿದಿದ್ದಳು. ಆದರೂ ಅವಳ ಎದೆಯಲ್ಲಿ ಯಾವುದೋ ಅವ್ಯಕ್ತ ಆತಂಕ ಕಾಡಲಾರಂಭಿಸಿತು. ಮಂದಾಕಿನಿ ಹೇಳಿದ ಮಾತುಗಳು

ನಿಜವಿರಬಹುದೇ ಎಂಬ ಅನುಮಾನ ಬಲವಾಗತೊಡಗಿತು. ತನ್ನವರು ಅಂತ ತನಗೆ ಇಲ್ಲಿ ಯಾರಿಲ್ಲ ಎಂಬ ಪ್ರಜ್ಞೆ ಹುಟ್ಟಿತು. ಚಿದಾನಂದ ತನ್ನನ್ನು ಮದುವೆಯಾಗಲು ಒಪ್ಪಲಿಲ್ಲ. ಶರತ್ ಬದಲಾಗಿದ್ದಾನೆ.. ರಾಜೀವನಿಗೆ ತಾನು ದ್ರೋಹ ಮಾಡಲು ಹೋಗಿ, ತಾನೇ ಮೋಸ ಹೋಗಿದ್ದೇನೆ ಅಂತ ಅನ್ನಿಸತೊಡಗಿತು. ಶ್ವೇತಾಳ ಮನೆಗೆ ಹೋದಳು. ಅವಳೊಡನೆ ಎಲ್ಲವನ್ನು ಹೇಳಿಕೊಂಡು ಅತ್ತಳು. ಅವಳು ಸಮಾಧಾನಗೊಳಿಸಿದಳು.

"ಸುಮ್ಮನೇ ಆತಂಕ ಪಡ್ಬೇಡ.. ಈ ಮಾತುಗಳು ನಿಜವಲ್ಲದೆಯೂ ಇರಬಹುದು. ಹಳೇ ಪತ್ರಗಳನ್ನು ಹುಡುಕೋಣ.. ಸಾಕ್ಷಿ ಸಿಗದಿದ್ದರೆ ಸರಿ.. ಎಲ್ಲಾ ಕ್ಲಿಯರ್ ಆಗುತ್ತೆ.."

"ಸಿಕ್ಕಿದರೇ..?"

"ಸಿಕ್ಕಿದರೆ ಅದನ್ನು ನಾಶ ಮಾಡಿ ಬಿಡೋಣ.. ನಿಮ್ಮ ನಿಮ್ಮ ಸಂಬಂಧಗಳನ್ನೇ ಬದಲಾಯಿಸುವಂಥ ಪತ್ರಗಳು ಇಷ್ಟು ವರ್ಷಗಳ ನಂತರ ಯಾಕೆ ಬೇಕು?" ಅವಳಿಗೂ ಆ ಮಾತು ಸರಿ ಎನಿಸಿತು. ಆತಂಕ ಸ್ವಲ್ಪ ಮಟ್ಟಿಗೆ ಕಡಿಮೆ ಆಗಿತ್ತು. ಮನೆಗೆ ವಾಪಸ್ಸಾದಳು ಶ್ವೇತಾ ಶರತ್‌ಗೆ ಫೋನು ಮಾಡಿ, ಅವನನ್ನು ತನ್ನ ಮನೆಗೆ ಕರೆಸಿಕೊಂಡಳು. ಚೈತ್ರ ಹೇಳಿದುದನ್ನು ಹೇಳಿದಳು.

"ಈಗ ನೀವು ಯಾವುದಾದರೂ ಒಂದು ನಿರ್ಧಾರಕ್ಕೆ ಬೇಗ ಬರ್ಬೇಕು.. ಅವಳು ರಾಜೀವನ ಮನೆಗೆ ಹೊರಟು ಹೋದರೆ, ನಿಮಗೆ ಯಾವ ಲಾಭವೂ ಇಲ್ಲ..."

"ಹೋದರೆ ಹೋದ್ಲು, ನನ್ನ ಜವಾಬ್ದಾರಿ ಕಡಿಮೆ ಆಗುತ್ತೆ. ಆದರೆ ಈಗ ರಾಜೀವನದೇ ಸಮಸ್ಯೆ...ಇವಳನ್ನು ಹೆಂಡತಿ ಅಂತ ತನ್ನೊಡನೆ ಇಟ್ಟುಕೊಳ್ಳಲು ಸಿದ್ಧನಿಲ್ಲ. ನಾಲ್ಕು ದಿನ ಎಲ್ಲೋ ಕಳೆದು ಬಂದವಳು, ಅವಳು ಅಪವಿತ್ರಳು ಅಂತ ಅವನ ಭಾವನೆ. ಅದು ನಿಜ ಅಲ್ಲ ಅಂತ ಅವನಿಗೆ ಹೇಗೆ ಹೇಳೋದು?... ನಾವೆಲ್ಲಾ ಸಿಕ್ಕಿ ಬೀಳ್ತೀವಿ.. ಅಪರಾಽಗಳಾಗ್ತೀವಿ. ಯಾಕೋ ಎಲ್ಲಾ ಎಡವಟ್ಟಾಯಿತು."

"ಮೆಡಿಕಲ್ ಟೆಸ್ಟ್ ಮಾಡಿಸಿ, ಡಾಕ್ಟರಿಂದ ಸರ್ಟಿಫೈ ಮಾಡಿಸಿದ್ರೆ...?"

"ಯಾಕೋ ಈ ಪ್ಲ್ಯಾನ್‌ಗಳು ಸರಿಯೇ ಹೋಗ್ತಿಲ್ಲ, ರಾಜೀವ ಅವಳಿಗೆ ಜೀವನಾಂಶದ ಹಣವನ್ನು ಕೊಡಲು ಸಿದ್ಧನಾಗಿದಾನೆ. ಅದು ಕೈಗೆ ಬಂದ ಕೂಡಲೇ, ನಾನೇ ಇಲ್ಲಿಂದ ದೂರ ಎಲ್ಲಾದ್ರೂ ಹೊರಟು ಹೋಗ್ತೀನಿ.. ಅದಲ್ಲದೇ ಇನ್ನೂ ಸ್ವಲ್ಪ ಹಣ ಕೊಡ್ಬೇಕು.."

"ಚೈತ್ರಾ, ನಂಗೆ ಏನೂ ಬೇಡ ಅಂತ ಹೇಳಿದಾಳಂತೆ.."

"ಯಾಕೆ ಅಂತ ಕೇಳ್ಬೇಕಾಗಿತ್ತು..! ಮುಂದೆ ಏನ್ಮಾಡ್ತಾಳಂತೆ? ನನ್ನ ಕರ್ಮ.."

"ಅವಳನ್ನು ಏನೂ ಅನ್ಬೇಡಿ ಶರತ್...ಅವಳಿಗೆ ಎಷ್ಟು ಶಾಕ್ ಆಗಿದೆ ಗೊತ್ತಾ?"

"ನಂಗೆ ಶಾಕ್ ಆಗಿಲ್ವಾ?.. ಈ ಡ್ಯಾಡಿಗೆ ನಾನೂ ಸ್ವಂತ ಮಗನಲ್ಲ, ಇವಳೂ ಸ್ವಂತ ಮಗಳಲ್ಲ...ಈಗ ಹೀಗೆ ಕೈಲಾಗದೇ ಮಲಗೋರ್‍ಗೆ ಎರಡೆರಡು ಮಕ್ಕಳನ್ನು ಸಾಕುವ ಆಸೆ? ಆಸ್ತಿ ಪಾಸ್ತಿ ಇಲ್ಲ. ಇದ್ದದ್ದೆಲ್ಲಾ ಇವರ ಮೆಡಿಕಲ್ ಬಿಲ್‌ಗೇ ಖರ್ಚಾಗುತ್ತೆ."

"ಹೀಗೆಲ್ಲಾ ಮಾತಾಡ಼್ಬೇಡಿ ಶರತ್...ಅವರಿಗೇನು ಗೊತ್ತಿತ್ತು ಹೀಗಾಗುತ್ತೆ ಅಂತ... ನಿಮಗೆ ರಾಜೀವ ಮೋಸ ಮಾಡಿದ್ರೆ ಇದ್ರಲ್ಲಿ ಅವರ ತಪ್ಪೇನಿದೆ?"

"ನಿಮಗ್ಗೊತ್ತಿಲ್ಲ ಶ್ವೇತಾ.. ನಾನು ಎಷ್ಟು ಕಷ್ಟದಲ್ಲಿದೀನಿ ಅಂತ.. ನನಗೆ ಯಾರು ಆಪ್ತರಿಲ್ಲ..." ಅವನು ಅವಳ ಎದೆಯೊಳಗೆ ಮುಖವನ್ನು ಹುದುಗಿಸಿದ.

* * *

"ಚೈತ್ರಾ...ಚೈತ್ರಾ..." ಚಿದಾನಂದ, ಮಂಚದ ಸಮೀಪದಲ್ಲಿ ನಿಂತು, ಪಿಸುದನಿಯಲ್ಲಿ ಕರೆದಾಗ, ಚೈತ್ರಾ ಎಚ್ಚೆತ್ತಳು. ತನಗೆ ಸಮೀಪದಲ್ಲಿ ನಿಂತಿದ್ದವನನ್ನು ಕಂಡು ಬೆಚ್ಚಿ ಎದ್ದು ಕುಳಿತಳು. ಹತ್ತಾರು ಭಾವನೆಗಳು ಒಟ್ಟಿಗೇ ಧುಮ್ಮಿಕ್ಕಿದವು. ಅವನು ಎಂದೂ ಇವಳ ರೂಮಿಗೆ ಬಂದವನಲ್ಲ.

"ಏನಾಯ್ತು ಆನಂದ್...ಡ್ಯಾಡಿ ಹುಷಾರಾಗಿದಾರೆ ತಾನೆ?" ಗಾಬರಿಯಿಂದ ಕೇಳಿದಳು.

"ಅವರು ನಿದ್ದೆ ಮಾಡ್ತಿದಾರೆ. ಒಂದು ಮುಖ್ಯವಾದ ವಿಷಯವನ್ನು ಹೇಳೋಣಾಂತ ಬಂದೆ.. ನಿಮ್ಮ ತಂದೆಗೆ ಸಂಬಂಧಿಸಿದ ಕೆಲವು ಹಳೇ ಪತ್ರಗಳು ಸಿಕ್ಕಿವೆ. ಅದರಲ್ಲಿ ನಮ್ಮ ತಾಯಿ ಹೇಳಿದ ಸಾಕ್ಷ್ಯಗಳೂ ಸಿಕ್ಕಿವೆ."

"ಅಂದರೇ.." ಅವಳು ಪೂರ್ಣವಾಗಿ ಎಚ್ಚೆತ್ತಳು.

"ಹೌದು. ಒಂದು ದತ್ತು ಸ್ವೀಕಾರ ಪತ್ರ,...ಇನ್ನೊಂದು, ನಿಮ್ಮ ಬರ್ತ್‌ಸರ್ಟಿಫಿಕೇಟ್.. ನರ್ಸಿಂಗ್ ಹೋಂನವರು ಕೊಟ್ಟಿರುವುದು.. ಎಲ್ಲಾ ಕ್ಲಿಯರ್ ಆಗಿದೆ."

"ಏನಿದೆ ಅದರಲ್ಲಿ...? ನಾನು ದತ್ತು ತಗೊಂಡು ಸಾಕಿರುವವಳಾ?"

"ಅಲ್ಲ...ಶರತ್ ದತ್ತು ಪುತ್ರ...ನೀವು, ಯಶವಂತರಾಯ ಹಾಗೂ ರಾಜಲಕ್ಷ್ಮಿಯವರ ಮಗಳು ಅಂತಲೇ ಇದೆ.."

"ಸರಿ ಮತ್ತೆ...." ನೆಟ್ಟಗೆ ಕುಳಿತಳು.

"ಬರೀ ಅದಷ್ಟೇ ಅಲ್ಲ.. ಇನ್ನೂ ಒಂದು ಮುಖ್ಯವಾದ ವಿಷಯವೂ ಇದೆ. ನೀವು ನಮ್ಮ ತಾಯಿಯ ಹೊಟ್ಟೆಯಲ್ಲೇ ಹುಟ್ಟಿದವರು..."

"ಏನ್ರೀ ಅದು?...ಏನೇನೋ ಹೇಳ್ತಿದೀರಿ...? ಸರಿಯಾಗಿ ಹೇಳಿ.."

"ನಂಗೂ ಗೊತ್ತಿರದ ವಿಷಯ...ನೀವು ಬಾಡಿಗೆ ತಾಯಿಗೆ ಹುಟ್ಟಿದವರು..."

"ಏನು?.. ಬಾಡಿಗೆ ತಾಯಿ....ಅಂದರೇ...ನಿಮ್ಮ ತಾಯಿಗೂ, ನನ್ನ ತಂದೆಗೂ ಅನೈತಿಕ ಸಂಬಂಧ ಇತ್ತು ಅಂತ ಕಲ್ಪಿಸಿ ಹೇಳ್ತಿದೀರಾ?"

"ಛೆ..ಛೆ.. ಹಾಗೆಲ್ಲಿ ಹೇಳ್ದೆ ನಾನು!.. ನನ್ನ ತಾಯಿಯ ಮೇಲೆ ನಾನೇ ಕೆಟ್ಟ ಆರೋಪವನ್ನು ಹೊರಿಸ್ತೀನಾ?...ಬಾಡಿಗೆ ತಾಯಿಯ ಕೆಲಸವನ್ನು ನಮ್ಮ ತಾಯಿ ನಿರ್ವಹಿಸಿದ್ದಾರೆ. ಆದರೆ ನಿಮ್ಮ ನಿಜವಾದ ತಂದೆ ತಾಯಿ, ಇವರೇ ಇಬ್ಬರು..."

"ಆನಂದ್, ಇದೆಲ್ಲಾ ಕಟ್ಟು ಕತೆ.. ಈ ಬಗ್ಗೆ ನನ್ನ ತಾಯಿಯಾಗಲೀ, ತಂದೆಯಾಗಲೀ ಎಂದೂ ತಿಳಿಸಿರಲಿಲ್ಲ...ಹೀಗೆಲ್ಲಾದ್ರೂ ಸಾಧ್ಯಾನಾ?"

"ಈ ಬಗ್ಗೆ, ನರ್ಸಿಂಗ್ ಹೋಂನಲ್ಲಿ ವಿಚಾರಿಸೋಣ. ಅವರಿಗೆ ಗೊತ್ತಿರುತ್ತೆ."

"ಹಾಗಾದ್ರೆ, ನೀವೂ ನಿಮ್ಮ ತಾಯಿಗೆ ಬಾಡಿಗೆ ಮಗನಾ?... ನನ್ನ ತಂದೆ ತಾಯೀನೇ ನಿಮ್ಮ ತಂದೆ ತಾಯೀನಾ?"

"ಇಲ್ಲ, ನನ್ನ ತಂದೆ ಈಗ ಬದುಕಿಲ್ಲ.. ಅವರು ಒಂದು ವರ್ಷ ಜೈಲಿನಲ್ಲಿದ್ದರು. ಆಗ ಒಂದು ವರ್ಷ, ನನ್ನ ತಾಯಿ ನನ್ನೊಂದಿಗೆ, ನಿಮ್ಮ ತಂದೆಯ ಮನೆಯಲ್ಲಿ ಇದ್ದರಂತೆ. ಆಗ ನೀವು ಹುಟ್ಟಿದೀರಿ.. ಅಮ್ಮ ಸದಾ ಕೃತಜ್ಞತೆಯಿಂದ ನಿಮ್ಮ ತಂದೆ ತಾಯಿಯನ್ನು ಸ್ಮರಿಸಿಕೊಳ್ಳುತ್ತಾಳಂತೆ.. ಆದರೆ ಇದುವರೆಗೂ ಈ ವಿಷಯ ರಹಸ್ಯವಾಗಿಯೇ ಇತ್ತು. ಈಗ ಅದೇಕೋ ಅಮ್ಮ ಬಾಯಿ ಬಿಟ್ಟು ಬಿಟ್ಟಳು. ತಪ್ಪು ಮಾಡಿ ಬಿಟ್ಟಳು."

"ಹೌದು, ತಪ್ಪು ಮಾಡಿದರು. ಆದರೆ ಎಲ್ಲರ ಬಣ್ಣವೂ ಬಯಲಾಯಿತಲ್ಲ. ಶರತ್‌ಗೆ ಈ ವಿಷಯ ಮುಂಚೆಯೇ ಗೊತ್ತಾಗಿತ್ತು ಅಂತ ಕಾಣುತ್ತೆ. ಅದಕ್ಕೇ ನನ್ನನ್ನ ಇಂತಹ ಪರಿಸ್ಥಿತಿಗೆ ತಳ್ಳಿದ...ಇಲ್ದಿದ್ರೆ ಇಂಥದ್ದು ನಡೆಯೋಕೆ ಸಾಧ್ಯಾನಾ?"

"ಇಲ್ಲ ಅಂತ ಕಾಣುತ್ತೆ..." ಆದರೆ, ನನಗೆ ಈ ವಿಷಯ ಮುಂಚೆಯೇ ಗೊತ್ತಿದ್ದಿದ್ರೆ, ಎಂದೋ ನಾನು ನಿಮ್ಮನ್ನು ಇಲ್ಲಿಂದ ಕರ್ಕೊಂಡು ಹೋಗ್ತಿದ್ದೆ.."

"ಬಿಡಿ...ಆಗ ಬೇರೆ ಏನು ನಾಟಕ ಆಡ್ತಿದ್ರೋ...ಎಲ್ಲರಿಗೂ ನನ್ನ ಆಸ್ತಿಯ ಮೇಲೆ ಕಣ್ಣು..ಅಷ್ಟೇ..."

"ಚೈತ್ರಾ!. ನನಗೆ ಯಾವ ಆಸ್ತಿಯೂ ಬೇಕಿಲ್ಲ. ನಮ್ಮ ತಾಯಿಗೂ ಯಾವ ಆಸ್ತಿಯ ಮೇಲೆ ಕಣ್ಣಿರಲಿಲ್ಲ"

"ನಾನು ಈ ಮಾತನ್ನು ನಂಬುವುದಿಲ್ಲ. ಈಗ ಹೊರಟು ಹೋಗಿ.. ಮುಂದೇನು ಅಂತ ನಾನು ಯೋಚಿಸ್ಬೇಕು...ನನ್ನನ್ನ ನಾನು ರಕ್ಷಿಸಿಕೊಳ್ಳಬೇಕು."

"ನಾನು ನಿಮಗೆ ಸಹಾಯಕನಾಗಿರ್ತೀನಿ."

"ಹೇಳಿದ್ನಲ್ಲ, ನನಗೆ ಯಾರೂ ಇಲ್ಲ, ನನಗೆ ಯಾರ ಸಹಾಯವೂ ಬೇಡ, ನನ್ನ ಸ್ವಂತದವರು ಅಂತ ಹೇಳ್ಕೊಳ್ಳೋಕೆ ಯಾರಿದಾರೆ?...ಪ್ಲೀಸ್ ನೀವು ಹೋಗಿ ಈಗ..."ಅವಳು ಬಾಗಿಲ ಕಡೆ ಬೆರಳು ಮಾಡಿದಳು. ಚಿದಾನಂದ ಹೊರಕ್ಕೆ ಬಂದ. ಚೈತ್ರಾ ಯೋಚನೆಯ ಆಳದಲ್ಲಿ ಮುಳುಗಿದಳು.

* * *

"ಚೈತ್ರಾ...ಚೈತ್ರಾ...." ಶರತ್ ಹರ್ಷವನ್ನು ಪ್ರಕಟಿಸುತ್ತಾ, ಅವಳ ರೂಮಿಗೆ ಬಂದಾಗ, ಅವಳು ಹುಬ್ಬೇರಿಸಿದಳು. "ಒಂದು ಗುಡ್ ನ್ಯೂಸ್....ಹೊರಗೆ ಹೋಗೋಣ ಬಾ.." ಅವಳ

ಮಂಚದ ಮೇಲೆ ಕುಳಿತು ಹೇಳಿದ. ಅವಳು ಯಾವ ಆಸಕ್ತಿಯನ್ನು ತೋರಲಿಲ್ಲ.

"ಏನು ನಿನ್ನ ಹೊಸಾ ಸ್ಕೀಂ?" ಗಂಭೀರವಾಗಿ ಕೇಳಿದಳು.

"ಏನೇ ಹೀಗೆ ಕೇಳ್ತೀಯಾ?.. ನಮ್ಮ ಪ್ಲ್ಯಾನ್ ಸಕ್ಸಸ್ ಆಯ್ತು.. ರಾಜೀವ ನಿನ್ನ ಅಕೌಂಟ್‌ಗೆ ಮೂವತ್ತು ಲಕ್ಷ ರೂಪಾಯಿಗಳನ್ನು ಹಾಕಿದಾನೆ.. ಸಧ್ಯಕ್ಕೆ ಸಾಕು."

"ನಾನೇನೂ ಹಣ ಕೊಡು ಅಂತ ಕೇಳಿರ್ಲಿಲ್ಲ."

"ಕೇಳ್ದೇ ಕೊಡ್ತಾನಾ?.. ನನ್ಹತ್ರ ತಮಾಷೆ ಮಾಡ್ತಿದೀಯ...ಸಧ್ಯ...ಅವನು ಎಲ್ಲಿ ಮೋಸ ಮಾಡ್ತಾನೋ ಅಂತ ಹೆದರಿದ್ದೆ.. ಇಷ್ಟು ಸಾಲದು ಇನ್ನು ಬೇಕು ಅಂತ ಕೇಳು. ಖಂಡಿತಾ ಕೊಡ್ತಾನೆ.. ಅವನಿಗೂ ಅಪರಾಧ ಮನೋಭಾವ...." ಕೇಳಿದ್ರೆ ಇಲ್ಲ ಅಂತನ್ನಲ್ಲ.."

"ಅವನೊಬ್ಬನೇ ಅಲ್ಲ ಅಪರಾಧಿ...ನಾವುಗಳೂ ಕೂಡಾ...ನನಗೆ ಅವನ ಹಣ ಬೇಡ. ವಾಪಸ್ಸು ಕೊಟ್ಟು ಬಿಡ್ತೀನಿ."

"ನಿಂಗೆ ಹುಚ್ಚು ಅಂತ ಅಂತಾರೆ...ನಾನೆಷ್ಟು ತಲೆ ಕೆಡಿಸಿಕೊಂಡಿದೀನಿ? ಶ್ರಮ ಪಟ್ಟಿದೀನಿ ಅಂತ ನಿಂಗೇನು ಗೊತ್ತು?...ನಿಂಗೆ ಬೇಡವಾಗಿರಬಹುದು. ನಂಗೆ ಬೇಕು."

"ನಿಂಗೆ ಬೇಕಾದ್ರೆ ಕಷ್ಟಪಟ್ಟು ಸಂಪಾದ್ನೆ ಮಾಡ್ಕೋ.. ಹೀಗೆ ಯಾರ್‍ಯಾರದ್ದೋ ಹಣಕ್ಕೇ ಬಾಯಿ ಬಾಯಿ ಬಿಡ್ಬೇಡ."

"ಯಾರ್‍ಯಾರದ್ದೋ ಹಣ ಅಲ್ಲ. ನಮ್ಮ ಡ್ಯಾಡಿಯ ಹಣ....ಮೊದಲು ಈ ಮನೆಯ ಮೇಲಿನ ಸಾಲವನ್ನು ತೀರಿಸಬೇಕು. ಯಾವಾಗ ಡ್ರಾ ಮಾಡಿ ಕೊಡ್ತೀಯ?.."

"ಹೇಳಿದ್ನಲ್ಲ, ಈ ಹಣ ನಿನ್ನದಲ್ಲ.."

"ಪೆದ್ದು ಪೆದ್ದಾಗಿ ಮಾತಾಡ್ಬೇಡ...ನನಗೆ ಹಣದ ಅಗತ್ಯವಿದೆ.. ಒಂದು ಸಾರಿ ಈ ಸಾಲಗಳಿಂದ ಮುಕ್ತನಾಗಿ ಬಿಟ್ಟರೆ ಸಾಕು.. ಆಮೇಲೆ ನೋಡ್ತಿರು.. ಏನೇನ್ಮಾಡ್ತೀನಿ ಅಂತ? ತಲೆ ಎತ್ತಿ ಓಡಾಡಬಹುದು ನಾನು."

"ನಿಂಗೆ ಒಂದು ವಿಷಯ ಗೊತ್ತಾ ಶರತ್...ನನ್ನ ಡ್ಯಾಡಿಗೆ ನೀನು ಸ್ವಂತ...ಮಗನಲ್ಲ...ದತ್ತು ತೆಗೆದುಕೊಂಡಿದಾರೆ ನಿನ್ನನ್ನು.."

"ಹೂಂ ಗೊತ್ತು, ಶ್ವೇತಾ ಹೇಳಿದ್ಲು. ನೀನು ಅವಳಿಗೆ ಹೇಳಿದ್ಯಂತೆ.. ಇದರಿಂದ ನಮ್ಮ ಸಂಬಂಧಗಳಲ್ಲಿ ಏನೂ ವ್ಯತ್ಯಾಸವಾಗುಲ್ಲ. ನಾನು ದತ್ತು ಮಗ. ಆದ್ದರಿಂದ ನನಗೇ ಎಲ್ಲಾ ಹಕ್ಕು.. ನಾನು ನಿನಗೆ ಏನೂ ಮೋಸ ಮಾಡುಲ್ಲ. ತಂಗಿಯಂತೆಯೇ ನೋಡಿಕೊಳ್ತೀನಿ.."

"ಈಗ ಮೋಸ ಮಾಡ್ಲಿಲ್ವಾ?...ಇನ್ನು ಮುಂದೆ ಮಾಡುಲ್ಲ ಅಂತ ಏನು ಗ್ಯಾರಂಟಿ?.."

"ಬೇಕಾದ್ರೆ ಬರೆದುಕೊಡ್ತೀನಿ. ರಾಜೀವ ಕೊಟ್ಟಿರುವ ಹಣವನ್ನು ನನಗೆ ಕೊಡು. ನಿನಗೆ ಇನ್ನೂ ಸಾಕಷ್ಟು ಹಣವನ್ನು ಕೊಡುವುದಕ್ಕೆ ಅವನು ಸಿದ್ಧನಾಗಿರ್‍ತಾನೆ.. ನೋಡ್ತಿರು.."

"ನೀನು ಅವನನ್ನು ಏನೋ ಹೆದರಿಸಿರ್ಬೇಕು.."

"ನಾನು ಹೆದರಿಸಿಲ್ಲ. ಅವನಿಗೇ ಏನೋ ಪಾಪ ಪ್ರಜ್ಞೆ.. ನಾನು ಪೋಲಿಸ್ ಕಂಪ್ಲೆಂಟ್ ಕೊಟ್ಟರೆ ಅವನಿಗೆ ಜೈಲಾಗುತ್ತೆ. ಅದಕ್ಕೇ ಹೆದರಿದಾನೆ.. ನಿಂಗೆ ಕಾಂಪೆನ್ಸೇಷನ್ ಹಣವನ್ನು ಕೊಟ್ಟಿದಾನೆ. ಕೇಳಿದ್ರೆ ಇನ್ನೂ ಕೊಡ್ತಾನೆ.."

"ಏನಾದ್ರೂ ಮಾಡ್ಕೋ...ನಾನಂತೂ ಕೇಳುಲ್ಲ.."

"ಸ್ವಾಮಿ! ಸುಮ್ಮನೇ ನಾನು ಹೇಳಿದ್ದಾಗೆ ಕೇಳು.. ಇಲ್ದಿದ್ರೆ ನಿಂಗೆ ಏನು ಮಾಡ್ಬೇಕು ಅಂತ ನಂಗೊತ್ತು.. ಕಾನೂನು ನನ್ನ ಕಡೆಗಿದೆ.."

"ಕಾನೂನು ನನ್ನ ಕಡೆಗೂ ಇದೆ. ಸಾಕ್ಷಿಗಳು ನನ್ನ ಹತ್ತಿರವೂ ಇದೆ.. ತಿಳ್ಕೋ"

"ಯಾರ ಮುಂದೇನಾದ್ರೂ ನನ್ನ ಬಗ್ಗೆ ಬಾಯಿ ಬಿಟ್ಟರೆ ಕೊಂದು ಹಾಕಿ ಬಿಡ್ತೀನಿ. ಇದುವರೆಗೂ ತಂಗೀ ತರಹ ಇದ್ದೆ.. ಇನ್ನು ಮುಂದೆಯೂ ಇರೋದಾದ್ರೆ ಇರು. ಇಲ್ದಿದ್ರೆ ಎಲ್ಲಿಗಾದ್ರೂ ಹೊರಟು ಹೋಗು.." ಅವನು ಸಿಡಿದೆದ್ದು ನುಡಿದಾಗ, ಅವಳು ಹಲ್ಲು ಕಡಿದಳು. ತಾನು ಅಸಹಾಯಕಳು, ತನ್ನ ಪರಿಸ್ಥಿತಿ ಸರಿ ಇಲ್ಲ ಎಂದುಕೊಂಡು ಸುಮ್ಮನಾದಳು. ಅವನು ಹೊರಟು ಹೋಗಿದ್ದ. ಚಿದಾನಂದ ಅವರಿಬ್ಬರ ಮಾತುಗಳನ್ನು ಕೇಳಿಸಿಕೊಂಡಿದ್ದ. ಅವಳು ತಕ್ಷಣವೇ ಶ್ವೇತಾಳಿಗೆ ಫೋನು ಮಾಡಿದಳು.

* * *

"ಶ್ವೇತಾ, ಚೈತ್ರಾಳಿಗೆ ಫೋನು ಕೊಡು. ಅವಳ ಹತ್ರ ಅರ್ಜೆಂಟಾಗಿ ಮಾತನ್ನಾಡ್ಬೇಕು" ಶರತ್ ಹೇಳಿದ.

"ಚೈತ್ರಾ ಇಲ್ಲಿಗೆ ಬಂದಿಲ್ಲವಲ್ಲ.. ನೀವೂ ಬರ್ಲಿಲ್ಲ. ಎಲ್ಲಿಗೆ ಹೋಗಿದ್ರಿ?"

"ನಾನು ಊರಿನಲ್ಲಿರ್ಲಿಲ್ಲ. ಬೆಳಿಗ್ಗೆ ಬಂದೆ. ಚೈತ್ರಾ ನಿಮ್ಮ ಮನೆಗೆ ಹೋಗಿ ಎರಡು ದಿನ ಆಯ್ತು ಅಂತ ಅನ್ನಪೂರ್ಣಮ್ಮ ಹೇಳಿದ್ರು. ಅವಳನ್ನು ಕರಿ.."

"ಹೇಳಿದ್ನಲ್ಲ ಶರತ್. ಅವಳು ಇಲ್ಲಿಗೆ ಬಂದಿಲ್ಲ. ಇನ್ನೆಲ್ಲಿಗಾದ್ರೂ ಹೋಗಿರಬಹುದು ಬರ್ತಾಳೆ ಬಿಡಿ.."

"ನಿನ್ನನ್ನ ಬಿಟ್ರೆ ಬೇರೆ ಯಾವ ಫ್ರೆಂಡೂ ಅವಳಿಗಿಲ್ಲ....ನಿನ್ನಣ್ಣನ ಜೊತೆ ಎಲ್ಲಿಗಾದ್ರೂ ಹೋಗಿರಬಹುದಾ?"

"ನಾನ್ಸೆನ್ಸ್.. ಗಿರೀನ ಅವಳು ಲೈಕ್ ಮಾಡುಲ್ಲ. ರಾಜೀವನ ಮನೆಗೇನಾದ್ರೂ ಹೋಗಿರಬಹುದಾ ವಿಚಾರಿಸಿ ನೋಡಿ.." ಅವನು ಅದಕ್ಕೆ ಉತ್ತರಿಸದೇ ಮಾತನ್ನು ಮುಗಿಸಿದ. ತಕ್ಷಣವೇ ಏನೋ ಹೊಳೆದವನಂತೆ, ಚೈತ್ರಾಳ ಅಕೌಂಟ್ ಇದ್ದ ಬ್ಯಾಂಕಿಗೆ ಫೋನು ಮಾಡಿದ. ಅವಳು ಹಣವನ್ನು 'ಡ್ರಾ' ಮಾಡಿಲ್ಲವೆಂಬ ವಿಚಾರ ತಿಳಿದು ಸಮಾಧಾನವಾಗಿತ್ತು. ಅವಳು ರಾಜೀವನ ಮನೆಗೇ ಹೋಗಿರಬಹುದು. ಹೋದರೆ ಹೋಗಲಿ, ಅಲ್ಲಿಯೇ ಇರಲಿ ಎಂದುಕೊಂಡು ವಿಚಾರಿಸದೇ ಸುಮ್ಮನಾದ. ಕೆಲವು ದಿನಗಳು ಕಳೆದ ಮೇಲೆ, ಅವಳ ಹತ್ತಿರ ಮಾತನಾಡ್ತೀನಿ

ಅಂತಂದುಕೊಂಡ. ಇದೇ ಮಾತನ್ನು ಶ್ವೇತಾಳಿಗೂ ಹೇಳಿದ.

ವಾರ ಕಳೆದರೂ, ಬ್ಯಾಂಕಿನಿಂದ ಹಣವನ್ನು ಚೈತ್ರಾ ಡ್ರಾ ಮಾಡಿರಲಿಲ್ಲ. ಈ ವಿಷಯ ಅವನನ್ನು ಚಕಿತಗೊಳಿಸಿತ್ತು.. ಚೈತ್ರಾ ಡಬ್ಬಲ್ ಕ್ರಾಸ್ ಮಾಡಿಬಿಟ್ಟಳು. ರಾಜೀವನಿಂದ ಹಣವನ್ನು ಕಸಿದುಕೊಂಡಿದ್ದೂ ಅಲ್ಲದೇ...ಅವನೊಂದಿಗೇ ರಾಜೀ ಮಾಡಿಕೊಂಡು ನನಗೂ ಮೋಸ ಮಾಡಿದಳು ಎಂದು ಬೈದುಕೊಂಡು ರಾಜೀವನ ಮನೆಗೆ ಫೋನು ಮಾಡಿದ.

"ಚೈತ್ರನ್ನ ಕರಿ. ಅವಳ ಹತ್ರ ಮಾತಾಡ್ಬೇಕು" ಅಂತಂದ.

"ಚೈತ್ರಾ.. ಯಾವ ಚೈತ್ರಾ?" ರಾಜೀವ ಚಕಿತನಾಗಿ ಕೇಳಿದ.

"ನಾನು ಶರತ್.. ನನ್ನ ತಂಗಿ ಚೈತ್ರಾ, ನಿನ್ನ ಹೆಂಡತಿ ಚೈತ್ರಾ.. ಅವಳು ನಿನ್ನ ಮನೆಗೆ ಬಂದಿದಾಳೆ ಅಂತ ನಂಗೊತ್ತು, ಅವಳ ಹತ್ರ ಮಾತಾಡ್ಬೇಕು..ಕರಿ"

"ತಮಾಷೆ ಮಾಡ್ಬೇಡ ನೀನು, ಅವಳ್ಯಾಕೆ ಇಲ್ಲಿಗೆ ಬರ್ತಾಳೆ?.. ಕೊಡಬೇಕಾದ ಹಣಾನ ಅವಳ ಅಕೌಂಟ್‌ಗೆ ತುಂಬಿಸಿದ್ದಾಯ್ತಲ್ಲ.. ಇನ್ನೇನೂ ಸಂಬಂಧ ಬಾಕಿ ಇಲ್ಲ."

"ತಮಾಷೆ ಮಾಡಿ, ನೋಡ್ತಾ ಇರೋನು ನೀನು.. ಪೋಲಿಸ್ ಕಂಪ್ಲೆಂಟ್ ಕೊಟ್ಟರೆ, ಏನು ಸಂಬಂಧ ಅಂತ ಬಾಯಿ ಬಿಡಿಸ್ತಾರೆ."

"ಸರಿ, ಅದೇನು ಮಾಡ್ತೀಯೋ ಮಾಡು.. ನೀನೂ ಪೋಲಿಸರಿಂದ ದೂರ ಇರುಕ್ಕೆ ಆಗುಲ್ಲ.. ಅವಳು ಇಲ್ಲ ಇಲ್ಲ ಅಂತಂದ್ರೆ ಇಲ್ಲಿಗೆ ಬಂದಿಲ್ಲ. ಇಡು ಫೋನನ್ನ" ಎಂದು ಹೇಳಿ ಮುಖಕ್ಕೆ ಹೊಡೆದಂತೆ ರಿಸೀವರ್‌ನ ಕುಕ್ಕಿದ್ದ. ಶರತ್‌ಗೆ ತಲೆ ಕೆಟ್ಟು ಹೋದಂತಾಗಿತ್ತು. ಇವಳು ಯಾವ ಹೊಸ ಆಟವನ್ನು ಶುರು ಮಾಡಿದಳು ಅಂತ ಯೋಚಿಸುವಂತಾಗಿತ್ತು. ಚಿದಾನಂದನನ್ನು ಕರೆದ.

"ಚೈತ್ರಾ ಮನೇಲಿಲ್ಲ, ಒಂದು ವಾರವಾಗಿದೆ. ಎಲ್ಲಿಗೆ ಹೋದ್ಲು ಅಂತ ನಿನಗೇನಾದ್ರೂ ಗೊತ್ತಾ?.."

"ಇಲ್ಲ, ನಂಗೊತ್ತಿಲ್ಲ.. ಯಾವ್ದಾದ್ರೂ ಫ್ರೆಂಡ್ ಮನೆಗೆ ಹೋಗಿರಬಹುದು."

"ಎಲ್ಲಾ ಕಡೆಯೂ ವಿಚಾರಿಸಿದ್ದಾಯ್ತು.. ಮನೇಲೇ ಇರ್ತೀರಿ. ಅಷ್ಟೂ ತಿಳ್ಕೊಬೇಡ್ವಾ!... ಅವಳ ಮನಃಸ್ಥಿತಿ ಬೇರೆ ಸರಿ ಇರ್ಲಿಲ್ಲ... ನಿಮಗೆ ಮುತುವರ್ಜಿ ಬೇಡ್ವಾ?"

"ಪೋಲಿಸ್ ಕಂಪ್ಲೆಂಟ್ ಕೊಟ್ಟರೆ?.." ಸಲಹೆಯನ್ನು ಕೊಟ್ಟ.

"ಪೋಲಿಸ್ ಕಂಪ್ಲೆಂಟ್ ಕೊಟ್ಟರೆ, ನಾನಾ ಪ್ರಶ್ನೆಗಳು ಹುಟ್ಟಿ ಕೊಳ್ಳುತ್ತವೆ. ಎಲ್ಲರಿಗೂ ವಿಷಯ ತಿಳಿಯುತ್ತೆ. ಮನೆಯ ವಿಷಯಗಳು ಹೊರಕ್ಕೆ ಬರುತ್ತವೆ. ಇದೆಲ್ಲಾ ಬೇಕಾ?"

"ಹಾಗಾದ್ರೆ ಈಗ? ಏನ್ಮಾಡೋದು, ಎಲ್ಲಿ ಅಂತ ಹುಡುಕೋದು?"

"ನಾನು ಊರಿನಲ್ಲಿ ಇಲ್ಲದಿದ್ದಾಗ, ನಿಮ್ಮ ತಾಯಿ ಊರಿಗೇನಾದ್ರೂ ಬಂದಿದ್ರಾ?.."

"ಇಲ್ಲ.. ಅವರು ಮಾತನ್ನು ಸಹ ಆಡಿಲ್ಲ."

"ಅವಳ ಪಾಡಿಗೆ ಅವಳು ಸರಿಯಾಗಿದ್ಲು, ನಿಮ್ಮ ತಾಯಿ ಬಂದು ಏನೇನೋ ಮಾತನ್ನಾಡಿ, ಅವಳ ತಲೆ ಕೆಡುವಂತೆ ಮಾಡಿದ್ರು.. ಅವಳು ಕಾಣೆಯಾಗಿದ್ದಕ್ಕೆ ನಿಮ್ಮ ತಾಯೀನೇ ಜವಾಬ್ದಾರಿ ಆಗ್ತಾರೆ...ಗೊತ್ತಾ!"

"ಇಲ್ಲ, ನಂಗೆ ಯಾವ ವಿಷಯವೂ ಗೊತ್ತಿಲ್ಲ.."

"ಸುಳ್ಳು ಹೇಳ್ಬೇಡಿ ಚಿದಾನಂದ್...ನಿಮ್ಮ ತಾಯಿ ಹೇಳಿದ್ದೆಲ್ಲಾ ನಿಜ ಅಂತ ಚೈತ್ರಾ ಶ್ವೇತಾಳಿಗೆ ಹೇಳಿದಾಳಂತೆ...ನಿಮ್ಮ ತಾಯಿ ಮಾಡಿದ್ದು ಸರೀನಾ?"

"ಸ್ನೇಹಿತೆಯರು ಏನೇನು ಮಾತಾಡಿಕೊಳ್ತಾರೋ ನಂಗೇನು ಗೊತ್ತು!"

"ನಿಮಗೇನು ಗೊತ್ತಿದೆ, ಗೊತ್ತಿಲ್ಲ ಅನ್ನೋದನ್ನ ನಿಧಾನವಾಗಿ ವಿಚಾರಿಸಿಕೊಳ್ತೀನಿ. ಈಗ್ಲೇ ನಿಮ್ಮ ತಾಯಿಯ ಹತ್ರ ಮಾತಾಡಿ, ಚೈತ್ರಾ ಅಲ್ಲಿಗೇನಾದ್ರೂ ಬಂದಿದಾಳಾ ಅಂತ ವಿಚಾರಿಸಿ..." ಶರತ್ ಗುರುಗುಟ್ಟಿ, ಹೊರಬಾಗಿಲಲ್ಲಿ ನಿಂತ.

ಚಿದಾನಂದ ತಾಯಿಯ ಹತ್ತಿರ ಫೋನಿನಲ್ಲಿ ಮಾತನಾಡಿ, 'ಚೈತ್ರಾ ಅಲ್ಲಿಗೆ ಹೋಗಿಲ್ಲವಂತೆ' ಎಂದು ತಿಳಿಸಿದ. ಶರತ್ ಕೈ ಕೈ ಹಿಸುಕಿಕೊಂಡ. ಶಥಪಥ ತಿರುಗಿದ. ರಾಜೀವ, ಚೈತ್ರಾ, ಚಿದಾನಂದ ಹಾಗೂ ಶ್ವೇತಾ ಎಲ್ಲರೂ ಒಂದಾಗಿ ತನ್ನ ವಿರುದ್ಧ ಏನಾದರೂ ಪಿತೂರಿ ಮಾಡುತ್ತಿರಬಹುದೇ ಎಂಬ ಅನುಮಾನ ಕಾಡ ತೊಡಗಿತು. ಒಂದು ರೀತಿಯ ಭಯ ಆವರಿಸಿಕೊಂಡಿತು...ನೆಮ್ಮದಿ ಕೆಟ್ಟಿತ್ತು...

* * *

"ಅತ್ತೇ...ಹೇಮಾ ಬಂದಿದಾಳಾ?" ಎನ್ನುತ್ತಾ ಒಳ ಬಂದ ಭುಜಂಗ, ಸೋಫಾದ ಮೇಲೆ ಕುಳಿತಿದ್ದ ಅಪರಿಚಿತ ಯುವತಿಯನ್ನು ಕಂಡು ಹಾಗೇ ನಿಂತ.

"ಓ.. ನೀನಾ? ಅಲ್ಲೇ ಯಾಕೆ ನಿಂತ್ಬಿಟ್ಟೆ ಭುಜೀ...ಬಿಸಿ ಬಿಸಿ ಕಾಫಿ ಮಾಡಿದೀನಿ ಒಳಗೇ ಬಾ" ಭುಜಂಗ ಸೀದಾ ಅಡಿಗೆ ಮನೆಗೆ ನಡೆದ. ಮೆತ್ತಗೆ ಕೇಳಿದ.

"ಅತ್ತೇ.....ಈ ಹುಡುಗಿ ಯಾರು! ಈ ಮುಂಚೆ ನೋಡಿದಂತಿಲ್ಲ. ಹೇಮಾಳ ಫ್ರೆಂಡಾ!"

"ಇಲ್ಲ, ಇವಳು ನನ್ನ ತಂಗಿ ಮಂದಾಕಿನಿಯ ಮಗಳು ಪಲ್ಲವಿ ಅಂತ. ಏನೋ ನಡೆದಿದೆ. ನಾಲ್ಕು ದಿನ ಇಲ್ಲಿರಲಿ ಅಂತ ಕರೆತಂದು ಬಿಟ್ಟಿದಾಳೆ.. ಸುಮ್ಮನೇ ಟಿ.ವಿ.ಮುಂದೆ ಏನನ್ನೋ ಯೋಚಿಸುತ್ತಾ ಕೂತಿರುತ್ತೆ. ಅದೇನು ನಡೆದಿದೆಯೋ ದೇವರಿಗೇ ಗೊತ್ತು. ಈ ಕಾಫಿ ಬಟ್ಟಲನ್ನು ಆ ಹುಡುಗಿಗೆ ಕೊಡು.."

"ಯಾರಾದ್ರೂ ಪೋಲಿಗಳು ಇವಳ ಹಿಂದೆ ಬಿದ್ದು ಬೆದರಿಕೆ ಹಾಕಿದಾರಂತಾ?"

"ಏನೋ ಯಾರಿಗ್ಗೊತ್ತು? ಹೇಳಿದ್ರೆ ತಾನೇ ಗೊತ್ತಾಗೋದು!.. ನೀನು ಊರ್ನಿಂದ ಯಾವಾಗ ಬಂದೆ?.. ವಿಜಯ ಹುಷಾರಾಗಿದಾಳಾ?.. ಅವಳು ಹೇಗಿದಾಳೆ?

"ಎಲ್ಲಾ ಚೆನ್ನಾಗಿದಾರೆ ಅತ್ತೇ...ಭಾವಂದೇ ಕಿರಿ ಕಿರಿ.. ನಿಧಾನವಾಗಿ ಮಾತಾಡ್ತೀನಿ ಎನ್ನುತ್ತಾ

ಕಾಫಿಯ ಲೋಟವನ್ನು ಹಿಡಿದು ಹೊರಕ್ಕೆ ಬಂದ. ಪಲ್ಲವಿಯ ಮುಂದೆ ನಿಂತು ಬಟ್ಟಲನ್ನು ಅವಳ ಮುಂದೆ ಹಿಡಿದ. ಅವಳು ಕತ್ತೆತ್ತಿ ನೋಡಿದಳು. ಅವನು ಮುಗುಳ್ನಕ್ಕ. ಅವಳು ನಗಲಿಲ್ಲ. ಮೌನವಾಗಿ ಕಾಫಿಯ ಬಟ್ಟಲನ್ನೆತ್ತಿಕೊಂಡಳು. ನಿಧಾನವಾಗಿ ಕುಡಿಯಲಾರಂಭಿಸಿದಳು.

"ನಾನು, ಭುಜಂಗ ಅಂತ...ವೈದೇಹಿ ನನಗೆ ಅತ್ತೆಯಾಗ್ಬೇಕು" ತನ್ನ ಪರಿಚಯವನ್ನು ಹೇಳಿಕೊಂಡ. ಅವಳು ಯಾವ ಪ್ರತಿಕ್ರಿಯೆಯನ್ನು ತೋರಲಿಲ್ಲ. ಕುಡಿದು ಮುಗಿಸಿದ ಬಟ್ಟಲನ್ನು ಪಕ್ಕದಲ್ಲಿದ್ದ ಟೀಪಾಯ್ ಮೇಲಿಟ್ಟಳು. ಸೋಫಾದ ಬೆನ್ನಿಗೆ ಒರಗಿ ಕಣ್ಣುಗಳನ್ನು ಮುಚ್ಚಿದಳು. ಅವಳು ಕಣ್ಣು ತೆರೆಯುವಳೇನೋ ಅಂತಂದುಕೊಂಡು, ಒಂದು ಗಳಿಗೆ ಅಲ್ಲಿಯೇ ನಿಂತು ಅವಳನ್ನು ದಿಟ್ಟಿಸಿದ. ಅವಳು ಕಣ್ಣು ತೆರೆಯಲಿಲ್ಲ. ಅಲ್ಲಿಂದ ಮತ್ತೆ ಅಡಿಗೆಯ ಮನೆಗೆ ಬಂದ. ಹುಬ್ಬುಗಳನ್ನು ಗಂಟಿಕ್ಕಿ ನುಡಿದ.

"ಅತ್ತೇ...ನೀವು ಅವಳಿಗೆ ಕುಳಿತ ಕಡೆಯೇ ಉಪಚಾರ ಮಾಡ್ಬೇಡಿ...."

"ನಿಂಗ್ಯಾಕೋ ಕೋಪ? ಅವಳು ಈ ಮನೆಗೆ ಬಂದಿರುವ ಅತಿಥಿ..."

"ಅತಿಥಿ ಸತ್ಕಾರವನ್ನು ಸರಿಯಾಗೇ ಮಾಡ್ತಿದೀರಿ.. ತಿಂಡಿ ತಿಂದ ತಟ್ಟೆ ಅಲ್ಲಿಯೇ ಬಿದ್ದಿದೆ. ಕಾಫಿಯ ಬಟ್ಟಲು ಅಲ್ಲಿಯೇ ಒಣಗಿಕೊಂಡು ಕುಳಿತಿದೆ.. ನಿಮಗೆ ಕಷ್ಟ ಆಗುಲ್ವಾ?"

"ಕೆಲಸದವಳು ಬಂದು ತೆಗೀತಾಳೆ ಬಿಡು. ಹುಡುಗಿ ಏನೋ ಹೆದರಿರುವಂತೆ ಅನ್ನಿಸುತ್ತೆ.. ಅವಳ ಪಾಡಿಗೆ ಅವಳು ಇರಲಿ ಬಿಡು.." ತೋಟಕ್ಕೆ ಹೋಗಿ ಬಂದ್ಯಾ!.."

"ಇನ್ನೂ ಇಲ್ಲ ಆಮೇಲೆ ಹೋಗ್ತೀನಿ....ನಂಗೇನಾದ್ರೂ ಕೆಲಸ ಇದ್ರೆ ಹೇಳಿ.."

"ಹಾಗಾದ್ರೆ ಒಂದು ಕೆಲಸ ಮಾಡು, ಈ ಹುಡುಗೀನ ನಿನ್ನ ಜೊತೆಯಲ್ಲಿ ಕರಕೊಂಡು ಹೋಗಿ ತೋಟವನ್ನು ತೋರಿಸು.. ಗೆಲುವಾಗ್ತಾಳೆ. ಮೂರು ದಿನದಿಂದ ಮನೇಲೇ ಕೂತಿದೆ. ಮಾತಿಲ್ಲ ಕತೆ ಇಲ್ಲ.. "ಏನಾಗಿದ್ಯೋ ಏನೋ?" ನಿಟ್ಟುಸಿರು ಬಿಟ್ಟಳು.

"ನನಗೆ ಈ ಕೆಲಸ ಬೇಡ ಅತ್ತೆ.. ಹುಡುಗೀರ ಸಹವಾಸವೇ ಬೇಡ, "ನೀವೇ ಸುತ್ತಾಡಿಸ್ಕೊಂಡು ಬನ್ನಿ , ಅಥವಾ ವಾಣಿಗೆ ಹೇಳಿ..."

"ವಾಣಿ ಈ ಕಡೆ ಬಂದೇ ಇಲ್ಲ...ನಂಗೆ ಬಿಡುವೆಲ್ಲಿದೆ! ಮನೆಯಲ್ಲಿ ಅಡಿಗೆ ಕೆಲಸ.. ನಿನ್ನ ಮಾವನ ಶುಶ್ರೂಷೆ..ಇಲ್ದಿದ್ರೆ ನಾನೇ ಕರ್‍ಕೊಂಡು ಹೋಗಿ ಬರ್ತಿದ್ದೆ. ಒಂದೇ ಹುಡುಗಿ...ಜೊತೆಗೆ ಗಂಡು ಹುಡುಗ ಇದ್ರೆ ಆ ಹುಡುಗಿಗೂ ಧೈರ್ಯ ಇರುತ್ತೆ."

"ಭಯ ಏನು! ಸರಿಯಾಗಿದಾಳೆ ತಾನೆ?" ನಗುತ್ತಾ ಪ್ರಶ್ನಿಸಿದ.

"ಅಂದ್ರೇ...ಏನಾಗಿದೆ ಅಂತ ನಿನ್ನ ಮಾತಿನ ಅರ್ಥ?"

"ಭೂತ, ಪ್ರೇತ ಏನಾದ್ರೂ ಮೆಟ್ಟಿಕೊಂಡಿದೆಯಾ ಅಂತ, ಮಂಕುತನವೋ...ವಯಸ್ಸಿಗೆ ಮೀರಿದ ಗಾಂಭೀರ್ಯವೋ....ಅರ್ಥವಾಗ್ತಿಲ್ಲ, "ಗುಂ ಅಂತಿದೆ ಮುಖ."

"ಮೆತ್ತಗೆ ಮಾತಾಡು, ಈ ಹುಡುಗಿಯ ಪರಿಸ್ಥಿತಿಯನ್ನು ಅರ್ಥ ಮಾಡ್ಕೊಂಡು ನಾವು

ಏನು ಮಾಡ್ಬೇಕಾಗಿದೆ? ಮಂದಾಕಿನಿ, ಈ ವಾರದೊಳಗೆ ಬಂದು ವಾಪಸ್ಸು ಕರ್ಕೊಂಡು ಹೋಗ್ತಾಳಂತೆ. ಅಲ್ಲಿಯವರೆಗೆ ನನ್ನ ಜವಾಬ್ದಾರಿ.. ಆದರೆ ಒಂಟಿಯಾಗಿ ಕೂತ್ಕೊಂಡು ಕಾಲ ಕಳೆಯೋದನ್ನ ನೋಡಿದ್ರೆ ವ್ಯಥೆಯಾಗುತ್ತೆ. ಅವಳ ವಯಸ್ಸಿನವರು ಯಾರು ಇಲ್ಲಿ ಇಲ್ಲ.''

"ನಾನಿದೀನಲ್ಲ..." ತಟ್ಟನೆ ನುಡಿದು ನಾಲಿಗೆಯನ್ನು ಕಚ್ಚಿಕೊಂಡ, ಅತ್ತೆ ನಕ್ಕಳು."

"ನೀನು ಹುಡುಗ...ನಿನ್ನ ಹತ್ರ ಮಾತಾಡ್ತಾಳೋ ಇಲ್ವೋ..ನೀನೂ ಊರಲ್ಲಿರಲಿಲ್ಲ."

"ಈಗ ಬಂದಿದೀನಲ್ಲ. ಮಾತಾಡ್ಸು ಅಂತಂದ್ರೆ ಮಾತನಾಡ್ತೀನಿ.." ತುಂಟತನ ಇಣುಕಿತ್ತು

"ಧಾರಾಳವಾಗಿ ಮಾತಾಡು, ಅವಳೂ, ಹೇಮ ಇದ್ದ ಹಾಗೆ.. ಹೊಸ ಜಾಗ, ಹೊಸ ಜನ.. ಏನೋ ಬೆದರಿಕೆ, ಅಂಜಿಕೆ...ನಿನ್ನ ಅಜ್ಜ ಹೇಗಿದಾರೆ!.."

"ಅಜ್ಜ ಹುಶಾರಾಗಿದಾರೆ ಅತ್ತೆ.. ನಾನಿನ್ನು ಬರಲಾ? ಆಮೇಲೆ ಮತ್ತೆ ಬರ್ತೀನಿ." ಎನ್ನುತ್ತಾ ಹೊರಬಂದ. ಸೋಫಾದ ಮೇಲೆ ಅವಳು ಕುಳಿತಿರಲಿಲ್ಲ. ಅತ್ತಿತ್ತ ನೋಡುತ್ತಾ ಸೀದಾ ಹೊರಕ್ಕೆ ಬಂದ. ಬಾವಿ ಕಟ್ಟೆಯ ಮೇಲೆ ಅವಳು ಕುಳಿತಿದ್ದುದನ್ನು ಕಂಡ.. ಒಂದು ಗಳಿಗೆ ಗಾಬರಿಯೆನಿಸಿದರೂ, ಏನನ್ನೂ ಆಡದೆ ಮುಂದೆ ನಡೆದ. ಹತ್ತು ಹೆಜ್ಜೆ ನಡೆದ ಮೇಲೆ ಹಿಂತಿರುಗಿ ನೋಡಿದ. ಅವಳು ಅವನ ಕಡೆಯೇ ನೋಡುತ್ತಿದ್ದಳು. ಮತ್ತೆ ಹಿಂದಕ್ಕೆ ಬಂದು ಅವಳ ಎದುರಿಗೆ ನಿಂತ.

"ಇಲ್ಲಿ ಒಬ್ಬರೇ ಕೂತ್ಕೊಂಡು ಏನ್ಮಾಡ್ತಿದೀರಿ? ಬಾವಿಯಲ್ಲಿ ತುಂಬಾ ನೀರಿದೆ."

"ಹೆದರ್ಬೇಡಿ.. ನಾನೇನೂ ಬೀಳುವುದಿಲ್ಲ." ಅವಳು ನುಡಿದಾಗ ಆಶ್ಚರ್ಯದಿಂದ ಕಣ್ಣರಳಿಸಿದ.

"ಆ ಭಯ ನಂಗಿಲ್ಲ. ಸುಮ್ಮನೇ ಹೇಳಿದೆ.. ಇಲ್ಲೇ ಹತ್ತಿರದಲ್ಲಿ ನಮ್ಮ ಮನೆ ಇದೆ ಬನ್ನಿ.. ನನ್ನ ತಂಗಿ ಇದಾಳೆ.. ಪರಿಚಯ ಮಾಡಿಕೊಡ್ತೀನಿ, "ಅಜ್ಜೀನೂ ಇದಾರೆ" ನಕ್ಕ.

"ಪರವಾಗಿಲ್ಲ ಬಿಡಿ.. ಇನ್ನು ನಿಮ್ಮ ಪರಿಚಯವೇ ಸರಿಯಾಗಿ ಆಗಿಲ್ಲವಲ್ಲ."

"ಅದಕ್ಕೇನಂತೆ.. ನನ್ನ ಬಗ್ಗೆ ಏನು ವಿವರ ಬೇಕು ಕೇಳಿ, ಹೇಳ್ತೀನಿ.. ತಿಂಡಿ ತಿಂತೀರಾ! ಅಮ್ಮ ಚೆನ್ನಾಗಿ ತಿಂಡಿ ಮಾಡ್ತಾಳೆ.. ತಂದು ಕೊಡ್ಲಾ?"

"ಬೇಡ, ನಂಗೆ ಸೇರುವ ಹಾಗಿಲ್ಲ, ದೋಸೆ ತಿಂದಿದೀನಿ."

"ನಂಗೊತ್ತಿತ್ತು ನೀವು ಹೀಗೇ ಹೇಳ್ತೀರಿ.. ಅಂತ ಹಳ್ಳಿಯ ಅಪರೂಪದ ತಿಂಡಿಗಳು ಪಟ್ಟಣದವರು ನಿಮಗೆಲ್ಲಿ ಸೇರುತ್ತೇ? ಯಾರಿಗೂ ಬೇಸರ ಮಾಡ್ಬೇಡಿ.. ಕೊಟ್ಟಾಗ ಇಸ್ಕೊಳ್ಳಿ. ಸೇರ್ದಿದ್ರೆ, ಬಾವಿಗೆ ಸುರೀರಿ. ಬಾವೀಲಿ ಸಾಕಷ್ಟು ಮೀನುಗಳಿವೆ." ಅವನು ನಕ್ಕ. ಅವಳೂ ಮುಗುಳ್ನಕ್ಕಳು. ಅವಳ ಮುಗುಳು ನಗು ಮೊಗ್ಗು ಬಿರಿದಂತಿದೆ ಅಂತೆನ್ನಿಸಿತು. ಅವಳನ್ನೇ ಮೆಚ್ಚುಗೆಯಿಂದ ನೋಡಿದ. ಅವಳ ಮುಖ ಕೆಂಪಾಗಿತ್ತು. ಅರೆ ಬಿರಿದ ಕೆಂದಾವರೆ ಹೂವು ಎಂದುಕೊಂಡ ಮನಸ್ಸಿನಲ್ಲೇ....ಇನ್ನಷ್ಟು ಹೊತ್ತು ಅಲ್ಲೇ ನಿಂತುಕೊಂಡಿರುವ ಮನಸ್ಸಾಗಿತ್ತು.

"ನಿಮಗೆ ಈ ತಿಂಡಿ ಸೇರದೇ ಇರಬಹುದು. ಮೀನುಗಳು ಬಾಯಿ ಬಾಯಿ ಬಿಟ್ಟುಕೊಂಡು

ಕೂತಿರುತ್ತೆ'' ತನ್ನ ಮಾತಿಗೆ ತಾನೇ ನಕ್ಕ. ಅವಳು ನಕ್ಕಂತೆ ಮಾಡಿ, ಕಟ್ಟೆಯ ಮೇಲಿನಿಂದ ಇಳಿದು, ಒಳಗೆ ಹೊರಟು ಹೋದಳು. ಅಲ್ಲೇ ನಿಂತಿದ್ದು, ಅವಳ ಬೆನ್ನನ್ನೇ ನೋಡಿದ. ಬೆನ್ನ ಮೇಲೆ ಹರಿದಾಡುವ ಉದ್ದನೆಯ ಜಡೆ ಇರಲಿಲ್ಲ. ಮುಡಿಯಲ್ಲಿ ಮಲ್ಲಿಗೆ ಹೂವಿರಲಿಲ್ಲ. ಭುಜದವರೆಗೆ ಕತ್ತರಿಸಿ ಇಳಿ ಬಿಟ್ಟಿದ್ದ ತಲೆ ಗೂದಲು, ಬಿಳಿಯ ಕೊರಳು ಕಾಣುವಂತೆ ಉಟ್ಟಿದ್ದ ಉಡುಗೆ, ತೊಟ್ಟಿದ್ದ ಚೂಡಿದಾರ್ ಡ್ರೆಸ್‌ನಲ್ಲಿ ಚಿಕ್ಕ ಹುಡುಗಿಯಂತೆ ಕಂಡಳು. ಅವಳು ಮರೆಯಾಗುವವರೆಗೂ ನಿಂತಿದ್ದು, ತನ್ನ ಮನೆಯ ದಾರಿಯನ್ನು ಹಿಡಿದ.

"ಭುಜಂಗ ಹೊರಟು ಹೋದ್ನಾ?'' ವೈದೇಹಿ ಕೇಳಿದಳು.

"ಹೂಂ ಅಂತ ಕಾಣುತ್ತೆ..''

"ಅವನಿಗೆ ಸಿಹಿ ಕಡುಬು ಅಂತಂದ್ರೆ ಭಾಳ ಇಷ್ಟ. ಕೊಡೋದೇ ಮರೆತು ಹೋಯ್ತು.. ಹೋಗಿ ನೋಡ್ತೀನಿ'' ಎನ್ನುತ್ತಾ ವೈದೇಹಿ ಆಚೆಗೆ ಬಂದು, "ಭುಜೀ..ಭುಜೀ' ಎಂದು ಜೋರಾಗಿ ಕೂಗು ಹಾಕಿದಳು. ಅವನು ಹಿಂತಿರುಗಿ ನೋಡಿ ವೇಗವಾಗಿ ಬಂದ. ಗಾಬರಿಗೊಂಡು ಕೇಳಿದ.

"ಏನಾಯ್ತು ಅತ್ತೆ ಯಾಕೆ ಕರೆದ್ರಿ?..''

"ಕಡುಬು ಕಾಯಿ ಹಾಲು ಮಾಡಿದ್ದೆ ಕಣೋ..ಮರೆತೇ ಹೋಯ್ತು. ಕೊಡ್ತೀನಿ ಬಾ..'' ಅವನು ಮುಗುಳ್ನಕ್ಕು ಆಕೆಯ ಹಿಂದೆ ಬಂದ. ಚಿಕ್ಕ ತಟ್ಟೆಯ ತುಂಬಾ ಕಡುಬನ್ನು ಹಾಕಿ ವೈದೇಹಿ ಅವನ ಕೈಗೆ ಕೊಟ್ಟಳು.

"ಅತ್ತೇ..ನಿಮ್ಮ ಅತಿಥಿ ತಿಂದ್ರಾ?..''

"ಬೇಡ ಅಂತಂದ್ಲಪ್ಪಾ...ದೋಸೇನ ಮಾಡ್ಕೊಟ್ಟೆ. ಈಗಿನ ಕಾಲದ ಹುಡಿಗೀರು...ಯಾವುದನ್ನ ಕೇಳಿದ್ರೂ ಬೇಡ ಬೇಡ ಅಂತ ಅಂದೇ ಅಂತಾರೆ...ನಮ್ಮ ಹೇಮಾನೂ ಹೀಗೇ ತಾನೇ..?''

"ಹೇಮಾ ಅಂದ್ರೆ ಡಾಕ್ಟರಾಗೋಳು.. ಲೆಖ್ಖಾಚಾರವಾಗಿ ತಿಂತಾಳೆ. ಟೈಮಿಗೆ ಸರ್‍ಯಾಗಿ ತಿಂತಾಳೆ. ನಮಗೆಲ್ಲಾ ಯಾವ ನಿಯಮವೂ ಇಲ್ಲ.'' ಎಂದು ಹೇಳುತ್ತಾ ಕಡುಬನ್ನು ಬಾಯಿಗೆ ತುರುಕಿಕೊಂಡು ತಿನ್ನುತಾ ಮಾತನಾಡಿದ. ಎದುರಿಗೆ ಕೂತಿದ್ದ ಪಲ್ಲವಿಗೆ ನಗು ಬಂದಿತ್ತು..

"ಯಾಕ್ರೀ ನಗ್ತೀದೀರಾ...ನನ್ನ ಮುಖ ಹನುಮಂತನ ಥರ ಕಾಣ್ತಿದೆ ತಾನೇ...ನಂಗೊತ್ತು.''

"ಸಾರೀ...ನಗು ಬಂದು ಬಿಡ್ತು.. ಸಾರೀ...''

"ಯಾಕೆ ಸಾರೀ...? ಪರವಾಗಿಲ್ಲ ನಕ್ಕು ಬಿಡಿ.. ನನ್ನ ತಂಗೀನೂ ಹೀಗೇ ನಗ್ತಾಳೆ...ಅತ್ತೇ ವಾಣಿಗೊಂದೆರಡು ಕಡುಬನ್ನು ಹಾಕಿಕೊಡಿ..''

"ಅವಳನ್ನೇ ಇಲ್ಲಿಗೆ ಕಳ್ಸು.. ನಿಮ್ಮ ಮನೆಗೆ ಅಂತಂದ್ರೆ ಎಲ್ರಿಗೂ ಕಳಿಸ್ಬೇಕಾಗುತ್ತೆ.. ಅಷ್ಟೊಂದು ನಾನು ಮಾಡಿಲ್ಲ...ಇವತ್ತು ನೋಡು, ಹೇಮಾ ತುಂಬಾ ನೆನಪಿಗೆ ಬಂದ್ಲು..''

"ಅವಳು ಯಾವಾಗ ಬರ್ತಾಳೆ ಅತ್ತೇ...''

"ಏನೋ ಯಾರಿಗ್ಗೊತ್ತು?.. ಯಾವಾಗ್ಲೋ ಬರ್ತಾಳೆ. ಯಾವಾಗ್ಲೋ ಹೊರಟೇ ಬಿಡ್ತಾಳೆ. ನಮಗೋಸ್ಕರ ಬಂದು, ಇಲ್ಲಿ ಒಂದು ವಾರ ಇರುವ ಮನಸ್ಸು ಎಲ್ಲಿದೆ ಅವಳಿಗೆ?..

"ಬಿಡಿ ಅತ್ತೇ...ಅವಳಿಗೆ ಬಿಡುವೆಲ್ಲಿರುತ್ತೆ!... ಮೆಡಿಕಲ್ ಕೋರ್ಸು ಅಂದ್ರೆ ಏನು ಕಡಿಮೇನಾ?..ಓದೋದು ಬೇಕಾದಷ್ಟಿರುತ್ತೆ..." ಪಲ್ಲವಿಗೆ ತಿಳಿಯಲಿ ಎಂಬಂತೆ ಹೇಳಿದ.

"ಅದಕ್ಕೇ ಹೇಳಿದ್ದು, ಓದ್ಕೊಂಡೇ ಇದ್ದರೆ, ನಮಗೋಸ್ಕರ ಏನ್ಮಾಡ್ತಾಳೆ? ನೀನಾದ್ರೂ ಹೇಳ್ಬಾರ್ದಾ..? ನಿನ್ನ ಮಾತಿಗೆ ಬೆಲೆ ಇರುತ್ತೆ."

"ಇಲ್ಲ ಅತ್ತೆ, ಅದು ಅವಳು ಆರಿಸಿಕೊಂಡದ್ದು. ನಾನೇನು ಹೇಳ್ಲಿ!..." ಎನ್ನುತ್ತಾ ಕೈ ತೊಳೆಯಲೆಂದು ಎದ್ದ. ಮಾತು ಮುಂದುವರೆಯುವುದು ಅವನಿಗೆ ಬೇಕಿರಲಿಲ್ಲ. ತನ್ನ ಮನೆಯ ಕಡೆಗೆ ನಡೆದ. ಸ್ವಲ್ಪ ಹೊತ್ತಿನಲ್ಲೇ ಅವನ ತಂಗಿ, ನಾಲ್ಕಾರು ಕತೆ ಪುಸ್ತಕಗಳನ್ನು ಹಿಡಿದು ವೈದೇಹಿಯ ಮನೆಗೆ ಬಂದಳು.

"ಏನೇ ಅದು ಪುಸ್ತಕಗಳು ವಾಣೀ?" ವೈದೇಹಿ ಕೇಳಿದ್ದಳು.

"ಕತೆ ಪುಸ್ತಕಗಳು ಅತ್ತೇ.. ಅಣ್ಣ ಕೊಟ್ಟ.. ಪಲ್ಲವಿ ಅನ್ನೋರ್ಗೆ ಕೊಡಬೇಕಂತೆ..."

"ಸರಿ ಬಿಡು.. ಅಲ್ಲಿಡು, ನೀನು ಕಡುಬು ತಿನ್ನು.." ಎನ್ನುತ್ತಾ ತಟ್ಟೆ ಇಟ್ಟಿದ್ದೆಡೆ ಕೈ ಮಾಡಿದಳು. ಪಲ್ಲವಿ ಕುಳಿತಿದ್ದೆಡೆಯಿಂದ ಎದ್ದಿರಲಿಲ್ಲ. ಇವನು ಯಾರೋ, ಪುಸ್ತಕ ಪ್ರೇಮಿ, ಚಿದಾನಂದನಂತೆ.. ಅಂತಂದುಕೊಂಡಾಗ ಮನೆಯ ನೆನಪಾಗಿತ್ತು. ಡ್ಯಾಡಿ ಹೇಗಿದಾರೋ.. ತಂದೆಯ ನೆನಪಾಗಿ ಮನಸ್ಸು ಕುಂದಿತ್ತು. ತಾನು ಚಿದಾನಂದನ ಮಾತನ್ನು ಕೇಳಿ, ಇಲ್ಲಿಗೆ ಬರಬಾರದಾಗಿತ್ತು ಅಂತ ಒಂದು ಸಲ ಅನ್ನಿಸಿದರೆ, ಮರುಕ್ಷಣವೇ ಶರತ್ ಹಣಕ್ಕಾಗಿ ಹಿಂಸೆ ಮಾಡದೇ ಬಿಡುತ್ತಿರಲಿಲ್ಲ. ಈಗ ಹೇಗಿದಾನೋ...ತನ್ನನ್ನು ಹುಡುಕಿಸುತ್ತಿರಬಹುದೇ..ಅಂತ ಅಂದುಕೊಂಡಾಗ, ಒಳಗೊಳಗೇ ಖುಷಿಯಾಗಿತ್ತು...ಶ್ವೇತಾಳ ಮನೆಯಲ್ಲಿ ಇರುವುದು ಸಾಧ್ಯವಿರಲಿಲ್ಲ. ಅಲ್ಲಿ ಬೇರೆ ಯಾರೂ ಆಪ್ತರಿರಲಿಲ್ಲ. ತಾನು ಮಂದಾಕಿನಿಯ ಊರಿಗೆ ಹೋಗಿರಬಹುದೆಂದು ಅವನು ಕನಸಿನಲ್ಲೂ ಊಹಿಸಿರಲಾರ. ಆದರೆ ಪೋಲಿಸ್ ಕಂಪ್ಲೆಂಟ್ ಕೊಟ್ಟು ಅವರು ಇಲ್ಲಿಗೆ ಹುಡುಕಿಕೊಂಡು ಬಂದರೇ ಎಂಬ ಹೆದರಿಕೆ ಕಾಡಿತು. ಆಗ ತನಗೆ ಈ ಭುಜಂಗ ಸಹಾಯ ಮಾಡಬಲ್ಲ. ಅವನೊಡನೆ ಸ್ನೇಹವನ್ನು ಬೆಳೆಸಬೇಕೆಂದುಕೊಂಡಳು.

"ಹೋಗೇ ವಾಣಿ, ಅಕ್ಕನ್ನ ಸುತ್ತಾಡ್ಸಿಕೊಂಡು ಬಾರೇ..."

"ನಂಗೆ ಬಿಡುವಿಲ್ಲ ಅತ್ತೆ. ಪರೀಕ್ಷೆ ಹತ್ತಿರ ಬರ್ತಿದೆ. ಓದ್ಕೋಬೇಕು. ಅಣ್ಣಂಗೆ ಹೇಳ್ತೀನಿ. ಅವನಾದ್ರೆ ತಿರುಗಾಡ್ತಾನೇ ಇರ್ತಾನೆ. ಬೈಕ್ ಇದೆ ಎಲ್ಲಿಗೆ ಬೇಕಾದ್ರೂ ಸುತ್ತಾಡಿಸ್ತಾನೆ. ವೈದೇಹಿ ಸುಮ್ಮನೇ ನಕ್ಕಳು. ವಾಣಿ ತಿಂಡಿ ತಿಂದು ಮುಗಿಸಿ ಹೊರಟು ಹೋಗಿದ್ದಳು.

* * *

ಜಗುಲಿಯ ಮೆಟ್ಟಿಲ ಬಳಿ ನಿಂತು ಆಕಳಿಸಿ ಮೈ ಮುರಿದ, ಭುಜಂಗ ಇತ್ತ ತಿರುಗಿದ. ಬಾವಿಯ ಕಟ್ಟೆಯ ಬಳಿ ನಿಂತು ತಲೆ ಕೂದಲನ್ನು ಒಣಗಿಸಿಕೊಳ್ಳುತ್ತಿದ್ದ ಪಲ್ಲವಿಯನ್ನು ಕಂಡ.... ಮನಸ್ಸು ಉಲ್ಲಾಸಗೊಂಡಿತು. ಅಲ್ಲಿಯೇ ಇದ್ದ ಚಪ್ಪಲಿಯನ್ನು ಮೆಟ್ಟಿ ಅತ್ತೆಯ ಮನೆಯ ಕಡೆಗೆ ಹೆಜ್ಜೆ ಹಾಕಿದ.

"ನಮಸ್ಕಾರ ಮೇಡಂ, ಕಾಫಿ ಆಯ್ತಾ?" ವಿಚಾರಿಸಿದ.

"ಹುಂ, ಆಯ್ತು..." ನಸುನಗುತ್ತಾ ನುಡಿದಳು.

"ವಾಣಿ ಕೊಟ್ಟ ಪುಸ್ತಕಗಳನ್ನು ಓದಿದ್ರಾ? ಬೇಕಾದ್ರೆ ಇನ್ನೂ ಇವೆ. ತಂದ್ಕೊಡ್ತೀನಿ."

"ಇಲ್ಲ, ನಾನು ಓದ್ಲಿಲ್ಲ, ಕತೆ ಪುಸ್ತಕಗಳನ್ನು ಓದುವ ಹವ್ಯಾಸ ನನಗಿಲ್ಲ."

"ಮತ್ತೆ? ಕಾಲ ಹೇಗೆ ಕಳೀತೀರಿ! ಟಿ.ವಿ. ನೋಡುಲ್ಲ. ಹೊರಗೆ ತಿರುಗಾಡುಲ್ಲ. ಓದುವ ಹವ್ಯಾಸವಿಲ್ಲ. ಬೇಜಾರಾಗುಲ್ವಾ!..." ಮೊದಲೇ ಇದು ಸಣ್ಣ ಊರು."

"ಬೇಜಾರಾಗುತ್ತೆ, ಅದಕ್ಕೆ ತಾನೇ ಬಾವಿಯ ಕಟ್ಟೆ ಬಳಿಗೆ ಬಂದು ಕುಳಿತು ಆಕಾಶಾನ ನೋಡ್ತೀನಿ. ಮೋಡಗಳನ್ನು ನೋಡ್ತೀನಿ. ಸೂರ್ಯ ಚಂದ್ರನ್ನ ನೋಡ್ತೀನಿ."

ಭುಜಂಗ ಗೊಳ್ಳನೆ ನಕ್ಕ. "ಮೋಡ ಇದ್ದರೆ ಸೂರ್ಯ ಚಂದ್ರರು ಕಾಣುಲ್ಲ, ಅಲ್ಲದೇ ಸೂರ್ಯ ಚಂದ್ರರೂ ಒಟ್ಟಿಗೇ ಕಾಣುವುದಿಲ್ಲ. ಅಷ್ಟು ವಿಜ್ಞಾನ ನಂಗೊತ್ತು." ಅವಳು ನಸು ಕೋಪದಿಂದ ಅವನ ಕಡೆ ನೋಡಿದಳು.

"ರಾತ್ರಿಯ ಹೊತ್ತು ಆಕಾಶ ನೀಲಿಯಾಗಿದ್ರೆ ನಕ್ಷತ್ರಗಳು ಕಾಣುತ್ವೆ.. ಇಲ್ದಿದ್ರೆ ಏನೂ ಕಾಣುಲ್ಲ. ಕತ್ತಲೆ ಕವಿದಿರುತ್ತೆ ಅದೂ ಗೊತ್ತಿರಬಹುದು ಅಲ್ವಾ?"

"ಯಾಕ್ರೀ! ನನ್ಮೇಲೆ ರೇಗ್ತೀರಾ! ತಮಾಷೆ ಮಾಡ್ದೆ.. ನನ್ನ ಮಾತ್ನಿಂದ ನಿಮಗೆ ಸಿಟ್ಟು ಬರೋದಾದ್ರೆ ನಾನು ಮಾತನ್ನಾಡುಲ್ಲ.. ನಿಮಗೆ ಒಂಟಿತನವೇ ಇಷ್ಟ ಅಂತ ಕಾಣುತ್ತೆ."

"ಹಾಗೇನಿಲ್ಲ, ನಿಮ್ಮ ಅತ್ತೆ ಹತ್ರ ಏನು ಮಾತಾಡ್ಲೀ?.. ನಿಮ್ಮ ತಂಗಿ ತುಂಬಾ ಚಿಕ್ಕವಳು.."

"ನಾನಿದೀನಲ್ಲ.." ತಟ್ಟನೆ ನುಡಿದಿದ್ದ, ಅವಳು ದಿಟ್ಟಿಸಿದಳು.

"ಅಂದ್ರೇ...ನೀವು ಮನೇಲೇ ಇರ್ತೀರಾ! ಕೆಲಸಕ್ಕೆ ಹೋಗುಲ್ವಾ!.."

"ಸೋಮಾರಿಯಾಗಿ ಕಾಲ ಕಳೀತೀನಿ ಅಂತ ಅಂದ್ಕೋಬೇಡ್ರಿ...ಬೇಕಾದಷ್ಟು ಕೆಲಸಗಳಿವೆ. ಏನೋ ಒಬ್ಬರೇ ನಿಂತಿದ್ರಲ್ಲ ಅಂತ ಬಂದೆ. ಹೋಗ್ತೀನಿ..."

"ನೋಡಿದ್ರಾ.... ಈಗ ಅಪ್ಸೆಟ್ ಆದೋರು ನೀವು...ನಿಮ್ಮನ್ನ ಸೋಮಾರಿ ಅಂತ ಅಂದ್ನಾ?"

"ಪರವಾಗಿಲ್ಲ ಬಿಡಿ. ಅತ್ತೆ ಏನ್ಮಾಡ್ತಿದಾರೆ?.."

"ದಿನಕ್ಕೆ ಎಷ್ಟು ಬಾರಿ ಅತ್ತೆ ಮನೆಗೆ ಬರ್ತೀರಿ?"

"ಲೆಖ್ಖ ಇಟ್ಟಿಲ್ಲ, ಲೆಖ್ಖ ಹಾಕಿ ಹೇಳ್ತೀನಿ. ಈಗ ನೀವು ಬಂದಿದೀರಿ.. ಅತ್ತೆಗೆ ಬೇಸರ ಕಡಿಮೆ ಆಗಿರಬಹುದು...ಈಗ ಹೇಮಾನೂ ಇಲ್ಲ ನೋಡಿ.." ಅವಳು ಮಾತಾಡಲಿಲ್ಲ. ನೀವು ದೊಡ್ಡ ಊರನ್ನು ಬಿಟ್ಟು ಈ ಸಣ್ಣ ಊರಿಗೆ ಯಾಕೆ ಬಂದಿದೀರಿ ಅಂತ ನಾನು ಕೇಳೋದಿಲ್ಲ. ನೀವು ಮಂದಾಕಿನಿ ಅತ್ತೆಯ ಮಗಳು ಅಂತ ಅತ್ತೆ ಹೇಳಿದ್ರು... ನೀವು ಈ ಮುಂಚೆ ಎಂದೂ ಇಲ್ಲಿಗೆ ಬಂದಂತಿಲ್ಲ.. "ಓದ್ತಾ ಇದೀರಾ?"

"ಹೌದು, ಬಂದಿರಲಿಲ್ಲ, ಕಾರಣವಿಲ್ಲದೇ ನಾನು ಇಲ್ಲಿಗೆ ಯಾಕೆ ಬರಲಿ?"

"ಹೇಮಾ ಕೂಡಾ ನಿಮ್ಮ ಬಗ್ಗೆ ಹೇಳಿರಲಿಲ್ಲ."

"ಹೌದೂರೀ, ನಾನೊಬ್ಬ ಇದೀನಿ ಅಂತ ಇವರ್‍ಯಾರಿಗೂ ಗೊತ್ತಿರಲೇ ಇಲ್ಲ.. ನಾನು ಅಪರಿಚಿತೆ. ಈಗ ಅಜ್ಞಾತವಾಗಿರಲು ಇಲ್ಲಿಗೆ ಬಂದಿದೀನಿ...ಗೊತ್ತಾಯ್ತಾ?"

"ಹೂಂ, ಗೊತ್ತಾಯ್ತು.." ಅವನು ಕೈ ಹೊಸಕಿಕೊಂಡು ಹೇಳಿದಾಗ ಅವಳಿಗೆ ನಗು ಬಂತು. ಮುಕ್ತವಾಗಿ ನಕ್ಕಳು. ಅವನೂ ತಕ್ಷಣವೇ ನಕ್ಕ.

"ನೀವು ನಗು ನಗುತ್ತಾ ಇದ್ದರೆ, ಒಂಥರಾ ಚೆನ್ನಾಗಿ ಕಾಣ್ತೀರಿ...ನಿರುತ್ಸಾಹದ ಮುಖ ನಿಮಗೆ ಒಂಚೂರೂ ಒಪ್ಪಲ್ಲ.." ಅವಳು ಮತ್ತೆ ನಕ್ಕಳು. "ಅತ್ತೇ ಎದುರಿಗೆ ಕೂತಿದ್ರೆ, ಮಾವನ ನರಳಾಟ ಕೇಳ್ತಿದ್ರೆ ಯಾವ ಉತ್ಸಾಹವೂ ಬರುಲ್ಲ. ಬರೀ ಆಕಾಶವನ್ನೇ ನೋಡ್ಕೊಂಡು ಕಾಲವನ್ನು ಕಳೀಬೇಕು ಅಂತೇನಿಲ್ಲ. ಇಲ್ಲಿ ನಿಮ್ಮ ಪರಿಚಯದವರು ಯಾರೂ ಇಲ್ಲ...ನಿಮ್ಮ ಪಾಡಿಗೆ ನೀವು ರಸ್ತೆಗಳಲ್ಲಿ ತಿರುಗಾಡಿ...ನಮ್ಮ ಮನೆಗೆ ಬನ್ನಿ. ಅಪ್ಪಯ್ಯ, ಅಮ್ಮಾ, ಅಜ್ಜಿ ಎಲ್ಲರೂ ಇದಾರೆ. ಟಿ.ವಿ. ಇದೆ ಕತೆ ಪುಸ್ತಕಗಳೂ, ವಾರಪತ್ರಿಕೆಗಳೂ ಇವೆ..."

"ಪರವಾಗಿಲ್ಲ ಬಿಡಿ. ಅಜ್ಞಾತವಾಗಿರಲು ಬಂದೋಳು ನಾನು. ಕೆಲವು ದಿನಗಳು ಇದ್ದು ಹೋಗ್ತೀನಿ. ಹೇಗಿದ್ರೇನು?"

"ಅಜ್ಞಾತದಲ್ಲಿ ಇರ್ಬೇಕು ಅಂತ ಅಂದ ಮಾತ್ರಕ್ಕೇ ವೈರಾಗ್ಯ ಯಾಕೆ? ನಿಮ್ಮ ಬೇಸರವನ್ನು ಕಳೆಯಲು ನಾನಿದೀನಿ. ಸುತ್ತಾಡಿಸ್ತೀನಿ. ಸುತ್ತಾಡಲು ನಮ್ಮ ತೋಟ ಇದೆ. ತೋಟದಲ್ಲಿ ಬಗೆ ಬಗೆಯ ಹಣ್ಣುಗ್ಳ ಮರಗಳಿವೆ. ಇಲ್ಲಿಗೆ ಸ್ವಲ್ಪ ದೂರದಲ್ಲಿ ಒಂದು ತೊರೆ ಹರಿಯುತ್ತೆ. ಒಂದು ಕಡೆ ಎತ್ತರದ ಜಾಗದಿಂದ ಸಣ್ಣ ಪ್ರಮಾಣದಲ್ಲಿ ಜಲಪಾತದ ರೀತಿ ನೀರು ಧುಮುಕುತ್ತೆ. ನೋಡೋಕೆ ಚೆನ್ನಾಗಿದೆ.. ಅತ್ತೆ ಹೇಳಲಿಲ್ವಾ!"

"ಹುಂ, ಹೇಳಿದ್ರು, ಆದರೆ ಯಾಕೋ ಆಸಕ್ತಿನೇ ಇಲ್ಲ."

"ನಿರಾಸಕ್ತಿಯಿಂದಲೇ, ನನಗೋಸ್ಕರ ಒಂದು ಸಲ ಬಂದು ನೋಡಿ. ಆಮೇಲೆ ಮತ್ತೆ ಮತ್ತೆ ನೋಡ್ಬೇಕು ಅಂತ ನಿಮಗೆ ಖಂಡಿತಾ ಅನ್ನಿಸುತ್ತೆ."

"ಒಂದ್ಮಾತು ಕೇಳ್ಲಾ?...ನಿಮಗ್ಯಾಕೆ ನನ್ಮೇಲೆ ಇಷ್ಟು ಆಸಕ್ತಿ?" ಅವನು ಒಂದು ಗಳಿಗೆ ತಡೆದ.

"ನೀವು ಅತ್ತೆಯ ಮನೆಗೆ ಬಂದಿರುವ ಅತಿಥಿ...ನಿಮಗೆ ನಮ್ಮ ಈ ಚಿಕ್ಕ ಊರನ್ನು ತೋರಿಸುವುದು ನನ್ನ ಕರ್ತವ್ಯ..ಅತ್ತೆಯ ಮಾತನ್ನು ಪಾಲಿಸಲೇ ಬೇಕು."

"ಬರೀ ಇದಿಷ್ಟೇನಾ?.."

"ಹೇಮಾ ಇಲ್ಲಿದ್ದಾಗ, ನಾನೂ ಅವಳೂ ಬೇಕಾದಷ್ಟು ಸುತ್ತಾಡಿದೀವಿ. ಈಗ ಅವಳು ಇಲ್ಲ, ನಾನು ಒಂಟಿ...ನೀವೂ ಒಂಟಿ ಅಂತ ಅನ್ನಿಸ್ತು....ನಿಮಗೆ ನನ್ನ ಜೊತೆ ಬರೋಕೆ ಇಷ್ಟವಿಲ್ಲದಿದ್ರೆ ಬೇಡ"

"ಹಾಗೇನಿಲ್ಲ, ನಿಮ್ಮ ಅತ್ತೆ ಆಗಾಗ್ಗೆ ಹೇಳ್ತಾನೇ ಇದಾರೆ.... ಆದರೆ ಎಲ್ಲಿ ಕಳೆದು ಹೋಗ್ತೀನೋ ಅಂತ ನಂಗೆ ಭಯ..."

"ಭಯ ಯಾಕೆ ನಾನಿಲ್ವಾ!.. ಅಲ್ಲದೇ ಈ ಊರು ಬೆಂಗಳೂರಿನಂತೆ ದೊಡ್ಡದಲ್ಲ, ಯಾರನ್ನು ಕೇಳಿದ್ರೂ ನಮ್ಮ ಮನೇನ ತೋರಿಸ್ತಾರೆ...ಅಷ್ಟು ಭಯ ಇದ್ದರೆ ಒಬ್ಬರೇ ಯಾಕೆ ಹೋಗ್ಬೇಕು..? ನಿಮಗೆ ಎಲ್ಲಿಗಾದ್ರೂ ಹೋಗ್ಬೇಕು ಅಂತ ಅನ್ನಿಸಿದ್ರೆ ನಂಗೆ ಹೇಳಿ...ನಾನು ಕರ್ಕೊಂಡು ಹೋಗ್ತೀನಿ...ಸುತ್ತಾಡಿಸ್ತೀನಿ..." ಕೌತುಕದಿಂದ ಅವನನ್ನೇ ದಿಟ್ಟಿಸಿದಳು.

"ಅಣ್ಣಾ, ಅಪ್ಪಯ್ಯ ಕರೀತಿದಾರೆ.." ವಾಣಿ ಬಂದು ಹೇಳಿದಳು.

"ನಾನು ಆಮೇಲೆ ಸಿಗ್ತೀನಿ" ಎಂದು ಹೇಳಿ ಅವನು ತನ್ನ ಮನೆಗೆ ಹೋದ.

* * *

"ಅತ್ತೇ ಏನು ತಿಂಡಿ ಮಾಡಿದೀರಿ?" ಬಾಗಿಲು ದಾಟಿ ಒಳಕ್ಕೆ ಬರುತ್ತಿದ್ದಂತೆಯೇ ಭುಜಂಗ ಕೇಳಿದ...ಪಲ್ಲವಿ ರೂಮಿನ ಬಾಗಿಲಲ್ಲಿ ಬಂದು ನಿಂತಳು.

"ಚಪಾತಿ, ಪಲ್ಯ ಮಾಡಿದೀನಿ. ಅತ್ತಿಗೆ ಏನು ಮಾಡಿದ್ರು?"

"ಅಮ್ಮ ಉಪ್ಪಿಟ್ಟು ಮಾಡಿದ್ಲು...ಒಂದಿಷ್ಟು ಚಪಾತೀನ ಪಾರ್ಸಲ್ ಕಟ್ಕೊಡಿ ಅತ್ತೆ...ನಾನು ತೊರೆಯ ಬಳಿಗೆ ಹೋಗ್ತಾ ಇದೀನಿ..."

"ಒಬ್ಬನೇ ಹೋಗ್ತಿದೀಯೇನೋ...ಅಥವಾ ಜೊತೆಗೆ ಯಾರಿದಾರೆ?"

"ಯಾರಾದ್ರೂ ಬಂದ್ರೆ ಕರ್ಕೊಂಡು ಹೋಗ್ತೀನಿ. ಮೀನುಗಳಿಗೆ ತಿಂಡಿ ತಿನ್ನಿಸಿ ತುಂಬಾ ದಿನಗಳಾದ್ವು...ನೀವು ಬರ್ತೀರಾ ಅತ್ತೆ...? ಕರ್ಕೊಂಡು ಹೋಗ್ತೀನಿ" ನಕ್ಕ.

"ಹುಚ್ಚಾ, ತಮಾಷೆ ಮಾಡ್ಬೇಡ...ಹೇಮಳ ನೆನಪು ಬರ್ತಿದೆಯಾ ನಿಂಗೆ?"

"ನೆನಪೇನೋ ದಿನಾ ಬರುತ್ತೆ, ಆದರೆ ಅವಳು ನನ್ನ ಕನಸ್ನಲ್ಲೂ ಬರುಲ್ಲ. ಅಷ್ಟು ಬಿಸಿ ಅವಳು...ನೀವು ಬರ್ತೀರಾ ಪಲ್ಲವಿ?".. ಆಸೆ ತುಂಬಿಕೊಂಡು ಕೇಳಿದ.

"ಹೋಗ್ಬಾ ಪಲ್ಲವಿ. ತೊರೆಯಂತೂ ತುಂಬಾ ಚೆನ್ನಾಗಿದೆ. ನಾವೆಲ್ಲಾ ಚಿಕ್ಕ ವಯಸ್ನಲ್ಲಿ ತುಂಬಾ ಆಟಾಡಿದ ಜಾಗ ಅದು..." ಪಲ್ಲವಿ ತಲೆಯಾಡಿಸಿ, ಭುಜಂಗನ ಕಡೆ ನೋಡಿ ಮುಗುಳ್ನಕ್ಕಳು...ಅವನ ಮುಖದ ಮೇಲೆ ಮಂದಹಾಸ ಮಿನುಗಿತು. ವೈದೇಹಿ ಸರಸರನೆ, ಚಪಾತಿಗಳನ್ನು, ಪಲ್ಯವನ್ನು ಹಾಗೇ ಹಿಂದಿನ ದಿನ ಮಾಡಿದ್ದ ಕೊಬ್ಬರಿ ಮಿಠಾಯಿಯ ತುಂಡುಗಳನ್ನು ಪ್ಲಾಸ್ಟಿಕ್ ಡಬ್ಬಿಗಳಲ್ಲಿ ಹಾಕಿಕೊಟ್ಟಳು. ಒಂದೆರಡು ಲೋಟಗಳನ್ನು ಸ್ಟೀಲ್ ತಟ್ಟೆಗಳನ್ನು ಒಂದು ಚೀಲಕ್ಕೆ ಹಾಕಿಕೊಂಡ. ಕುಡಿಯಲು, ನೀರಿನ ಬಾಟಲಿಗಳನ್ನು ತುಂಬಿಸಿಕೊಂಡು ಎಲ್ಲವನ್ನು ಕೈಗಳಲ್ಲಿ ಎತ್ತಿಕೊಂಡ.

"ಹಾಗಾದ್ರೆ ನಾನು ಹೋಗಿ ಬರ್ಲಾ ಆಂಟಿ?" ಪಲ್ಲವಿ ಕೇಳಿದಳು.

"ಕಣೆ ಕೇಳು...ಅವತ್ನಿಂದ ಹೇಳ್ತಿದ್ದೆ.. ಇವನೂ ಜೊತೆಗಿದಾನೆ. ಹೋಗ್ಬಾ." ಇಬ್ಬರೂ

ಮುಂಬಾಗಿಲನ್ನು ದಾಟಿದರು. ಅವನು ಬೈಕ್ ನಿಲ್ಲಿಸಿದ್ದ ಕಡೆಗೆ ಬಂದ.

"ಬೈಕ್‌ನಲ್ಲಿ ಹೋಗ್ಬೇಕಾ?.."

"ಯಾಕೆ? ಕೂತ್ಕೊಳ್ಳೋಕೆ ಭಯ ಆಗುತ್ತಾ?" ಭಯ ಆದ್ರೆ ನನ್ನನ್ನ ಹಿಡ್ಕೊಳ್ಳಿ."

"ಯಾರಾದ್ರೂ ನೋಡಿದ್ರೆ...?" ಮುಜುಗರವಿತ್ತು ಮುಖದಲ್ಲಿ.

"ನನಗೆ ಯಾರ ಭಯವಿಲ್ಲ, ನಿಮಗೆ ಯಾರ ಪರಿಚಯವಿಲ್ಲ. ಸುಮ್ಮನೇ ಬನ್ನಿ." ಎನ್ನುತ್ತಾ ಬೈಕ್‌ನ್ನು ಸ್ಟಾರ್ಟ್ ಮಾಡಿದ. ಅವಳು ಹಿಂದಿನ ಸೀಟನ್ನೇರಿದಳು. ಬೈಕ್ ಊರಿನ ಸಣ್ಣ ರಸ್ತೆಯಲ್ಲಿ ಸಾಗಿತು. ನಂತರ ತೊರೆಯ ಹತ್ತಿರದ ಕಾಲು ದಾರಿಯ ಬಳಿ ಹುಲ್ಲಿನ ಮೇಲೆ ಬೈಕ್‌ನ್ನು ನಿಲ್ಲಿಸಿದ. ಇಬ್ಬರೂ ಇಳಿದರು.

ನೀರಿನ ಝುಳು ಝುಳು ಸದ್ದು ಕೇಳಿಸುತ್ತಿತ್ತು. ನಿಂತಲ್ಲಿಂದಲೇ ಸುತ್ತಲೂ ಒಮ್ಮೆ ನೋಡಿದಳು. ಸುತ್ತ ಮುತ್ತಲಿನ ದೃಶ್ಯವೆಲ್ಲಾ ಮನೋಹರವಾಗಿದೆಯೆನಿಸಿತ್ತು.. ಮುಖದಲ್ಲಿ ಮಂದಹಾಸ ಮಿನುಗಿತು. ಬೈಕ್‌ನ್ನು ಸ್ಟ್ಯಾಂಡ್ ಹಾಕಿ ನಿಲ್ಲಿಸಿ, ಕೈಗಳಲ್ಲಿ ಚೀಲಗಳನ್ನು ಹಿಡಿದು ಮುಗುಳ್ನಕ್ಕ.

"ಹೇಗಿದೆ ನಮ್ಮೂರಿನ ಸೀನು!... ಇಂಥಾ ದೃಶ್ಯ ನಿಮ್ಮೂರ್‍ನಲ್ಲಿ ಇದೆಯಾ!" ಕೇಳಿದ.

"ಆಂ!..." ಬೆಚ್ಚಿದವಳಂತೆ ಅವನ ಮಾತಿನ ಕಡೆ ಗಮನವನ್ನು ಕೊಟ್ಟಳು.

"ಏನು ಯೋಚಿಸ್ತಿದೀರಿ!... ಅಥವಾ ಭಯಗೊಂಡಿದೀರೋ...?"

"ಏನೂ ಇಲ್ಲ... ಎಲ್ಲಾ ಸೊಗಸಾಗಿದೆ. ಆದರೆ ಜನ ಸಂಚಾರವೇ ಇಲ್ಲ..."

"ನಮ್ಮೂರಿನವರು ಯಾರೂ ದಿನ ದಿನ ಇಲ್ಲಿಗೆ ಬರುಲ್ಲ. ಹೊರಗಿನವರು, ಈ ತೊರೆಯನ್ನು ನೋಡ್ಬೇಕು ಅಂತ ಬರುಲ್ಲ. ಜನ ಸಂಚಾರ ಇದ್ದರೆ ಗದ್ದಲ ಜಾಸ್ತಿ.. ಹರಿಯುವ ನೀರಿನ ಸದ್ದು, ಜಲಪಾತದ ಭೋರ್ಗರೆತ ಒಂದೂ ಕೇಳಿಸುವುದಿಲ್ಲ.. ಬನ್ನಿ.. ಅಲ್ಲಿ ಬಂಡೆಗಳ ಮೇಲೆ ಕೂತ್ಕೋಳ್ಳೋಣ.." ಅವಳು ಅನುಮಾನಿಸುತ್ತಾ ಅಲ್ಲೇ ನಿಂತಳು.

"ಯಾಕ್ರೀ ಭಯಾನ?...ನೀವು ನೀರಿಗೆ ಬಿದ್ರೆ ನಾನು ಎತ್ತುತ್ತೀನಿ ಬನ್ನಿ..." ಎನ್ನುತ್ತಾ ಮುಂದೆ ಮುಂದೆ ನಡೆದ. ನದಿಯ ದಡದಿಂದ, ಬಂಡೆಗಳ ಮೇಲೆ ಕಾಲನ್ನಿಟ್ಟು, ನದಿಯ ನೀರು ಹರಿಯುತ್ತಿದ್ದ ಮಧ್ಯಭಾಗಕ್ಕೆ ನೆಗೆಯುತ್ತಾ ನಡೆದ. ಅವಳು ದಡದಲ್ಲೇ ನಿಂತಿದ್ದಳು. ಅವನು ಕೈ ಚೀಲಗಳನ್ನು ಒಂದು ಮಟ್ಟಸವಾದ ಬಂಡೆಯ ಮೇಲಿಟ್ಟು ಮತ್ತೆ ಅವಳ ಬಳಿಗೆ ಬಂದ.

"ಹೀಗೆ ನಿಂತಿದ್ರೆ, ಹೀಗೇ ಇಲ್ಲೇ ನಿಂತಿರ್ತೀರಿ...ನಡೀರಿ..ನಾನು ಬಂಡೆಗಳನ್ನು ದಾಟಿಸ್ತೀನಿ.." ಕೈ ಹಿಡಿದ.

"ನಂಗೆ ಭಯ ಆಗುತ್ತೆ..."

"ಹಾಗಾದ್ರೆ ಎತ್ಕೊಂಡು ಹೋಗ್ಲಾ?" ಅವನು ತುಂಟತನದಿಂದ ಕೇಳಿದಾಗ ಅವಳು ನಾಚಿದಳು. "ನಾನಿರುವಾಗ ಎಂಥಾ ಭಯ?"

"ಬೇಡ...ಬೇಡ..." ಎನ್ನುತ್ತಾ ಅವನ ಕೈಯನ್ನು ಬಲವಾಗಿ ಹಿಡಿದಳು. ನನ್ನ ಕೈ ಬಿಡ್ಬೇಡಿ"...ಎಂದಳು.

"ಒಂದ್ಸಾರಿ ಕೈ ಹಿಡಿದ್ರೆ ಖಂಡಿತಾ ಬಿಡುಲ್ಲ...ಧೈರ್ಯವಾಗಿ ಬನ್ನಿ" ಅವನು ನಿಧಾನವಾಗಿ ಬಂಡೆಗಳ ಮೇಲೆ ಹೆಜ್ಜೆಗಳನ್ನಿಡುವಂತೆ ಹೇಳುತ್ತಾ, ಅವಳನ್ನು ಮಧ್ಯಭಾಗಕ್ಕೆ ಕರೆ ತಂದ. ಅವಳು ಬೆವತು ಹೋಗಿದ್ದಳು. ಅವನ ಕೈಯನ್ನು ಬಿಡಿಸಿಕೊಂಡು, ದುಪ್ಪಟ್ಟಾದ ತುದಿಯಿಂದ ಹಣೆಯನ್ನು ಒರೆಸಿಕೊಂಡಳು. ಅವನು ನಕ್ಕ.. "ಅಬ್ಬಾ..ನೀವು ಸಿಟಿಯವರು ಎಷ್ಟು ಸೂಕ್ಷ್ಮ! ಇಲ್ಲಿ ಹುಡುಗಿಯರೆಲ್ಲಾ ಈ ಬಂಡೆಗಳ ಮೇಲೆ ಕುಪ್ಪಳಿಸುತ್ತಾರೆ. ಈ ತೊರೆಯಲ್ಲಿ ಈಜ್ತಾರೆ. ನಿಮಗೆ ಈಜುಕ್ಕೆ ಬರುತ್ತಾ!"

"ಇಲ್ಲ, ನಾನು ಕಲಿಯಲಿಲ್ಲ."

"ನಾನು ಕಲಿಸಿಕೊಡ್ಲಾ!" ಜೋರಾಗಿ ನಗಬೇಕೆನ್ನಿಸಿತ್ತು. ತಡೆದುಕೊಂಡಳು.

"ನಂಗೆ ಏನು ಬೇಡ."

"ಹೋಗ್ಲಿ ಬಿಡಿ, ಬೇಡವಾದ್ರೆ ಬೇಡ, ಆದರೆ ಯಾವಾಗ್ಲೂ ಏನೋ ಒಂಥರಾ ಭಯದಲ್ಲೇ ಇರ್ತೀರಲ್ಲ ಯಾಕೆ ಅಂತ ಕೇಳ್ಬಹುದಾ?"

"ತಿಳ್ಕೊಂಡು ಏನ್ಮಾಡ್ತೀರಿ?"

"ಏನ್ಮಡ್ತೀನೋ ಗೊತ್ತಿಲ್ಲ. ಆದರೆ ನನ್ನಿಂದ ಏನಾದ್ರೂ ಸಹಾಯ ಬೇಕಾಗಿದ್ರೆ ಖಂಡಿತಾ ಮಾಡ್ತೀನಿ..." ವಿಶ್ವಾಸದ ನುಡಿಗೆ ತಲೆ ದೂಗಿದಳು.

"ಥ್ಯಾಂಕ್ಸ್...ಬೇಕಾದಾಗ ಖಂಡಿತಾ ಕೇಳ್ತೀನಿ.. ಜಲಪಾತ ಅಂತ ಅಂದ್ರಲ್ಲ ಅದನ್ನು ನೋಡೋಣ್ವಾ!" ಅವಳೂ ಸ್ನೇಹವನ್ನು ತುಂಬಿಕೊಂಡು ಹೇಳಿದಳು.

"ಮೊದಲು ತಿಂಡಿಯನ್ನು ತಿಂದು ಬಿಡೋಣ.. ಈ ತಿಂಡಿಗಳ ಡಬ್ಬಿಗಳ ಮುಚ್ಚಳಗಳನ್ನು ತೆಗೀತಿದ್ದ ಹಾಗೇ, ಮೀನುಗಳು ಗುಂಪು ಗುಂಪಾಗಿ ಬರುತ್ತವೆ ನೋಡ್ತಿರಿ." ಎನ್ನುತ್ತಾ ಡಬ್ಬಿಯ ಮುಚ್ಚಳವನ್ನು ತೆಗೆದು ಚಪಾತಿಯ ಚೂರುಗಳನ್ನು ನೀರಿಗೆ ಹಾಕಿದ. ಎಲ್ಲಿದ್ದವೋ ಹಿಂಡು ಹಿಂಡು ಮೀನುಗಳು ತಾ ಮುಂದು, ನಾ ಮುಂದು ಎಂದು ಕಿತ್ತಾಡಿಕೊಂಡು ಬಂದವು. ಅವನು ಕೊಬ್ಬರಿ ಮಿಠಾಯಿಗಳ ಚೂರುಗಳನ್ನು ನೀರಿಗೆ ಹಾಕಿದ."

"ನಿಮ್ಮತ್ತೆ, ವೇಸ್ಟ್ ಮಾಡ್ದೆ ಅಂತ ಬೈಯುಲ್ವಾ!"

"ಇಲ್ಲ, ಇವುಗಳಿಗೂ ಸೇರಿಸಿ ಜಾಸ್ತೀನೇ ಕಳಿಸಿರ್ತಾರೆ...ಅದ್ಸರಿ...ನಿಮ್ಮತ್ತೆ ನಿಮ್ಮತ್ತೆ ಅಂತ ಅಂತೀರಲ್ಲ...ನನ್ನ ದೊಡ್ಡಮ್ಮ ಅಂತ ಯಾಕೆ ಹೇಳುಲ್ಲ?" ಅವಳು ಗಂಭೀರಳಾದಳು. ಮುಖವನ್ನು ಅತ್ತ ತಿರುಗಿಸಿದಳು. ಅವನು ಗಮನಿಸಿದವನಂತೆ ಸುಮ್ಮನಾದ. ತಟ್ಟೆಗಳಿಗೆ ತಿಂಡಿಯನ್ನು ಹಾಕಿ ಅವಳ ಕೈಗೆ ಕೊಟ್ಟ. ತಾನೂ ತೆಗೆದುಕೊಂಡ. ಇಬ್ಬರೂ ತಿಂದರು.

"ಕಾಫಿ ಇದ್ದಿದ್ರೆ ಚೆನ್ನಾಗಿತ್ತು ಅಂತ ಅನ್ನಿಸ್ತಿದೆ..."

"ಇಲ್ಲಿ ಹತ್ತಿರ ಎಲ್ಲೂ ಹೋಟೆಲ್ಲು ಇಲ್ವಾ!.."

"ಇವೆ. ಆದರೆ ಎಂದೂ ಹೋಗಿಲ್ಲ. ಆ ಪ್ರಮೇಯವೇ ಬಂದಿಲ್ಲ. ಬೇಕಾದ್ರೆ ಹೋಗೋಣ."

"ಸುಮ್ಮನೇ ಕೇಳ್ದೆ.. ಹೋಗ್ಬೇಕೂಂತೇನಿಲ್ಲ.."

"ನಾನೊಂದು ಮಾತು ಕೇಳ್ಲಾ?"...ನೀವು ಏನಂತೀರೋ..?"

"ಕೇಳಿ.. ಪರವಾಗಿಲ್ಲ, ಇಲ್ಲಿ ಅಪಾಯದ ಜಾಗಕ್ಕೆ ಕರೆತಂದಿದೀರಿ. ಇಲ್ಲೇ ಬಿಟ್ಟು ಹೋಗುಲ್ಲ ತಾನೇ?"

"ತಮಾಷೆಗೂ ಅಂಥಾ ಕೆಲಸವನ್ನು ನಾನು ಮಾಡುಲ್ಲ. ನಾನು ಅಷ್ಟು ಕೆಟ್ಟವನಲ್ಲ."

"ಛೇ..ನಾನೆಲ್ಲಿ ಹಾಗಂದೆ! ಅದೇನು ಕೇಳ್ತೀರೋ ಕೇಳಿ.."

"ನೀವು ಸುಳ್ಳು ಹೇಳಿದೀರಿ.. ಅದು ನನಗೆ ಇಷ್ಟವಾಗಲಿಲ್ಲ."

"ಸುಳ್ಳು ಹೇಳಿದೀನಾ? ನಾನು ಹೆಚ್ಚು ಮಾತನ್ನೇ ಆಡಿಲ್ಲ."

"ನಾನು ನಿಮ್ಮನ್ನು ಸ್ನೇಹದಿಂದ ಮಾತನಾಡಿಸಿದೀನಿ.. ನನ್ನ ಹತ್ತಿರ ನಿಜವನ್ನೇ ಹೇಳಬಹುದಾಗಿತ್ತು. ನಿಮ್ಮ ಹೆಸರು ಪಲ್ಲವಿ ಅಲ್ಲ. ನಿಜವಾದ ಹೆಸರನ್ನು ಯಾಕೆ ಹೇಳಲಿಲ್ಲ!.."

"ನಾನು ಇಲ್ಲಿ ಅಜ್ಞಾತವಾಸದಲ್ಲಿದೀನಿ ಅಲ್ವಾ! ಪಾಂಡವರು ಕೂಡಾ ಅಜ್ಞಾತವಾಸದಲ್ಲಿದ್ದಾಗ ತಮ್ಮ ತಮ್ಮ ಹೆಸರನ್ನು ಬದಲಾಯಿಸಿಕೊಂಡಿದ್ರಂತೆ.. ಆ ಕತೆ ಗೊತ್ತು ಅಲ್ವಾ! ಅದ್ಸರಿ ನಾನು ಸುಳ್ಳು ಹೇಳ್ದೆ ಅಂತ ಹೇಗೆ ಗೊತ್ತಾಯ್ತು? ನಿಮ್ಮ ಅತ್ತೇನೇ ಪಲ್ಲವಿ ಅಂತ ನಿಮಗೆ ಹೇಳಿದ್ದು ಅಲ್ವಾ! ಹೆಸರು ಯಾವುದಾದರೇನು? ವ್ಯಕ್ತಿ ಮುಖ್ಯ ಅಲ್ವಾ? ಸ್ನೇಹ ಮುಖ್ಯ ಅಲ್ವಾ!

"ಪರವಾಗಿಲ್ಲ ನೀವೂ ಚೆನ್ನಾಗಿ ಮಾತಾಡ್ತೀರಿ.. ಅತ್ತೇ 'ಪಲ್ಲವಿ' ಅಂತ ಕರೆದಾಗ, ಸುಮ್ಮನೇ ಇರ್ತೀರಿ. ಕೆಲವೊಮ್ಮೆ ಬೆಚ್ಚಿ ಬಿದ್ದು 'ಆಂ' ಅಂತೀರಿ...ನಿಮ್ಮ ಹೆಸರು ಪಲ್ಲವಿ ಅಲ್ಲ.. ನಿಜವಾದ ಹೆಸರನ್ನು ಹೇಳ್ಬಹುದು ಅಲ್ವಾ?"

"ನೀವು ಜಾಣರು ತಾನೇ...ನನ್ನನ್ನೇ ಗಮನಿಸುತ್ತೀರಿ ಅಂತಾಯ್ತು.. ನಿಜವಾದ ಹೆಸರನ್ನು ನೀವೇ ಕಂಡು ಹಿಡಿಯಿರಿ..."

"ಖಂಡಿತಾ ಕಂಡು ಹಿಡೀತೀನಿ..ಬಹುಮಾನ ಏನು ಕೊಡ್ತೀರಿ..?"

"ನೀವು ಕೇಳಿದ್ದು.." ಎಂದು ಬಿಟ್ಟು ನಾಲಿಗೆಯನ್ನು ಕಚ್ಚಿಕೊಂಡಳು.

"ಹೆದರ್ಬೇಡಿ, ನಾನು ನೀಚನಲ್ಲ..." ಎನ್ನುತ್ತಾ ತಿಂದ ಎಂಜಲು ತಟ್ಟೆಗಳನ್ನು ನೀರಿನಲ್ಲಿ ತೊಳೆಯಲು ಮುಂದಾದ.

"ಇಲ್ಲಿ ಕೊಡಿ ನಾನೇ ತೊಳೀತೀನಿ" ಎಂದು ಕೈ ಚಾಚಿದಳು.

"ನಿಮಗೆ ಮನೆ ಕೆಲಸ ಬರುತ್ತಾ ಅಂತ ನಂಗೆ ಅನುಮಾನ.." ಗೇಲಿ ಮಾಡಿದ.

"ಇಲ್ಲ, ಖಂಡಿತಾ ಬರುಲ್ಲ, ನಾನು ಕಲಿತಿಲ್ಲ."

“ಅತ್ತೆಗೆ ಸಹಾಯ ಮಾಡಿ.. ಕೆಲಸ ತಾನಾಗಿಯೇ ಬರುತ್ತೆ.. ನಿಮಗೆ ಮನಸ್ಸಿದ್ದರೆ...” ಇದ್ದಕ್ಕಿದ್ದಂತೆ ಅವಳು ಕಿರುಚಿ ಅವನ ತೋಳನ್ನು ಹಿಡಿದಾಗ, ಅವನು ಆಯ ತಪ್ಪಿದ. ಅವಳು ಮುಗ್ಗರಿಸಿದಳು. “ಅಲ್ನೋಡಿ...ಹಾವು..” ಗಂಟಲು ಕಟ್ಟಿದವಳಂತೆ ಪ್ರಯಾಸದಿಂದ ಹೇಳಿದಳು. ಅವಳು ತೋರಿದತ್ತ ನೋಡಿದ. ಸಮೀಪದಲ್ಲೇ ಒಂದು ಕೆರೆ ಹಾವು ಹರಿದು ಹೋಗುತ್ತಿತ್ತು. ನಕ್ಕ. ಅವಳು ಸರಿಯಾಗಿ ಕುಳಿತಳು.

“ಇದು ಕೆರೇ ಹಾವು.. ಕಪ್ಪೆಗಳನ್ನು ತಿನ್ನುಕ್ಕೆ ಅಂತ ಇಲ್ಲಿಗೆ ಬರುತ್ವೆ.. ಹಿಡಿದು ಕೊಡ್ಲಾ ಮುಟ್ಟೀರಾ?” ನಗುತ್ತಾ ಕೇಳಿದ.

“ಬೇಡ...ಬೇಡ...ಕಚ್ಚುತ್ತೇ..” ಅವಳು ಭಯದಿಂದ ನುಡಿದಳು.

“ಇಲ್ಲ, ಈ ಹಾವು ಕಚ್ಚುಲ್ಲ. ನಾಗರ ಹಾವಿಗೇ ನಾನು ಹೆದರುಲ್ಲ.. ಇದಕ್ಕೆ ಹೆದರಿದರೆ ಆಯ್ತು...” ಇಲ್ಲಿ ಬೇಕಾದಷ್ಟು ಇವೆ..”

“ನೀವು ದಿನ ದಿನ ನೋಡ್ತೀರಿ ಅದಕ್ಕೇ ನಿಮಗೆ ಭಯ ಇಲ್ಲ. ನಾನೆಂದೂ ಹಾವನ್ನು ಇಷ್ಟು ಹತ್ತಿರದಿಂದ ನೋಡಿಲ್ಲ. ಬೇಗ ಇಲ್ಲಿಂದ ಹೊರಟು ಹೋಗೋಣ..”

“ಅಷ್ಟು ಹೆದರ್ಬೇಡಿ, ನಾನಿಲ್ವಾ?.. ನನ್ನ ಹೆಸರ್ರೇ ಭುಜಂಗ.. ನನಗೆ ಗರುಡ ಮಚ್ಚೆ ಇದೆ. ಯಾವ ಹಾವಿಗೂ ನಾನು ಹೆದರುಲ್ಲ. ಹಾವುಗಳೇ ನನಗೆ ಹೆದರಿ ದೂರ ಹೋಗತ್ವೆ.. ಬಂಡೆಗಳ ಸಂದಿನಲ್ಲಿ ಅವಿತುಕೊಂಡು ಮಲಗಿರುತ್ವೆ...ಕೈ ಹಾಕಿ ಎಳೆದು ತೋರಿಸ್ಲಾ?” ಕೀಟಲೆ ಮಾಡುವ ದನಿಯಲ್ಲಿ ಕೇಳಿದ.

“ನಿಮಗೆ ತಮಾಷೆ.. ನನಗೆ ಪ್ರಾಣ ಹೋಗುವಷ್ಟೇ ಭಯ ಆಗ್ತಿದೆ. ಹೋಗೋಣ.”

“ಪ್ರಾಣಾನ ಉಳಿಸ್ಕೋಳ್ಳೋಕೆ ಅಂತ ಇಲ್ಲಿಗೆ ಬಂದು ಅಜ್ಞಾತ ವಾಸದಲ್ಲಿದೀರಿ.. ಮತ್ಯಾಕೆ ಪ್ರಾಣಭಯ! ನಾನಿಲ್ವಾ ನಿಮ್ಮ ರಕ್ಷಣೇಗೇ...ಬಾಡಿಗಾರ್ಡ್ ಆಗಿ?”

“ಬಾಡಿಗಾರ್ಡ್ ಆಗಿರಿ ಅಂತ ನಾನೆಲ್ಲಿ ಕೇಳ್ದೆ! ಸದಾ ನನಗೆ ಕಾವಲಾಗಿ ಇರೋಕೆ ಸಾಧ್ಯಾನಾ?.. ನಾನು ಸದಾ ಕಾಲಕ್ಕೂ ಇಲ್ಲಿ ಇರುಕ್ಕೆ ಆಗುಲ್ಲವಲ್ಲ!”

“ಎಷ್ಟು ದಿನಗಳು ಇಲ್ಲಿ ಇರ್ತೀರೋ ಅಲ್ಲಿಯವರೆಗೆ.. ಏಳಿ.. ಈ ಬಂಡೆಗಳನ್ನೂ ದಾಟಿ ಇನ್ನೊಂದು ಸ್ವಲ್ಪ ದೂರ ನಡೆದರೆ ಅಲ್ಲೊಂದು ಗುಹೆ ಇದೆ. ಅದನ್ನು ತೋರಿಸ್ತೀನಿ.

“ಗುಹೆ, ಗವಿ, ಯಾವುದನ್ನು ನೋಡುವ ಮನಸ್ಸಿಲ್ಲ ನನಗಿದೆ.”

“ಭಯ ಅನ್ನಿ... ಗುಹೆಯೊಳಗೆ ಯಾವ ಕಾಡು ಪ್ರಾಣಿಗಳೂ ಅಡಗಿ ಕುಳಿತಿರುಲ್ಲ. ಗುಹೆಯೊಳಕ್ಕೆ ಸುಲಭವಾಗಿ ಹೋಗುವಂತೆಯೂ ಇಲ್ಲ. ಅಲ್ಲಿ ಒಂದು ಕಿಂಡಿ ಇದೆ. ಕಿಂಡಿಯೊಳಗೆ ಕಣ್ಣಿಟ್ಟು ನೋಡಿದರೆ ಏನೂ ಕಾಣುಲ್ಲ. ಕಿವಿಯಿಟ್ಟು ಕೇಳಿದರೆ, ಯಾರೊ ಪಿಸು ಮಾತಿನಲ್ಲಿ ಮಾತಾಡಿದಂತೆ ಭಾಸವಾಗುತ್ತೆ. ಅಲ್ಲಿ ನಿಂತು ಏನೇ ವರವನ್ನು ಕೇಳಿಕೊಂಡರೂ ನಡೆಯುತ್ತದೆ ಎನ್ನುವ ಪ್ರತೀತಿ ಇದೆ. ಬರ್ತೀರಾ?”

“ಅದನ್ನೆಲ್ಲ ಪರೀಕ್ಷಿಸುವ ಮೂಡ್‌ನಲ್ಲಿ ನಾನಿಲ್ಲ. ಅಲ್ಲದೇ ನನಗೆ ಯಾವ ವರವೂ ಬೇಕಿಲ್ಲ.”

"ಸರಿ ಹಾಗಿದ್ರೆ, ನೀವು ಇಲ್ಲೇ ಕೂತಿರಿ. ನಾನು ತುಂಬಾ ದಿನಗಳ ನಂತರ ಇಲ್ಲಿಗೆ ಬಂದಿದೀನಿ...ಬೇಗ ಹೋಗಿ ವರವನ್ನು ಕೇಳ್ಕೊಂಡು ಬಂದು ಬಿಡ್ತೀನಿ." ಎನ್ನುತ್ತಾ ಸರಸರನೆ ಬಂಡೆಗಳನ್ನು ದಾಟಿ, ಎತ್ತಲೋ ಮರೆಯಾದ. ಅವಳು ಮೈಯನ್ನು ಮುದುರಿಕೊಂಡು ಅಲುಗಾಡದೇ ನಿಂತಳು. ಅವಳು ಹರಿಯುತ್ತಿದ್ದ ನೀರನ್ನು ನೀರಿನಲ್ಲಿ ಈಜಿ ಬರುತ್ತಿದ್ದ ಮೀನುಗಳನ್ನು ನೋಡುತ್ತಿದ್ದಳು. ಆಗಾಗ್ಗೆ ಅವನು ಕಾಣುವನೋ ಎಂದು ಅತ್ತ ನೋಡುತ್ತಿದ್ದಳು., ಹತ್ತು ನಿಮಿಷಗಳಲ್ಲಿ ಅವನು ಹಿಂತಿರುಗಿದ್ದ. ಮುಖದಲ್ಲಿ ಏನನ್ನೋ ಸಾಽಸಿದ ವಿಶೇಷ ಕಳೆ ಇತ್ತು. ಅವನನ್ನೇ ದಿಟ್ಟಿಸಿದಳು. ಅವನು ತನ್ನ ಬೆನ್ನ ಹಿಂದೆ ಕೈಗಳಲ್ಲಿ ಅಡಗಿಸಿಟ್ಟುಕೊಂಡಿದ್ದ ಹೂವಿನ ಗೊಂಚಲನ್ನು ಅವಳ ಮುಂದೆ ಹಿಡಿದ.

"ಈ ಹೂವಿನ ಗೊಂಚಲನ್ನೂ ಕಂಡೆ. ಚೆನ್ನಾಗಿದೆ ಅಂತ ಅನ್ನಿಸ್ತು. ನಿಮಗೋಸ್ಕರ ಕೊಯ್ದುಕೊಂಡು ತಂದಿದೀನಿ, ತಗೊಳ್ಳಿ" ಎಂದ.

"ಇದು ಎಂಥಾ ಹೂವು?.. ಹೆಸರೇನು?"

"ಏನೋ, ನಂಗೆ ಹೆಸರು ಕುಲ ಒಂದೂ ಗೊತ್ತಿಲ್ಲ. ಇಲ್ಲೆಲ್ಲಾ ಸುತ್ತಾಡ್ತಾನೇ ಇರ್ತೀನಿ. ಆದರೆ ಇಷ್ಟು ಸೊಗಸಾಗಿ ಹೂವು ಅರಳಿದ್ದನ್ನು ಕಂಡೇ ಇರಲಿಲ್ಲ. ಯಾವುದೋ ಅಜ್ಞಾತವಾದ ಮರ. ಅಜ್ಞಾತವಾದ ಹೂವು..ಇಂದು ನನಗೆ ಪ್ರತ್ಯಕ್ಷವಾಗಿದೆ. ವಿಶೇಷ ಅಲ್ವಾ!"

"ತಮಾಷೆ ಮಾಡ್ತಿದೀರಾ?"

"ಛೇ...ನಂಗೆ ಗೊತ್ತಿಲ್ಲ ಅಷ್ಟೆ ಅಮ್ಮಂಗೋ ಅಜ್ಜಿಗೋ ಎಂಥಾ ಹೂವು ಅಂತ ಗೊತ್ತಿರುತ್ತೆ...ಬನ್ನಿ ಹೋಗೋಣ.. ಜಲಪಾತದ ಹತ್ತಿರಕ್ಕೆ ಕರ್ಕೊಂಡು ಹೋಗ್ತೀನಿ."

"ಇವತ್ತಿಗೆ ಇಷ್ಟು ಸಾಕು...ಇನ್ನೊಂದು ದಿನ ಬರೋಣ..."

"ಯಾಕ್ರೀ ಸುಸ್ತಾಯ್ತಾ?.. ಎನ್ನುತ್ತಾ, ಚೀಲಗಳಿಗೆ ಡಬ್ಬಿಗಳನ್ನು ತಟ್ಟೆಗಳನ್ನು ತೆಗೆದಿಟ್ಟುಕೊಂಡ." ಮೊದಲು ಇದನ್ನೆಲ್ಲಾ ಬೈಕ್ ಹತ್ತಿರ ಇಟ್ಟು ಬರ್ತೀನಿ. ನೀವು ಇಲ್ಲೇ ಇರಿ" ಎಂದು ಹೇಳಿ ಬಂಡೆಗಳನ್ನು ದಾಟಿದ. ಅವನು ಬೈಕ್ ಬಳಿ ಚೀಲವನ್ನಿಟ್ಟು ಮತ್ತೆ ಹಿಂತಿರುಗಿದ...ಅವಳು ನಿಧಾನವಾಗಿ, ಎಚ್ಚರಿಕೆಯಿಂದ ಒಂದೊಂದೇ ಹೆಜ್ಜೆಗಳನ್ನು ಬಂಡೆಯ ಮೇಲೆ ಇಡುವುದನ್ನು ಗಮನಿಸಿದ. ಇದ್ದಕ್ಕಿದ್ದಂತೆ, ಧಾವಿಸಿ ಬಂದು ಸರ್ರನೆ ಅವಳನ್ನು ಎತ್ತಿಕೊಂಡು, ಬಂಡೆಗಳನ್ನು ದಾಟಿ ಇತ್ತ ಬಂದು ಅವಳನ್ನು ಇಳಿಸಿದ. ಅವಳು ಕಿರುಚಿದ್ದಳು.

"ಇದೇನಿದು ಹುಡುಗಾಟ?.." ಅವಳು ರೋಷದಿಂದ ಕೇಳಿದಳು.

"ಸಾರಿ...ನಾನು ಒಂದು ನಿಜ ಹೇಳ್ತೀನಿ. ನೀವು ಹೆದರ್ಬಾರ್ದು...ನೀವು ಹೆಜ್ಜೆ ಇಡುತ್ತಿದ್ದ ಜಾಗದಲ್ಲಿ ಒಂದು ಹಾವು ಹರಿದು ಹೋದದ್ದನ್ನು ಕಂಡೆ..." ಅವಳು ಮತ್ತೊಮ್ಮೆ ಜೋರಾಗಿ ಕಿರುಚಿ, ಕಣ್ಣುಗಳನ್ನು ಮುಚ್ಚಿ, ಅವನನ್ನು ಹಿಡಿದಳು.. ಅವಳನ್ನು ಸರಿಸುವ ಮನಸ್ಸಾಗದೇ ಹಾಗೇ ನಿಂತ.. ಅವಳ ಸಮೀಪ, ಅವಳ ಹಿಡಿತ, ಹಿತವಾಗಿದೆಯೆನಿಸಿತ್ತು.

ನಿಧಾನವಾಗಿ ಕಣ್ಣುಗಳನ್ನು ಬಿಟ್ಟು, ಅವನಿಂದ ದೂರ ಸರಿದಳು. ಅವನ ತುಂಟ ನಗೆಯನ್ನು

ಕಂಡಳು." ಇಂಥಾ ತಮಾಷೇನಾ ಮಾಡೋದು?..ಸುಳ್ಳು ಹೇಳಿ ಹೆದರಿಸ್ತೀರಿ..."

"ಇಲ್ಲ, ಸುಳ್ಳಲ್ಲ, ನಿಮ್ಮಾಣೆಗೂ ಸುಳ್ಳಲ್ಲ...ನಿಮಗೆ ಭಯ ಅಂತ ನಾನು ಹಾಗೆ ವರ್ಣಿಸಿದೆ...ನಮಗೆಲ್ಲಾ ಯಾವ ಭಯವೂ ಇಲ್ಲ. ಭಯ ಪಟ್ಕೊಂಡ್ರೆ ಇಲ್ಲೆಲ್ಲಾ ತಿರುಗಾಡೋದು ಹೇಗೆ?... ನನ್ನ ಬಳಿಗೆ ಯಾವ ಹಾವೂ ಸುಳಿಯುಲ್ಲ. ಗರುಡ ಮಚ್ಚೆ ಇರೋರನ್ನ ಕಂಡ್ರೆ ಅವಕ್ಕೂ ಭಯವಂತೆ..."

"ಗರುಡ ಮಚ್ಚೆ ಎಲ್ಲಿದೆ ತೋರ್ಸಿ, ಸುಳ್ಳೋ, ನಿಜವೋ ಅಂತ ಗೊತ್ತಾಗುತ್ತೆ."

"ಸುಳ್ಳಲ್ಲ, ಖಂಡಿತಾ ಇದೆ. ಆದರೆ ಹಾಗೆಲ್ಲಾ ಸುಲಭವಾಗಿ ಹೆಂಗಸರಿಗೆ ತೋರಿಸುವಂತಿಲ್ಲ.." ಅವನು ಹೆಜ್ಜೆಗಳನ್ನಿಡುತ್ತಾ ನುಡಿದಾಗ ಅವಳು ಮೌನಿಯಾದಳು. ನಾನು ಚಿಕ್ಕವನಾಗಿದ್ದಾಗ ಕೆಲವರು ನೋಡಿದಾರೆ...ಈಗ ಯಾರಿಗೂ ಕಾಣಿಸುವುದಿಲ್ಲ. "ಅವಳಿಗೆ ಸಂಕೋಚವೆನಿಸಿತ್ತು. ಮಾತಿಲ್ಲದೇ ಅವನನ್ನು ಹಿಂಬಾಲಿಸಿದಳು."

* * *

"ಏನೇ ಹೇಮಾ, ಯಾವಾಗ ಬಂದ್ಯೇ?" ಮುಂಬಾಗಿಲಿನಲ್ಲಿ ನಿಂತಿದ್ದವಳನ್ನು ಭುಜಂಗ ಕೇಳಿದ. ಅವಳು ಅವನಿಗೆ ಉತ್ತರಿಸದೇ, ತುಟಿ ಕೊಂಕಿಸಿ, ಅವನ ಹಿಂದೆ ನಿಂತಿದ್ದವಳನ್ನು ನೋಡುತ್ತಾ ಕೇಳಿದಳು.

"ಎಲ್ಲಿಗೆ ಹೋಗಿತ್ತು ಸವಾರಿ? ಬಸ್‌ಸ್ಟ್ಯಾಂಡಿಗೆ ಬೈಕ್ ತಗೊಂಡು ಬರ್ತೀಯೇನೋ ಅಂತ ಫೋನು ಮಾಡಿದರೆ, ಆಸಾಮಿ ಪತ್ತೇನೇ ಇಲ್ಲ."

"ನಂಗೇನು ಗೊತ್ತಿತ್ತು ನೀನು ಬರ್ತೀಯ ಅಂತ?.. ನೆನ್ನೇನೇ ಫೋನು ಮಾಡ್ಬೇಕಾಗಿತ್ತು. ಅತ್ತೇನೂ ಹೇಳ್ಲಿಲ್ಲ. ಇವರು ಯಾರು ಗೊತ್ತಾ?" ಪಲ್ಲವಿಯ ಕಡೆ ಕೈ ತೋರಿದ.

"ಹೂಂ, ಅಮ್ಮ ಹೇಳಿದ್ಲು, ಮಂದಾಕಿನಿ ಆಂಟಿಯ ಮಗಳಂತೆ.. ನಾನು ನೋಡೇ ಇರ್ಲಿಲ್ಲ," ಪಲ್ಲವಿ ತಲೆ ತಗ್ಗಿಸಿದಳು.

"ಅತ್ತೇ...ಹೇಮಾ ಬರ್ತಾಳೆ ಅಂತ ನಿಮಗೆ ತಿಳಿದಿತ್ತಾ? ನೀವ್ಯಾಕೆ ಹೇಳ್ಲಿಲ್ಲ?"

"ನಂಗೆ ಗೊತ್ತಿದ್ದಿದ್ರೆ ತಾನೇ ನಿಂಗೆ ಹೇಳೋದು. ಅವಳು ಯಾವಾಗ್ಲೂ ಹೀಗೇನೇ ಧೂಮಕೇತು ಥರ ದಿಡೀರ್ ಅಂತ ಬರೋದು, ಹಾಗೇ ಹೋಗೋದು."

"ಅಮ್ಮಾ, ನೀನು ಯಾವಾಗ್ಲೂ ಈ ಭುಜಿಯ ಪರಾನೇ ವಹಿಸ್ತೀಯಲ್ಲಮ್ಮಾ...ನಾನು ನಿನ್ನ ಮಗಳು.. ನನ್ಮೇಲೆ ನಿಂಗೆ ಪ್ರೀತೀನೇ ಇಲ್ಲ.." ಮೂತಿ ಚೂಪು ಮಾಡಿದಳು.

"ಅತ್ತೇ ಜೊತೆ ನಿಂಗಿಂತ ಹೆಚ್ಚಾಗಿ ಇರೋನು ನಾನು. ನೀನಂತೂ ನಿನ್ನ ಅಪ್ಪ ಅಮ್ಮನ್ನ ಮರೆತೇ ಬಿಟ್ಟಿರುವಂತಿದೆ."

"ನೋಡಮ್ಮ, ಹಂಗಿಸಿ ಮಾತಾಡ್ತಾನೆ, ನೀನೂ ಸುಮ್ಮನೇನೇ ಇದೀಯಲ್ಲ."

"ಅವನು ಹೇಳಿದ್ರಲ್ಲಿ ತಪ್ಪೇನಿದೆ, ನೀನೇ ಹೇಳು, ಅವನು ಹೇಳಿದ್ದು ನಿಜವೇ ಅಲ್ವಾ?"

"ಸರಿ, ನೀವಿಬ್ರೂ ಒಂದು..ನಾನೇ ಬೇರೆ..ನಾನು ಇವತ್ತು ರಾತ್ರಿಯೇ ವಾಪಸ್ಸು ಹೊರಟು ಹೋಗ್ತೀನಿ.."

"ಇವತ್ತೇ ಏನೂ ವಾಪಸ್ಸು ಹೋಗ್ಬೇಕಾಗಿಲ್ಲ, ಎಷ್ಟು ದಿನ ರಜ ಇದೆಯೋ, ಇರ್ಬೇಕೋ ಅಷ್ಟು ದಿನ ಇದ್ದು ಹೋಗು. ಹಾಗೆ ಬರೋದು, ಹೀಗೆ ಹೋಗೋದು ಎರಡೂ ನಿನ್ನ ಇಷ್ಟಕ್ಕೆ ಸೇರಿದ್ದು ತಾನೇ?" ಭುಜಂಗ ನಗುತ್ತಾ ನುಡಿದಾಗ ಹೇಮಾ, ಅಣಗಿಸಿದಳು. ಪಲ್ಲವಿ ಪೆಚ್ಚಾಗಿ ಅವರಿಬ್ಬರ ಸಂಭಾಷಣೆಯನ್ನೇ ಕೇಳಿಸಿಕೊಳ್ಳುತ್ತಾ ನಿಂತಿದ್ದಳು. ಹೇಮಾ ಪಲ್ಲವಿಯ ಕಡೆ ಗಮನ ಕೊಡದೇ ಒಳಕ್ಕೆ ನಡೆದಿದ್ದಳು. ಇವಳು ಮುಜುಗರಗೊಂಡಿದ್ದಳು. ಭುಜಂಗನಿಗೆ ಕಸಿವಿಸಿಯಾಗಿತ್ತು. ಮೊದಲ ಬಾರಿಗೆ ಹೇಮಾಳನ್ನು ಕಂಡು ಉಲ್ಲಾಸ, ಉತ್ಸಾಹ ಮೂಡಿರಲಿಲ್ಲ.

"ನಿನ್ನ ಕಸಿನ್‌ಗೆ ಮನೇಲಿ ಬೇಸರವಾಗ್ತಿತ್ತು ಅಂತ ಹೊರಕ್ಕೆ ತಿರುಗಾಡಿಸಲು ಕರ್‍ಕೊಂಡು ಹೋಗಿದ್ದೆ.. ನೀನು ಬಂದಿದೀಯಲ್ಲ, ನೀನು ಇರುವವರೆಗೆ ಪರವಾಗಿಲ್ಲ." ಅವಳ ಹಿಂದೆಯೇ ನಡೆದು ಹೇಳಿದ್ದ.

"ನನಗೆ ಬೇರೆ ಬೇರೆ ಕೆಲಸಗಳಿವೆ. ಈ ಕೆಲಸಾನೆಲ್ಲಾ ನೀನೇ ಮಾಡು." ಅವಳು ನೇರವಾಗಿ ಹೇಳಿದಾಗ, ಅವನು ಪೆಚ್ಚಾಗಿ ತಿರುಗಿ ನೋಡಿದ. ಪಲ್ಲವಿ ಬಾವಿಯ ಬಳಿ ನಿಂತಿದ್ದಳು. ಅವಳ ಬಳಿಗೆ ಬಂದ.

"ಬರ್ತೀರಾ ನಮ್ಮ ಮನೆಗೆ ಹೋಗೋಣ."

"ಪರವಾಗಿಲ್ಲ ನಂಗೇನೂ ಬೇಸರವಿಲ್ಲ.. ನಾನೇ ಅಡ್ಜಸ್ಟ್ ಮಾಡಿಕೊಳ್ತೀನಿ."

"ಹೇಮಾ ಬದಲಾಗಿದಾಳೆ. ಮುಂಚೆ ಹೀಗಿರ್ಲಿಲ್ಲ.. ಅವಳ ಮಾತ್ನಿಂದ ಬೇಸರ ಮಾಡ್ಕೋಬೇಡಿ."

"ಇಲ್ಲಿ...ಹಾಗೇನಾದ್ರೂ ಬೇಸರ ಆದರೆ, ಊರಿಗೆ ವಾಪಸ್ಸು ಹೊರಟು ಹೋಗ್ತೀನಿ"

"ಹೋಗೋದಾದ್ರೆ, ಹೇಳ್ಬಿಟ್ಟು, ನಿಮ್ಮ ಅಡ್ರೆಸ್ ಕೊಟ್ಟು ಹೋಗಿ". ಅವನು ಅನಾವಶ್ಯಕವಾಗಿ ಜೋರಾಗಿ ನಕ್ಕಾಗ ಪಲ್ಲವಿಯೂ ತನ್ನ ನಗೆಯನ್ನು ಸೇರಿಸಿದಳು. ಇವರಿಬ್ಬರ ನಗು, ಹೇಮಾಳಿಗೆ ಕೇಳಿಸಿತ್ತು. ಮುಖವನ್ನು ಸಿಂಡರಿಸಿದಳು. ಅಸಹನೆ ಇಣುಕಿತ್ತು.

* * *

"ಈ ಪಲ್ಲವಿ ಇನ್ನು ಎಷ್ಟು ದಿನ ಇಲ್ಲಿರ್ತಾಳೆ..ಮಂದಾಕಿನಿಗೆ ಫೋನು ಮಾಡು ಬಂದು ಕರ್‍ಕೊಂಡು ಹೋಗ್ಲಿ.. ನಿನಗ್ಯಾಕೆ ಇವಳ ಉಸಾಬರಿ!" ತಾಯಿಗೆ ಹೇಳಿದಳು.

"ಹೋಗ್ತಾಳೆ ಬಿಡು. ಕಂಡೋರ ಮನೆ ಹುಡುಗಿ ಎಷ್ಟು ದಿನಾಂತ ಪರರ ಮನೇಲಿ ಇರ್ತಾಳೆ! ಹೇಗೂ ಇಲ್ಲಿ ನೀನೂ ಇರ್ಲಿಲ್ಲವಲ್ಲ..ನಂಗೂ ಜೊತೆಯಾಗಿದ್ದಳು."

"ನಾನಿಲ್ಲದಿದ್ರೇನಾಯ್ತು! ಭುಜಿ ಇದಾನಲ್ಲ.. ಅವನ ಅವಳ ಸ್ನೇಹ ಜಾಸ್ತಿಯಾಗಿಯೇ ಕಾಣ್ತಿದೆ."

“ಹೂಂ, ಅವನ ಸ್ವಭಾವವೇ ಹಾಗೆ. ಎಲ್ಲರೊಂದಿಗೆ ಬಹಳ ಬೇಗ ಬೆರೆತು ಹೋಗ್ತಾನೆ. ಒಂದೇ ಮಂಕಾಗಿ ಕೂತಿರ್ತಿತ್ತು. ನಾನೇ ತಿರುಗಾಡಿಸ್ಕೊಂಡು ಬಾ ಅಂತ ಹೇಳ್ದೆ.”

“ಬಹಳ ಇಷ್ಟದಿಂದ ಒಪ್ಪಿಕೊಂಡಿರಬಹುದು ಅಲ್ವಾ?.. ಬಹಳ ಖುಷಿಯಾಗಿದಾನೆ.”

“ಏನೇ ಅವನ ಬಗ್ಗೆ ಹೀಗೆ ಮಾತಾಡ್ತೀಯಾ! ಅವನು ಮುಂದೆ ನಿನ್ನನ್ನು ಮದುವೆಯಾಗೋನು... ಅವನ ಬಗ್ಗೆ ಒಳ್ಳೆಯ ಭಾವನೆಗಳಿರಲಿ..”

“ಗಂಡಸಿನ ನಿಯತ್ತು ಬದಲಾಗಲು ಎಷ್ಟು ಹೊತ್ತು ಬೇಕು ಅಂತ ನೀನೇ ಹೇಳ್ತಾ ಇದ್ದೆ. ಅವನೂ ಇಂಥಾ ಸಮಯಕ್ಕಾಗಿ ಕಾಯ್ತಾ ಇದ್ದ ಅಂತ ಕಾಣುತ್ತೆ.”

“ಹೀಗೆಲ್ಲಾ ಅವನ್ಮೇಲೆ ಆಪಾದನೆ ಹೊರಿಸ್ಬೇಡ, ಭುಜಿ ನಿಂಗೋಸ್ಕರ ಹಗಲು ರಾತ್ರಿ ಕಾಯ್ತಾ ಇದಾನೆ. ಆದಷ್ಟು ಬೇಗ ಮದುವೆಯಾಗ್ಬಿಡಿ. ಅವನ ಬೇಸರವೂ ಕಳೆಯುತ್ತೆ...ಪಾಪ, ಒಂಟಿಯಾಗಿದಾನೆ”.

“ಅವನ ಬೇಸರ ಕಳೆಯಲಿ, ಅವನ ಒಂಟಿತನ ನೀಗಲಿ ಅಂತ ನಾನು ಬೇಗ ಮದುವೆಯಾಗೋಕೆ ಆಗುತ್ತೇನಮ್ಮ? ಅವನಿಗೆ ಅಷ್ಟು ಬೇಸರವಾಗಿದ್ದರೆ, ಒಂಟಿತನ ಕಾಡ್ತಾ ಇದ್ದರೆ, ಅರ್ಜೆಂಟಿದ್ದರೆ, ಬೇರೆಯಾರನ್ನಾದ್ರೂ ಮದುವೆಯಾಗ್ಲಿ..”

“ಹೀಗೆಲ್ಲಾ ಅಸಂಬದ್ಧ ಮಾತಾಡ್ಬೇಡ. ಅವನಿಗೆ ಗೊತ್ತಾದ್ರೆ ಏನಂದ್ಕೊಳ್ತಾನೆ!..” ನೀನು ಹುಟ್ಟಿದಾಗ್ನಿಂದ ಅವನೇ ನಿನ್ನ ಗಂಡ ಅಂತ ತೀರ್ಮಾನಿಸಿದ್ದಾಗಿದೆ.”

“ನನ್ನನ್ನು ಕೇಳಿ ತೀರ್ಮಾನಿಸಿದ್ರಾ? ಈಗಲೂ ಈ ತೀರ್ಮಾನವನ್ನು ಬದಲಾಯಿಸಿ, ನಾನೇ ಹೇಳ್ತಾ ಇದೀನಲ್ಲ”

“ಹೀಗೆಲ್ಲಾ ಮಾತಾಡ್ಬೇಡ ಹೇಮಾ..ನಿನ್ನ ಓದು ಮುಗಿದು, ನೀನು ಡಾಕ್ಟರಾಗಿ ಈ ಊರಿಗೆ ಬಂದು ಕ್ಲಿನಿಕ್ ಶುರು ಮಾಡ್ಲಿ..ಅಂತ ನಾವುಗಳೆಲ್ಲಾ ಕಾಯ್ತಾ ಇದೀವಿ ಕಣೇ. ನಿನ್ನ ಮಾತುಗಳು ಭಯವನ್ನು ಹುಟ್ಟಿಸುತ್ವೆ..ಯಾಕೆ ಹೀಗೆಲ್ಲಾ ಆಡ್ತಿದೀಯ!”

“ಮತ್ತಿನ್ನೇನು! ಬಂದಾಗೆಲ್ಲಾ ಮದುವೆ, ಮದುವೆ ಅಂತ ಮದುವೆ ಮಾತನ್ನೆತ್ತಿ ರೇಗಿಸ್ತೀಯ, ನಾನು ಡಾಕ್ಟರಾಗುವವಳು, ಇಲ್ಲಿ ಮದುವೆ, ಮಕ್ಕಳು, ಸಂಸಾರ ಅಂತ ಸ್ವಂತ ಜೀವನಕ್ಕೆ ಪ್ರಾಧಾನ್ಯತೆ ಇರಬಾರದು. ಜನಸೇವೆ, ಸಮಾಜ ಸೇವೆ ಮುಖ್ಯವಾಗ್ಬೇಕು.”

“ಸಮಾಜ ಸೇವೆ ಮಾಡ್ಬೇಡ ಅಂತ ಯಾರು ಹೇಳಿದ್ರು?.. ಭುಜಿಯ ಸಹಕಾರ ಸದಾ ಇದ್ದೇ ಇರುತ್ತೆ.”

“ನಿಂಗೆ ಅರ್ಥವಾಗುಲ್ಲಮ್ಮ.. ಈ ಭುಜಿ ನಿನ್ನ ಕಿವಿಗೆ ಏನೇನು ತುಂಬ್ತಾನೋ?”

“ಪಾಪ, ಅವನೇನು ತುಂಬ್ತಾನೆ. ನಂಗೇ ಅರ್ಥವಾಗುತ್ತೆ, ಅತ್ತಿಗೆ ಒಳ್ಳೆಯವರು ಸುಮ್ಮನಿದಾರೆ.. ಅವರಿಗೆ ಸೊಸೆ ಬೇಗ ಮನೆ ತುಂಬಲಿ, ಮನೆಯಲ್ಲಿ ಮೊಮ್ಮಕ್ಕಳು ಹುಟ್ಟಲಿ ಅಂತ ಆಸೆ ಇರುಲ್ವಾ!...”

"ಮತ್ತೆ ಶುರು ಮಾಡಿದ್ಯಲ್ಲಾ ಮದುವೆ, ಮೊಮ್ಮಕ್ಕಳು ಅಂತ.. ಇದನ್ನೆಲ್ಲಾ ಕೇಳ್ತಾ ಕೂತ್ಕೊಳ್ಳೋಕೆ ಪುರುಸೊತ್ತಿಲ್ಲ ನಂಗೆ, ಬೇಗ ಊಟ ಹಾಕು.. ನನಗೆ ಸ್ವಲ್ಪ ಕೆಲಸ ಇದೆ."

"ಸರಿ, ನೀನು ಬರ್ತೀಯ ಅಂತ ಗೊತ್ತಿದ್ದಿದ್ರೆ, ನಿನಗೆ ಇಷ್ಟವಾದ ಅಡಿಗೆಯನ್ನೇ ಮಾಡಿ ಬಡಿಸ್ತಿದ್ದೆ.. ಬೆಳಿಗ್ಗೆ ಮಾಡಿದ್ದ ಚಪಾತಿ ಪಲ್ಯ ಕೂಡ ಮಿಕ್ಕಿಲ್ಲ.. ಹೋಗು ಪಲ್ಲವೀನ ಊಟಕ್ಕೆ ಕರೆದು ಬಾ.. ತಟ್ಟೆ ಹಾಕಿ ಬಡಿಸ್ತೀನಿ."

"ನಾನು ಕರೆಯುಲ್ಲ, ಅವಳಿಗೆ ಹೊಟ್ಟೆ ಹಸಿದ್ರೆ ಅವಳೇ ಬರ್ತಾಳೆ. ನಂಗೆ ಹಸಿವಾಗ್ತಿದೆ. ನಂಗೆ ಬಡಿಸು."

"ಯಾಕೆ ಹೀಗೆ ಒರಟಾಗಿ ಮಾತಾಡ್ತೀಯೆ?.. ಅವಳು ನಮ್ಮ ಮನೆಯ ಅತಿಥಿ.. ಬೇರೆ ಯಾರೂ ಅಲ್ಲ, ನಿನ್ನ ಚಿಕ್ಕಮ್ಮನ ಮಗಳು.. ಇವತ್ತೋ ನಾಳೆಯೋ ವಾಪಸ್ಸು ಹೋಗ್ತಾಳೆ."

"ಯಾವ ಚಿಕ್ಕಮ್ಮನೋ.. ಯಾರ ಮಗಳೋ...ಹಿಂದೆಂದೂ ಇಲ್ಲದ್ದು ನನಗೆ ಈ ಸಂಬಂಧಗಳೇ ಬೇಕಿಲ್ಲ.. ನಿಂಗೆ ಬಡಿಸುಕ್ಕೆ ಇಷ್ಟವಿಲ್ಲದಿದ್ರೆ ಹೇಳು, ನಾನೇ ಹಾಕ್ಕೊಂಡು ತಿಂತೀನಿ."

"ಸರಿಯಮ್ಮ...ಬಹಳ ವಿಚಿತ್ರವಾಗಿ ಮಾತಾಡ್ತಿದೀಯ..ನಿಂಗೆ ಏನಾಯ್ತು ಅಂತ?" ಎನ್ನುತ್ತಾ, ತಟ್ಟೆ, ಬಟ್ಟಲನ್ನಿಟ್ಟು, ಬಡಿಸಿದಳು. ಹೇಮಾ ಸರಸರನೆ ಊಟವನ್ನು ಮಾಡಲಾರಂಭಿಸಿದಳು. ವೈದೇಹಿ ಒಳಬಾಗಿಲಲ್ಲೇ ನಿಂತು ಹೊರಕ್ಕೆ ಇಣುಕಿದಳು. ಭುಜಂಗ ಪಲ್ಲವಿಯೊಡನೆ ನಗು ನಗುತ್ತಾ ಮಾತನ್ನಾಡುತ್ತಿದ್ದುದನ್ನು ಕಂಡಳು. "ಇನ್ನಾದರೂ ಈ ಹೇಮ ಎಚ್ಚೆತ್ತು ಕೊಳ್ಬೇಕು. ವಯಸ್ಸಿಗೆ ಬಂದಿರುವ ಹುಡುಗನ್ನ ಹೀಗೆ ಇವಳು ಸತಾಯಿಸಬಾರದು ಅಂತಂದುಕೊಂಡಳು.

ಊಟ ಮುಗಿಸಿ ಕೈ ತೊಳೆದು, ಹೇಮಾ, ಹ್ಯಾಂಡ್‌ಬ್ಯಾಗನ್ನೆತ್ತಿಕೊಂಡು, ಚಪ್ಪಲಿ ಮೆಟ್ಟಿ ಬಾಗಿಲ ಬಳಿಗೆ ಬಂದಳು.

"ಇನ್ನು ನೀನು ಇಲ್ಲೇ ಇದೀಯಾ, ಮನೆಗೆ ಹೋದ್ಯೇನೋ ಅಂತ ಅಂದ್ಕೊಂಡೆ. ಹೇಗೂ ಇದೀಯ.. ನನ್ನನ್ನ ನನ್ನ ಫ್ರೆಂಡ್ ಮನೆ ತನಕ ಬಿಡ್ತೀಯಾ?"

"ಬರ್ತಿದ್ದ ಹಾಗೇ ಮತ್ತೆ ಅಲೀತೀಯಲ್ಲಾ.. ಅತ್ತೆ ಮಾವನ ಜೊತೆ ಕೂತು ನಾಲ್ಕು ಮಾತುಗಳನ್ನಾಡಬಾರ್ದಾ?" ಎನ್ನುತ್ತಾ ಪಲ್ಲವಿಯ ಕಡೆ ನೋಡಿ ತಲೆಯಾಡಿಸಿ, ಬೈಕ್ ನಿಲ್ಲಿಸಿದ್ದ ಕಡೆಗೆ ನಡೆದ.

"ನೀನು ಇದೀಯಲ್ಲ ಎಲ್ಲರ ಹತ್ರಾನೂ ಮಾತನಾಡುಕ್ಕೇ.." ಎನ್ನುತ್ತಾ ಬೈಕಿನ ಹಿಂದಿನ ಸೀಟನ್ನೇರಿ, ಭುಜಂಗನ ಭುಜವನ್ನು ಹಿಡಿದು ಸರಿಯಾಗಿ ಕುಳಿತಳು. ಭುಜಂಗ ಗಾಡಿಯನ್ನು ಓಡಿಸುವ ಮೊದಲು ಹಿಂತಿರುಗಿ ನೋಡಿದ. ಪಲ್ಲವಿ ಮನೆಯೊಳಕ್ಕೆ ಹೊರಟು ಹೋಗಿದ್ದಳು.

"ನಿನ್ನ ಗೆಳತಿ ಒಳಕ್ಕೆ ಹೋದ್ಲು.. ನೀನು ಮುಂದೆ ನೋಡ್ಕೊಂಡು ಗಾಡೀನ ಓಡ್ಸು" ಎಂದಳು, ಭುಜಂಗ ಸಣ್ಣದಾಗಿ ಸೀಟಿ ಹೊಡೆಯುತ್ತಾ ಬೈಕ್‌ನ್ನು ಓಡಿಸಿದ.. ಸ್ವಲ್ಪ ದೂರ ಓಡಿದ ಮೇಲೆ ಹೇಮಾ ಅವನಿಗೆ ಗಾಡಿಯನ್ನು ನಿಲ್ಲಿಸುವಂತೆ ಹೇಳಿದಳು, ನಿಲ್ಲಿಸಿದ.

"ನಿನ್ನ ಫ್ರೆಂಡ್ ಮನೆ ಇಷ್ಟು ಬೇಗ ಬಂತಾ! ಗೊತ್ತಾಗ್ಲೇ ಇಲ್ಲ."

"ನಿನ್ನ ಧ್ಯಾನ ರಸ್ತೆಯ ಮೇಲೆ ಇರ್ಲೇ ಇಲ್ಲ, ಏನ್ಸಮಾಚಾರ?"

"ನಂದೇನು ಸಮಾಚಾರ.. ? ಇದೆ ಊರ್ನಲ್ಲಿ ಹಿಂದೆ ಹೇಗಿದ್ನೋ ಹಾಗೇ ಇದೀನಿ.. ಎಷ್ಟೊತ್ತು ಇರ್ತೀಯ ನಿನ್ನ ಫ್ರೆಂಡ್ ಮನೇಲಿ..?"

"ಗೊತ್ತಿಲ್ಲ, ನೀನು ನಂಗೋಸ್ಕರ ಕಾಯ್ಬೇಡ.. ಮನೆಗೆ ಹೋಗು.."

"ಫೋನು ಮಾಡೇ.. ಬಂದು ಕರ್ಕೊಂಡು ಹೋಗ್ತೀನಿ.. ನಂದಿನ್ನು ಊಟ ಆಗಿಲ್ಲ.. ಊಟ ಮಾಡಿ, ಸ್ವಲ್ಪ ಹೊತ್ತು ಮಲಗಿದ್ದು ಆಮೇಲೆ ತೋಟಕ್ಕೆ ಹೋಗ್ಬೇಕು. ಇವತ್ತು ತೋಟಕ್ಕೆ ಹೋಗಿಯೇ ಇಲ್ಲ."

"ಎಲ್ಲೆಲ್ಲೋ ಅಲೀತಿದ್ಯಲ್ಲಾ...ಇವತ್ತು ನಾನೂ ನಿನ್ನ ಜೊತೆ ತೋಟಕ್ಕೆ ಬರ್ತೀನಿ, ನಾನು ನಿನ್ಹತ್ರ ಸ್ವಲ್ಪ ಮಾತಾಡ್ಬೇಕು.."

"ಅಂತೂ ನನ್ಹತ್ರ ಮಾತಾಡುಕ್ಕೆ ಅಂತ ಸಮಯ ಮಾಡಿಕೊಂಡ್ಯಲ್ಲಾ..ಫೋನು ಮಾಡು, ಮನೇಲೇ ಇರ್ತೀನಿ" ಎಂದು ಹೇಳಿ ಬೈಕನ್ನು ತಿರುಗಿಸಿದ.

* * *

ಹೇಮಾ ಸ್ವಲ್ಪ ಹೊತ್ತಿನಲ್ಲೇ ಫ್ರೆಂಡ್ ಮನೆಯಿಂದ ಹಿಂತಿರುಗಿದಳು. ಸೀದಾ ಭುಜಂಗನ ಮನೆಗೆ ಬಂದಳು. ಅವನು ಊಟಕ್ಕೆ ಕುಳಿತಿದ್ದ.

"ಏನೇ ಇಷ್ಟು ಬೇಗ ಬಂದ್ಬಿಟ್ಯಾ?.. ಬಾ.. ಊಟ ಮಾಡೂವಂತೆ."

"ನನ್ನ ಊಟ ಆಯ್ತು.. ಹೇಗಿದೀರಿ ಅತ್ತೆ? ಮಾವ ಮಲಗಿದಾರಾ?" ಅತ್ತೆಯನ್ನು ವಿಚಾರಿಸಿದಳು.

"ಹೂಂ, ಪುಣ್ಯಾತ್ಮರು.. ಊಟ ಆಗ್ತಿದ್ದ ಹಾಗೇ, ಕೈ ತೊಳೆದು ಮಲಗಿ ಬಿಡ್ತಾರೆ, ಗೊರಕೆ ಸದ್ದು ಕೇಳ್ತಿಲ್ವಾ?" ಆಕೆ ನಗುತ್ತಾ ಹೇಳಿದಳು.

"ಬಿಡಮ್ಮ ಅಪ್ಪಯ್ಯ ನಿರಾತಂಕವಾಗಿದಾರೆ.. ಚೆನ್ನಾಗಿ ನಿದ್ದೆ ಬರುತ್ತೆ.. ನಿನಗೇ ನಿದ್ದೆ ಬರುಲ್ಲ. ಬೆಳಗಿನ ಹೊತ್ತು ಪರದಾಡ್ತೀಯ.. ರಾತ್ರಿಯ ಹೊತ್ತು ಹೊರಳಾಡ್ತೀಯ." ನಕ್ಕ.

"ಯಾಕತ್ತೆ! ಹುಶಾರಾಗಿದೀರಿ ತಾನೆ?..ಬಿ.ಪಿ., ಶುಗರ್ ಪರೀಕ್ಷೆ ಮಾಡಿಸ್ಕೊಂಡಿದೀರಾ!"

"ನೀನು ಡಾಕ್ಟರಾಗಿ ಬರಲಿ ಅಂತ ಅಮ್ಮ ಕಾಯ್ತಾ ಇದಾಳೆ.."

"ತಮಾಷೆ ಮಾಡ್ಬೇಡ ಭುಜಿ.. ಮೊದಲು ಅತ್ತೇನ ಡಾಕ್ಟರ ಹತ್ರ ಕರ್ಕೊಂಡು ಹೋಗು. ಅವರಿಗೂ ವಯಸ್ಸಾಗ್ತಾ ಇದೆ ಅಲ್ವಾ?"

"ಹೂಂ, ಕರ್ಕೊಂಡು ಹೋಗ್ತೀನಿ. ನಂಗೆ ಬಿಡುವಿದ್ದಾಗ, ಅಮ್ಮನ ಮನೆ ಕೆಲಸ ಮುಗಿದಿರುಲ್ಲ.. ಅವಳಿಗೆ ಬಿಡುವಿದ್ದಾಗ, ನಾನು ತೋಟಕ್ಕೆ ಹೋಗಿರ್ತೀನಿ.. ಅಮ್ಮ ನೀನ್ಯಾಕೆ ಅಪ್ಪನ ಜೊತೇಲಿ ಹೋಗಿ ಬರ್ಬಾರ್ದು?"

"ನಂಗೇನಾಗಿದೆ? ಸರಿಯಾಗಿದೀನಿ. ಸುಮ್ಮನೇ ತಲೆ ಕೆಡಿಸ್ತೀರಿ!.. ಅವಳು ಡಾಕ್ಟರಾಗೋಳು.. ಪ್ರತಿಯೊಂದಕ್ಕೂ ಟೆಸ್ಟ್ ಅಂತ ಅಂತಾಳೆ..ನೀನೂ ತಲೆ ಆಡಿಸ್ತೀಯ.."

"ಹಾಗೆನಿಲ್ಲ ಅತ್ತೆ, ನಿಮ್ಮ ಒಳ್ಳೇದಕ್ಕೇ ಹೇಳ್ದೆ ಅಷ್ಟೆ.. ಬೇಗ ಬೇಗ ಊಟ ಮಾಡು ಭುಜೀ.. ಹೊತ್ತಾಗುತ್ತೆ." ಇಬ್ಬರೂ ಎಲ್ಲಿಗೋ ಹೊರಟಿದ್ದಾರೆಂದು ಆಕೆ ಅರಿತಳು. ಆದರೆ, ಎಲ್ಲಿ ಅಂತ ಕೇಳಲಿಲ್ಲ. ಆಕೆ ಕರಿದ ತಿಂಡಿಯನ್ನು ತಟ್ಟೆಗೆ ಹಾಕಿ ಹೇಮಳಿಗೆ ತಂದುಕೊಟ್ಟಳು.

"ಕರಿದ ತಿಂಡಿಯನ್ನು ತಿನ್ನುಲ್ಲ ಅತ್ತೆ, ಮೈಗೆ ಒಳ್ಳೇದಲ್ಲ." ಭುಜಂಗ ಗೊಳ್ಳನೆ ನಕ್ಕ.

"ಕೇಳಿದ್ಯಾಮ್ಮಾ ಭಾವೀ ಡಾಕ್ಟರ ಮಾತನ್ನ..? ಕರಿದ ತಿಂಡಿ ಮೈಗೆ ಒಳ್ಳೇದಲ್ಲ, ಹೆಚ್ಚು ಖಾರ, ಉಪ್ಪು, ಸಾಂಬಾರ ಪದಾರ್ಥಗಳನ್ನು ತಿನ್ನಬಾರದು.. ವಾಕಿಂಗ್ ಹೋಗ್ಬೇಕು, ಹೆಚ್ಚು ನೀರು ಕುಡೀಬೇಕು.. ದಿನವೆಲ್ಲಾ ಹೇಳ್ತಾನೇ ಇರ್ತಾಳೆ..ಪಥ್ಯದ ಪಟ್ಟಿ.."

"ಅದನ್ನೆಲ್ಲ ಅವಳ ಕ್ಲಿನಿಕ್‌ಗೆ ಬರುವ ರೋಗಿಗಳಿಗೆ ಹೇಳಲಿ.. ನಾನು ಯಾವುದನ್ನೂ ಕೇಳ್ಬೇಕು ಅಂತೇನಿಲ್ಲ."

"ಬಿಡಿ ಅತ್ತೆ, ಇನ್ಮುಂದೆ ನಿಮಗೆ ಏನನ್ನೂ ಹೇಳುಲ್ಲ, ಹೊರಡೋಣ್ವಾ?"

"ಏನು ಅರ್ಜೆಂಟು ಮಾಡ್ತೀಯೋ? ಹೊಟ್ಟೆ ಭಾರ..."ಎಂದು ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡು ಸಿದ್ಧನಾದ. ಇಬ್ಬರೂ ಬೈಕನ್ನೇರಿದರು. ಭುಜಂಗನ ತಾಯಿ ಮುಂಬಾಗಿಲಿನಲ್ಲಿ ನಿಂತು, ಹೇಮಾಳ ಕಡೆ ನೋಡಿದಳು. ಮುಖ ಗಂಭೀರವಾಯಿತು.

* * *

"ನಾನು ನಾಳೆ ಬೆಳಿಗ್ಗೆ ಊರಿಗೆ ವಾಪಸ್ಸು ಹೋಗ್ತೀದೀನಿ." ತೋಟದಲ್ಲಿ ಮರದ ನೆರಳ ಕೆಳಗೆ ಇದ್ದ ಕಲ್ಲು ಬೆಂಚಿನ ಮೇಲೆ ಕೂರುತ್ತಾ ಹೇಮಾ ಹೇಳಿದಳು. ಭುಜಂಗ ಗೊಳ್ ಅಂತ ನಕ್ಕ.

"ಇದನ್ನ ಹೇಳೋಕೆ, ಅವಸರ ಮಾಡಿ ಕರ್ಕೊಂಡು ಬಂದ್ಯಾ? ಅಲ್ಲೇ ಹೇಳಿದ್ದರೆ, ಹಾಯಾಗಿ ಸ್ವಲ್ಪ ಹೊತ್ತು ಮಲಗಿರ್ತಿದ್ದೆ.."

"ಮಲಗೇ ಇರು ಮಾರಾಯ.. ನಿನಗೆ ಕೈ ತುಂಬಾ ಕೆಲಸ ಎಲ್ಲಿದೆ?"

"ಹೀಗೆಲ್ಲಾ ಹಂಗಿಸಿ ಮಾತಾಡ್ಬೇಡ.. ನಡೀ ವಾಪಸ್ಸು ಹೋಗೋಣ.."

"ನಾನು, ನಾಳೆ ವಾಪಸ್ಸು ಹೋದರೆ ಇನ್ನು ಎಷ್ಟೋ ತಿಂಗಳು ಬರುಕ್ಕೇ ಆಗುಲ್ಲ. ನನ್ನ ಮೇಲೆ ನಿನಗೆ ಬೇಸರಾನಾ ಭುಜೀ?"

"ಬೇಸರ?.. ಇದೇನು ಹೊಸದಲ್ಲವಲ್ಲ, ನೀನು ಮೆಡಿಕಲ್ ಕಾಲೇಜಿಗೆ ಸೇರಿದಾಗ್ನಿಂದ ಬದಲಾಗ್ತಾನೇ ಇದೀಯ. ನಿನಗೆ ಬೇಕಾದಾಗ ಬರ್ತೀಯ, ನಮಗೆ ಬೇಕಾದಾಗ ಹೋಗ್ತೀಯ.. ನಾನು ಗಮನಿಸ್ತಾನೇ ಇದೀನಿ.."

"ಇನ್ಮುಂದೆ ನಿನಗೆ ನಾನೂ ಬೇಡವಾಗಬಹುದು.."

"ನನಗೋ..ನಿನಗೋ..? ಏನಾದ್ರೂ ಮಾತ್ನಾಡೋಕೆ ನಿನಗೆಲ್ಲಿದೆ ಪುರುಸೊತ್ತು? ನನ್ನ ಬೇಸರವನ್ನು ಕೇಳೋರು ಯಾರು?.. ನಾನು ಒಂಟಿಯಾಗಿ ಕಾಲವನ್ನು ಹೇಗೆ ಕಳಿತಿದೀನಿ ಅಂತ ಎಂದಾದ್ರೂ ಯೋಚಿಸಿದೀಯ?"

"ನೀನೆಲ್ಲಿ ಒಂಟಿಯಾಗಿದೀಯ ಭುಜೀ.. ಪಲ್ಲವಿ ಸಿಕ್ಕಿದಾಳಲ್ಲ."

"ಪಲ್ಲವೀನಾ!.. ಕೆಲವು ದಿನಗಳ ಹಿಂದೆ ಬಂದಳು. ಕೆಲವು ದಿನಗಳ ನಂತರ ವಾಪಸ್ಸು ಹೊರಟು ಹೋಗ್ತಾಳೆ..."

"ಅವಳು ಹೋಗ್ದೇನೇ ಇದ್ರೆ!... ಅವಳ ಬಗ್ಗೆ ನಿಂಗೇನನ್ನಿಸುತ್ತೆ?"

"ಇದೆಂಥಾ ಪ್ರಶ್ನೆ? ನಿನ್ನ ಚಿಕ್ಕಮ್ಮ ಬಂದು ಕರ್ಕೊಂಡು ಹೋಗೋವರ್ಗೂ ಇಲ್ಲಿ ಇರ್ತಾಳೆ.. ಅಷ್ಟೇ.."

"ಅವಳು ಹೊರಟು ಹೋದ್ರೆ ನಿಂಗೆ ತುಂಬಾ ಬೇಸರವಾಗುತ್ತೆ ಅಲ್ವಾ ಭುಜೀ..?"

"ನಂಗ್ಯಾಕೆ ಬೇಸರವಾಗ್ಬೇಕು?.. ಅವಳು ನನಗೆ ಹೊರಗಿನವಳು.."

"ಆದರೂ, ನೀನು ಅವಳೊಡನೆ ಸಲುಗೆಯಿಂದ ಇದೀಯ. ಮೆಚ್ಚುಗೆಯಿಂದ ನೋಡ್ತೀಯ.. ನಾನು ಗಮನಿಸಿದೀನಿ...ಅದ್ಯಾಕೆ?"

"ನಿನ್ನ ಹೊಟ್ಟೆ ಉರಿಸೋಕೆ..." ಲಘು ಕೋಪವಾಗಿಯೇ ಹೇಳಿದ.

"ನನಗೆ ನಂಬಿಕೆ ಬರ್ತಿಲ್ಲಪ್ಪಾ." ಅಡ್ಡಡ್ಡ ತಲೆಯಾಡಿಸಿದಳು.

"ನಂಬಿದ್ರೆ ನಿಂಗೇ ಒಳ್ಳೇದು. ನಂಗೆ ಒಂಟಿ ಜೀವನ ಸಾಕೆನ್ನಿಸಿದೆ ಹೇಮಾ... ಮದುವೆಯಾಗಿ ಬಿಡೋಣ.. ನಂಗೆ ಕಾದೂ ಕಾದೂ ಬೇಸರವಾಗಿದೆ. ಸಾಕಾಗಿದೆ."

"ಹುಂ, ಮದುವೆಯಾಗಿ ಬಿಡೋಣ! ನನ್ನ ಎಜುಕೇಷನ್ ಮುಗೀಬೇಡ್ವಾ!.. ಅರ್ಧದಲ್ಲೇ ಬಿಟ್ಟು ಬರೋಕೆ ಖಂಡಿತಾ ಆಗುಲ್ಲ. ನನ್ನ ಗುರಿಯೇ ಬೇರೆ...ನಾನು ತುಂಬಾ ಓದಬೇಕು. ಹೆಸರನ್ನು ಗಳಿಸ್ಬೇಕು. ಸಂಶೋಧನೆ ಮಾಡ್ಬೇಕು. ನಾನು ಓದಿದ್ದು ಸಾರ್ಥಕವಾಗ್ಬೇಕು. ನನ್ನಿಂದ ನಾಲ್ಕು ಜನರಿಗೆ ಉಪಯೋಗವಾಗ್ಬೇಕು..."

"ಇಷ್ಟೆಲ್ಲಾ ನಿನ್ಕೈಲಿ ಆಗುತ್ತೇನೆ? ಅತ್ತೆ ಮಾವ ಒಪ್ತಾರಾ?"

"ಅವರೂ, ನೀನು ಎಲ್ಲರೂ ಒಪ್ಪಿದ್ರಿ ತಾನೇ.... ಈಗ್ಯಾಕೆ ಈ ಪ್ರಶ್ನೆ?"

"ನಾನು ತಪ್ಪು ಮಾಡಿದೆ ಅಂತ ಈಗ ಅನ್ನಿಸ್ತಿದೆ."

"ತಪ್ಪನ್ನು ಸರಿಪಡಿಸೋಣ ಭುಜೀ...ನೀನು ನಂಗೋಸ್ಕರ ಕಾಯಬೇಕಾಗಿಲ್ಲ.."

"ನಂಗೆ ಮದುವೆಗೆ ಅವಸರವಿಲ್ಲ. ಒಂದೊಂದ್ಸಾರಿ ಒಂಟಿತನ ಕಾಡುತ್ತೆ. ನಿಂಗೋಸ್ಕರ ಕಾಯ್ತೀನಿ...ನೀನ್ಯಾಕೆ ಹೀಗೆ ಮಾತಾಡ್ತೀಯ?"

"ಇಲ್ಲ ಭುಜೀ.. ನಾನು ಸರಿಯಾಗಿ ಯೋಚನೆ ಮಾಡಿಯೇ ಹೇಳ್ತೀದೀನಿ. ನೀನು ನಂಗೋಸ್ಕರ ಕಾಯುವುದರಲ್ಲಿ ಅರ್ಥವಿಲ್ಲ...ಒಂದು ವೇಳೆ ನಾವಿಬ್ರೂ ಮದುವೆಯಾದ್ರೂ, ನಿನಗೆ ನನ್ನಿಂದ ಸುಖವಿಲ್ಲ...ನೀನು ಬೇರೆ ಯಾರನ್ನಾದ್ರೂ ಮದುವೆ ಮಾಡ್ಕೋ...ಅದೇ ಸರಿ.."

"ಯಾಕೇ! ಡಾಕ್ಟರಾಗ್ತಿದೀನಿ ಅಂತ, ಆಗ್ಲೇ ಜಂಭ ಬಂದು ಬಿಡ್ತಾ?"

"ಜಂಭದ ಪ್ರಶ್ನೆ ಅಲ್ಲ ಭುಜಿ.. ನಾನು ಕ್ಲಿನಿಕ್ಕು, ಪೇಶೆಂಟ್ಸು, ಇಂಜೆಕ್ಷನ್ನು, ಪ್ರಿಸ್ಕ್ರಿಪ್ಷನ್ ಅಂತ ಮಾತನಾಡಿದ್ರೆ ನಿಂಗೇನು ಅರ್ಥವಾಗುತ್ತೆ? ಬೇಸರವಾಗ್ದೇ ಇರುತ್ತಾ?"

"ಸುತ್ತಿ ಬಳಸಿ ಯಾಕೆ ಮಾತಾಡ್ತೀಯಾ ಹೇಮಾ? ನಾನು ನಿನಗೆ ತಕ್ಕವನಲ್ಲ.. ನೀನು ಡಾಕ್ಟರ್ರು, ನಾನೊಬ್ಬ ರೈತ. ನನಗೂ ನಿನಗೂ ಅಸಮಾನತೆ.. ನಾನು ನಿನ್ನ ಪತಿಯಾಗಲು ಅರ್ಹನಲ್ಲ, ಹೌಧು ತಾನೇ?"

"ನಾನು ಹಾಗೆಲ್ಲಿ ಅಂದೆ?"

"ನೇರವಾಗಿ ಹೇಳಲಿಲ್ಲ, ಆದರೆ ಅರ್ಥ ಅದೇ. ನಿನ್ನ ಗಂಡನಾಗುವ ಅರ್ಹತೆ ನನಗಿಲ್ಲ.. ನಾನೂ ಒಪ್ತೀನಿ. ಆದರೆ, ಅತ್ತೆಗೆ ಮಾವಂಗೆ ಏನು ಹೇಳ್ತೀಯ.. ಅವರು ನನ್ನನ್ನೇ ಅಳಿಯ ಅಂತ ನಿರ್ಧರಿಸಿದಾರೆ."

"ಈಗ ನೀನೇ ನಂಗೆ ಸಹಾಯ ಮಾಡ್ಬೇಕು ಭುಜಿ.. ನೀನು ಅಮ್ಮನ ಹತ್ರ ಮಾತ್ನಾಡು. ನಂಗೆ ಹೇಮ ಇಷ್ಟವಿಲ್ಲ ಅಂತ ನೀನು ಹೇಳ್ಬೇಕು."

"ಸಾಧ್ಯವಿಲ್ಲ ಹೇಮ..ನಾನು ಸುಳ್ಳನ್ನು ಹೇಳ್ಲಾರೆ. ನಮ್ಮಿಬ್ಬರ ಮದುವೆ ನೆರವೇರದಿದ್ದರೂ ಸರಿ.."

"ಓ.. ನಾನು ನಿಂಗೆ ಹೇಗೆ ಹೇಳ್ಲಿ ಭುಜೀ..."

"ಸರಿ, ನಿನ್ನ ಸಮಸ್ಯೆ ಏನು? ಅದನ್ನಾದ್ರೂ ಹೇಳು."

"ನೀನು ಕೋಪ ಮಾಡ್ಕೋ ಬಾರ್ದು.. ನನ್ನ ಸೀನಿಯರ್ ಡಾಕ್ಟರ್ ಒಬ್ಬ ನನ್ನನ್ನ ಇಷ್ಟ ಪಟ್ಟಿದಾನೆ...ನಾನೂ ಸಹ..."

"ಅಂದರೇ? ಅವನು ಇಷ್ಟ ಪಟ್ಟ ಅಂತ...ಈ ಸಂಬಂಧವನ್ನು ಮುರೀತೀಯಾ?..."

"ಸಾರೀ ಭುಜೀ...ಏನೇನೋ ನಡೆದು ಹೋಯ್ತು...ನಿಂಗೆ ಹೇಗೆ ಹೇಳ್ಲಿ?.."

"ಅಂದರೇ.. ನಾನು ಇಲ್ಲಿ ನಿಂಗೋಸ್ಕರ ಪ್ರಾಮಾಣಿಕವಾಗಿ ಕಾಯ್ತಾ ಇದ್ರೆ, ನೀನು ನಂಗೆ ಮೋಸ ಮಾಡಿದ್ಯಾ?.."

"ಛೆ...ಏನೇನೋ ಅಂದ್ಕೋಬೇಡ ಭುಜೀ...ಮೋಸ ಏನೂ ಮಾಡಿಲ್ಲ...ಅವನು ನನ್ನನ್ನು ಮೆಚ್ಚಿದಾನೆ.. ನನಗೂ ಅವನೂ ಇಷ್ಟವಾಗಿದಾನೆ.." ಭುಜಂಗ ಅವಳಿಗೆ ಬೆನ್ನು ಮಾಡಿ ನಿಂತ.. "ನನ್ನ ಮಾತ್ನಿಂದ ನಿಂಗೆ ನೋವಾಗಿದೆ ಭುಜೀ.. ಆದರೆ ಈ ನಿಜವನ್ನು ನಿನಗಲ್ಲದೇ ಇನ್ಯಾರಿಗೆ ಹೇಳ್ಲಿ?.." ಅವಳು ಅವನ ಎದುರಿಗೆ ಬಂದು ನಿಂತು ಹೇಳಿದಳು.

"ಅವನು ಅವಳ ಭುಜವನ್ನು ಒತ್ತಿ ಹಿಡಿದ.." ಯಾಕೆ ಹೀಗೆ ಮಾಡ್ತೇ ಹೇಮಾ? ಅತ್ತೆಗೆ ಆಘಾತವಾಗುಲ್ವಾ? "ಅವರ ಬಗ್ಗೆ ಏನೂ ಅನ್ನಿಸಲಿಲ್ವಾ?"

"ಅವರಿಬ್ಬರಿಗೂ ನಿನ್ನನ್ನು ಕಂಡ್ರೆ ಭಾಳ ಅಭಿಮಾನ. ನೀನು ಅವರಿಬ್ಬರನ್ನೂ ಪ್ರೀತಿಯಿಂದ ನೋಡ್ಕೋಬೇಕು. ಇದು ನನ್ನ ಕೋರಿಕೆ."

"ಇದೊಳ್ಳೆ ಚೆನ್ನಾಗಿದೆ. ನೀನು ಅವರ ಸ್ವಂತ ಮಗಳು. ನಿನ್ನ ಮೇಲೆ ತುಂಬಾ ಆಸೆಯನ್ನು ಇಟ್ಕೊಂಡಿದಾರೆ. ನಿನ್ನ ಇಷ್ಟಕ್ಕೆ ಒಪ್ಪಿ, ನಿನ್ನನ್ನು ಮೆಡಿಕಲ್ ಕಾಲೇಜಿಗೆ ಕಳಿಸಿದರು. ಮಗಳು ತಮ್ಮೊಂದಿಗೇ ಇರಲಿ ಅನ್ನುವ ಆಸೆಗೆ, ನನ್ನನ್ನ ಅಳಿಯನನ್ನಾಗಿ ಆಯ್ಕೆ ಮಾಡಿದರು. ನೀನು ಅವರ ಆಸೆಗಳಿಗೆ ನೀರೆರಚ್ತಿದೀಯ. ಇದು ಸರಿಯಲ್ಲ. ನಿನಗೆ ನಾನು ಇಷ್ಟವಿಲ್ಲದಿದ್ರೆ ಬೇಡ. ನೀನು ಅವರಿಂದ ದೂರ ಹೋಗ್ಬೇಡ.."

"ನಾನು ಇಲ್ಲಿಗೆ ಬಂದು ಇರುಕ್ಕೆ ಆಗುಲ್ಲ ಭುಜೀ.. ಅರ್ಥ ಮಾಡ್ಕೋ..."

"ನಿನ್ನ ಸಮಸ್ಯೆ ನಂಗೆ ಅರ್ಥವಾಗುತ್ತೆ. ಅತ್ತೆಗೆ ಅರ್ಥವಾಗಬೇಕಲ್ಲ? ಹೇಗೂ ಇನ್ನೂ ಸಮಯವಿದೆಯಲ್ಲ...ಸಧ್ಯಕ್ಕೆ ಸುಮ್ಮನಿದ್ದು ಬಿಡೋಣ. ಅಷ್ಟರೊಳಗೆ ನಿನ್ನ ಮನಸ್ಸು ಬದಲಾದರೂ ಆಗಬಹುದು. ಹಾಗಾಗ್ಲಿ ಅಂತ ಹಾರೈಸ್ತೀನಿ."

"ಆ ಆಸೇನ ಇಟ್ಕೋಬೇಡ ಭುಜೀ. ನಾವಿಬ್ರೂ ಮದುವೆಯಾಗ್ಬೇಕು ಅಂತ ನಿರ್ಧರಿಸಿದೀವಿ. ಒಟ್ಟೊಟ್ಟಿಗೆ ಸುತ್ತಾಡ್ತಿದೀವಿ. ಇನ್ನು ನನ್ನ ಮನಸ್ಸು ಬದಲಾಗಲು ಸಾಧ್ಯವಿಲ್ಲ. ನನ್ನನ್ನು ಮರೆತು ಬೇರೆ ಯಾರನ್ನಾದ್ರೂ ಮದುವೆಯಾಗು."

"ಸಾಕು, ಸುಮ್ಮನಿರು...ನಿನ್ನ ಮಾತ್ನಿಂದ ನನ್ನ ಸಹನೆ ಮೀರ್ತಿದೆ.. ನೀನು ಹೀಗೆ ಬದಲಾಗ್ತೀಯ ಅಂತ ನಾನಂದುಕೊಂಡಿರ್ಲಿಲ್ಲ."

"ಹೌದು, ಬದಲಾಗಬೇಕಾಯ್ತು.. ಮಾನಸಿಕವಾಗಿ ಬಹಳ ಬದಲಾಗಿದೀನಿ.. ನಾನು ಮೊದಲಿನ ಹೇಮಳಾಗಲು ಸಾಧ್ಯವಿಲ್ಲ. ಒಂದಂತೂ ನಿಜ, ನಾನು ನಿನಗೆ ತಕ್ಕ ಪತ್ನಿಯಾಗ್ಲಾರೆ. ಅಪ್ಪ ಅಮ್ಮನಿಗೆ ತಕ್ಕ ಮಗಳಾಗ್ಲಾರೆ. ಅವರು ನನ್ನನ್ನು ದ್ವೇಷಿಸುವುದು ಖಂಡಿತಾ.." ಅವಳು ಉದ್ವೇಗಗೊಂಡಳು. ಇದುವರೆಗೆ ತಡೆದಿದ್ದ ಕಣ್ಣೀರು ತುಂಬಿ ಹರಿಯಿತು. ಅಳತೊಡಗಿದಳು. ಅವನು ಪೆಚ್ಚಾದ.

"ಅಳೋದ್ಯಾಕೇ ಹೇಮಾ! ನಾನು ಇಲ್ವಾ!....ನಿಂಗೆ ಹೇಗೆ ಇಷ್ಟನೋ ಹಾಗೇ ಮಾಡಿದ್ರಾಯ್ತು...ನಿಧಾನವಾಗಿ ಯೋಚಿಸೋಣ.."

"ನಂಗೆ ಮಾತು ಕೊಡು ಭುಜೀ.. ಅಪ್ಪನ್ನ ಅಮ್ಮನ್ನ ಚೆನ್ನಾಗಿ ನೋಡಿಕೊಳ್ತೀನಿ ಅಂತ. ಹಾಗೇ ನೀನು ನನ್ನನ್ನು ಮರೆತು ಬೇರೆ ಯಾರನ್ನಾದ್ರೂ ಮದುವೆಯಾಗ್ಲೇ ಬೇಕು. ಇಲ್ದಿದ್ರೆ ಜೀವಮಾನವೆಲ್ಲಾ ಅಪರಾಧಭಾವ ನನ್ನನ್ನು ಕಾಡುತ್ತೆ. ನನ್ನನ್ನು ಸುಖವಾಗಿರಲು ಬಿಡುವುದಿಲ್ಲ." ಎನ್ನುತ್ತಾ ಬಲವಂತವಾಗಿ ಅವನ ಬಲಗೈಯನ್ನು ತನ್ನ ಕೈಯೊಳಗೆ ತೆಗೆದುಕೊಂಡಳು.

"ನನಗೀಗ ಸಮಾಧಾನ ಆಯಿತು, ಭುಜೀ...ಹೃದಯ ಹಗುರ ಆಯಿತು.." ಅವನು ಉತ್ತರಿಸಲಿಲ್ಲ. ಮೌನವಾಗಿದ್ದ. ಅವನ ಹೃದಯ ಭಾರವಾಗಿತ್ತು.. ಅವನ ಗಂಭೀರವಾದ ಮುಖ, ಅವನ ಮನಃಸ್ಥಿತಿಯನ್ನು ಅರುಹಿತ್ತು. "ಯಾಕೋ ಇಷ್ಟು ಅಪ್ಸೆಟ್ ಆಗ್ತೀಯ.. ನನ್ನ ಕಾಟ ತಪ್ತು ಅಂತ ನಿರಾಳವಾಗಿರು" ಬಲವಂತದ ನಗೆಯನ್ನು ನಕ್ಕು ನುಡಿದಳು. ಅವನು ನಿಟ್ಟುಸಿರು ಬಿಟ್ಟ.

"ನಡೀ ವಾಪಸ್ಸು ಹೋಗೋಣ. ಬಂದು ತುಂಬಾ ಹೊತ್ತಾಯ್ತು." ಅವನು ಮುಂದೆ ಮುಂದೆ ಹೆಜ್ಜೆಯನ್ನು ಹಾಕಿದ. ಅವಳೂ ಮೌನವಾಗಿ ಅವನ ಹಿಂದೆ ಹಿಂದೆ ನಡೆದಳು.

* * *

ತನಗೆ ಮೋಸಮಾಡಿದ ರಾಜೀವನಿಗೆ ಪ್ರತಿಯಾಗಿ ಮೋಸಮಾಡಬೇಕು ಎಂಬ ಉದ್ದೇಶದಿಂದ ಶರತ್, ತನ್ನ ತಂಗಿ ಚೈತ್ರಳನ್ನು ಬಳಸಿಕೊಳ್ಳುತ್ತಾನೆ. ತನ್ನ ಅಣ್ಣನಿಗಾಗಿ, ತಾನು ಪ್ರೀತಿಸುವ ಚಿದಾನಂದನ ಸಹಕಾರದೊಂದಿಗೆ ರಾಜೀವನನ್ನು ಮದುವೆಯಾಗುವ ನಾಟಕವನ್ನಾಡುತ್ತಾಳೆ ಚೈತ್ರ.

ಆದರೆ, ಈ ಮಧ್ಯೆ, ತಾನು ಬಾಡಿಗೆ ತಾಯಿಗೆ ಹುಟ್ಟಿದ ಮಗಳು ಎನ್ನುವ ಸತ್ಯ ಅವಳನ್ನು ಬೆಚ್ಚಿಬೀಳಿಸುತ್ತದೆ. ತಾನು ಈ ಜಾಲದಿಂದ ಹೊರಗೆ ಹೋಗಬೇಕೆಂದು ನಿರ್ಧರಿಸುತ್ತಾಳೆ.

ಹೊಸ ಪರಿಸರದಲ್ಲಿ ನವ ಸಂಗಾತಿಯ ಆಕರ್ಷಣೆಯಲ್ಲಿ ಚೈತ್ರ, ಪಲ್ಲವಿಯಾಗಿ, ತನ್ನ ಜೀವನದ ಗತಿಯನ್ನೇ ಬದಲಾಯಿಸಿಕೊಳ್ಳುತ್ತಾಳೆ.....

ಚೈತ್ರ ಪ್ರಕಾಶನ
ನೆಲೆ, ನಂ. 22, 6ನೇ ಅಡ್ಡರಸ್ತೆ, ಕಾಮಾಕ್ಯ ಬಡಾವಣೆ
ಬೆಂಗಳೂರು– 560 085.

ಕಾದಂಬರಿ / Novel

ಬೆಲೆ : ₹ 110